# ಕಸ್ತೂರಿ

ಮೇ 1988 ರೂ. 3-00



ರಡಾಗುತ್ತಿರುವ
ನೇತ್ರಾವತಿ

ಪುಸ್ತಕ ವಿಭಾಗ
ಬದುಕಲು ಕಲಿಯಿರಿ

ಸ್ತನದ ಕ್ಯಾನ್ಸರ್

# ಕಸ್ತೂರಿ

## ಕನ್ನಡ ಡೈಜೆಸ್ಟ್



ವ್ಯವಸ್ಥಾಪಕ ಸಂಪಾದಕ:
ಕೆ. ಶಾಮರಾವ್

ಸಂಪಾದಕ:
ಆರ್.ಎ. ಉಪಾಧ್ಯ

ಸಹ ಸಂಪಾದಕ:
ಮಾಧವ ನಾ. ಮಹಿಷಿ

ಸಹಾಯಕ ಸಂಪಾದಕ:
ಎಸ್.ಕೆ. ಶಾಮಸುಂದರ

ಮುಖಪುಟ:
ಮಾನವತಾವಾದಿ ಬಸವಣ್ಣ
ಕಲಾವಿದ
ಬಸವರಾಜ ಮುಗಳಿ

## ಬೆಳಕಿಂಡಿ

● ಕುದುರೆಯಿಂದ ಒದೆಸಿಕೊಂಡರೂ ಯೋಗ್ಯ. ಆದರೆ ಕತ್ತೆಯನ್ನು ಹತ್ತುವುದು ತರವಲ್ಲ. (ವಿದ್ವಜ್ಜನರೊಡನೆ ವಾದ ಹೂಡಬಹುದು. ಮೂರ್ಖರೊಡನೆ ಗೆಳೆತನ ಸಲ್ಲ.)

- ಸಂಸ್ಕೃತ ಸುಭಾಷಿತ

● 'ತಜ್ಞ' ಎನಿಸಿಕೊಂಡಾತನಿಗೆ ಎಲ್ಲದಕ್ಕೂ ಉತ್ತರ ಗೊತ್ತಿದೆ ಎಂದೇನಲ್ಲ, ಆದರೆ ಸಾಕಷ್ಟು ರೊಕ್ಕ ಕೊಟ್ಟರೆ ಆತ ಎಂಥದಕ್ಕೂ ಉತ್ತರ ಹುಡುಕಬಲ್ಲ.

- ರೆಕ್ಸ್ ಫ್ಲೆಚರ್

● ತಪ್ಪನ್ನು ಒಪ್ಪಿಕೊಳ್ಳುವದೆಂದರೆ ಅದನ್ನು ಸರಿಪಡಿಸಿಕೊಳ್ಳುವುದೆಂದರ್ಥ ಎಂಬುದು ಬಹಳ ಜನಕ್ಕೆ ಗೊತ್ತಿಲ್ಲ.

- ಮೇರಿ ದಾನ್ ಎಬ್ನರ್-ಎಸೆನ್ ಬಾಕ್

● ಬಹಳ ಪ್ರಯತ್ನ ಪಟ್ಟು ಉಸುಕಿನಿಂದ ಎಣ್ಣೆ ತೆಗೆಯಬಹುದು. ನೀರಡಿಸಿದಾತ ಮೃಗಜಲದಲ್ಲಿ ನೀರು ಕುಡಿಯಬಹುದು. ಬಹಳ ಅಲೆದಾಡಿ ಕೊನೆಗೆ ಮೊಲದ ಕೋಡನ್ನೂ ಸಂಪಾದಿಸಬಹುದು. ಆದರೆ ತಲೆತಿರುಕ ಮೂರ್ಖರನ್ನು ಸ್ವತಃ ವಶ ಲಾಗದು.

- ನೀತಿ ಶತಕ

● ಬಾಳೆಂಬ ನಾಣ್ಯಕ್ಕೆ ಬೆಲೆ ಬರುವುದು ಅದರ ಮೇಲಿರುವ ಸಾವೆಂಬ ಮುದ್ರೆಯಿಂದಲೆ.

- ದಾರ್ಶನಿಕ

ಹೊಸ ಚಂದಾ ದರಗಳು:

| | | |
|---|---|---|
| ಬಿಡಿ ಸಂಚಿಕೆ | ... | 3=00 |
| 1 ವರ್ಷಕ್ಕೆ | ಅಂಚೆಸೇರಿ | 34=00 |
| 2 ವರ್ಷಕ್ಕೆ | ... | 65=00 |
| 3 ವರ್ಷಕ್ಕೆ | ... | 100=00 |

**KASTURI, MAY 1988**

ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ 1ನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳ 5ನೇ ದಿನಾಂಕದೊಳಗೆ ತಲುಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರ ವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಈ ಸಂಚಿಕೆಯಲ್ಲಿ



• ಪುಸ್ತಕ ವಿಭಾಗ •



## ಬೆಳಕಿಗೆ ಬರಲಿ

'ಫಪಿಲು ನೌಕೆಯ ಇನಾಂದಾರರು' (ಪುಸ್ತಕ ವಿಭಾಗ ಏಪ್ರಿಲ್ 88) ಪರಿಚಯಿಸಿಕೊಟ್ಟ 'ಸುಮನಾ' ಅವರು "ಪಿ.ಎಂ. ಇನಾಂದಾರರು ಚಾರ್ಲ್ಸ್ ಮಾರ್ಗನ್ನನ ಆರೂ ಕಾದಂಬರಿಗಳ ಇಂಗ್ಲೀಷ್ ಮಹಾಪ್ರಬಂಧವನ್ನು ರಚಿಸಿ ವಿಶ್ವ ವಿದ್ಯಾನಿಲಯಕ್ಕೆ ಒಪ್ಪಿಸಿದ್ದರು. ಅದುವರೆಗೂ ಅಂಥ ಪ್ರಬಂಧಗಳನ್ನು ಪ್ರಕಟಿಸುತ್ತಿದ್ದ ವಿಶ್ವ ವಿದ್ಯಾನಿಲಯ ಅದೇ ವರ್ಷ ಅದನ್ನು ನಿಲ್ಲಿಸಿ ಬಿಡಲು ನಿರ್ಣಯಿಸಿತು. ಹೀಗಾಗಿ ಇನಾಂದಾರರ ಪ್ರಬಂಧ ಬೆಳಕು ಕಾಣದೆ ಹಾಗೇ ಉಳಿಯಬೇಕಾಯಿತು" ಎಂದಿದ್ದಾರೆ.

ಈ ಕುರಿತು ನಾನು 24-3-88 ಹಾಗೂ 5-4-88ರಂದು ಬೆಂಗಳೂರು ವಿಶ್ವವಿದ್ಯಾನಿಲಯ ಪ್ರಸಾರಾಂಗದ ನಿರ್ದೇಶಕ ಡಾ॥ ಕೆ. ಮರುಳಸಿದ್ದಪ್ಪನವರನ್ನು ದೂರವಾಣಿ ಮೂಲಕ ಸಂಪರ್ಕಿಸಿದೆ. "ಇನಾಂದಾರರ ಯಾವ ಅಪ್ರಕಟಿತ ಹಸ್ತಪ್ರತಿಯೂ ನಮ್ಮಲ್ಲಿ ಇಲ್ಲ. ಅವರು ಅಪ್ರಕಟಿತ ಹಸ್ತಪ್ರತಿಗಳನ್ನು ಪಡೆದಿರುವ ಸಾಧ್ಯತೆಗಳಿವೆ" ಎಂದರು. ಇನಾಂದಾರರ ಆ ಅಪ್ರಕಟಿತ ಕೃತಿ ಈಗಲಾದರೂ ಪ್ರಕಟವಾಗಿ ಹೊರಬಂದರೆ ಒಳಿತು.

ಬೆಂಗಳೂರು — ಅಶೋಕ ಬುರ್ಲಿ

'ಕಿನ್ನರ ಲೋಕ ಬಾಲ್ಟಿಸ್ತಾನ' ಒಂದು ಸುಂದರ ಪ್ರವಾಸಕಥನ. ದೇಶ-ಜನ ಪರಿಚಯದ ಇಂಥ ಲೇಖನ 'ಕಸ್ತೂರಿ'ಯಲ್ಲಿ ಬಹಳ ದಿನಗಳ ಮೇಲೆ ಬಂತು. ಮತ್ತೆ ಮತ್ತೆ ಅಪರಿಚಿತ ದೇಶಗಳನ್ನು ನಮಗೆ 'ತೋರಿಸಿ.'

ಕಾರ್ಕಳ — ಎಂ. ಶಶಿಧರ

## ಮಾರ್ಮಿಕ

'ಯಾರಿವಳು?' ಕಥೆ (ಏಪ್ರಿಲ್ ಸಂಚಿಕೆ) ತುಂಬ ಮಾರ್ಮಿಕವಾಗಿದೆ. ಒಂದು ರೀತಿ ಒಂದು ಸಿನಿಮಾ ನೋಡುತ್ತಿದ್ದೇವೆಂಬ ಭಾವನೆ ಬರಿಸುತ್ತದೆ.

ಗದಗ — ಕೆ. ತುಳಸಿನಾಥ

ನೇತಾಜಿಯ ಅಂತ್ಯದ ಕುರಿತ ಪದ್ಮಾಣ ಪರಮೇಶ್ವರ ಭಟ್ಟರು ಬರೆದ ಲೇಖನದಲ್ಲಿ ವಿವರಗಳು ಸಾಲದು ಅನಿಸುತ್ತದೆ. ಕರ್ನಲ್ ರೆಹಮಾನ ಬದುಕಿದ್ದಾರೆಯೇ ಇಲ್ಲವೆ ಎಂಬುದಾಗಲಿ, ನೇತಾಜಿ ಯಾವ ಆಸ್ಪತ್ರೆಗೆ ಸೇರಿಸಲ್ಪಟ್ಟರು ಎಂಬ ಕುರಿತಾಗಲಿ ವಿವರಿಸಿಯೇ ಇಲ್ಲ. ಇನ್ನಷ್ಟು ಸಾಕ್ಷ್ಯಾಧಾರಗಳಿದ್ದಿದ್ದರೆ ಲೇಖನಕ್ಕೆ ಇನ್ನೂ ಕಳೆ ಬರುತ್ತಿತ್ತು.

ಉಗಾರಖುರ್ದ — ಎಸ್.ಕೆ. ಮಲಗೌಡನವರ

## ಕನ್ನಡ ಅಂಕಿ

'ಕಸ್ತೂರಿ' ಹೊಸ ವಿನ್ಯಾಸದಲ್ಲಿ ಬರುತ್ತಿರುವುದು ಸಂತೋಷವೆ. ಆದರೆ ಇದರಲ್ಲಿ ಬಳಸುತ್ತಿರುವ ಪುಟಸಂಖ್ಯೆ, ವರ್ಷ ಮತ್ತು ಲೇಖನಗಳಲ್ಲಿ ಬರುವ ಅಂಕಿಗಳೆಲ್ಲ ಇಂಗ್ಲೀಷಿನಲ್ಲೇಕೆ? ಹುಟ್ಟಿದಾರಭ್ಯ ಕನ್ನಡ ಅಂಕಿಗಳನ್ನೇ ಬಳಸುತ್ತ ಬಂದಿರುವ ಕಸ್ತೂರಿ ಮತ್ತೆ ಅವನ್ನೇ ಬಳಸಲಾರಂಭಿಸಿದರೆ ಕನ್ನಡ ಅಂಕಿಗಳನ್ನು ಮರೆಯುತ್ತಿರುವ ಈ ದಿನಗಳಲ್ಲಿ ಈ ಪೀಳಿಗೆಯವರಿಗೆ ತುಂಬ ಅನುಕೂಲ. ಇಲ್ಲದಿದ್ದರೆ ಇನ್ನು ಕೆಲವೇ ವರ್ಷಗಳಲ್ಲಿ ಕನ್ನಡದ ಅಂಕಿಗಳು ಹೇಳಹೆಸರಿಲ್ಲದಾಗಬಹುದು.

ಏಪ್ರಿಲ್ ಸಂಚಿಕೆಯ ಮುಖಪುಟದ ಪಾರ್ಶ್ವದಲ್ಲಿ ಸಂಚಿಕೆಯ ಸಂಖ್ಯೆ 379 ಎಂದಿದೆ. ಲೆಕ್ಕ ಹಾಕಿ ನೋಡಿದರೆ —ಅದು 380 ಆಗಬೇಕಿತ್ತು.

ಬೆಂಗಳೂರು — ಸಾ.ಅ. ಮಂಜುನಾಥ

### ತಪ್ಪು-ಒಪ್ಪು

ನನ್ನ ಲೇಖನ 'ಚಿತ್ರಮೂಲದ ಮೂಲ ಹುಡುಕಿ' (ಏಪ್ರಿಲ್ ಸಂಚಿಕೆ) ಪ್ರಕಟಿಸಿದ್ದಕ್ಕಾಗಿ ಧನ್ಯವಾದಗಳು. ಲೇಖನದಲ್ಲಿ ಚಿಕಿತ್ಸೆಯ ಬಗೆಗೆ ಬರೆಯುವಾಗ ಒಂದು ಸಣ್ಣ ತಪ್ಪಿದೆ. (14, 15 ಹಾಗೂ 16ನೆಯ ಸಾಲುಗಳು). ಅದನ್ನು ದಯವಿಟ್ಟು ಈ ಕೆಳಗಿನಂತೆ ಓದ ಬೇಕು.

**"ಪ್ರತಿನಿತ್ಯ ಬೆಳಿಗ್ಗೆ ಒಂದೊಂದು ಬಿಳಿ ಚಿತ್ರ ಮೂಲದ ಎಲೆಯನ್ನು ಬೆಣ್ಣೆಯಲ್ಲಿ ಅರೆದು ಖಾಲಿ ಹೊಟ್ಟೆಯಲ್ಲಿ ಐದು ದಿನಗಳ ಕಾಲ ತಿನ್ನಿಸುವುದು."**

ತಪ್ಪು ಚಿಕಿತ್ಸೆಯಿಂದ ಪ್ರಮಾದಗಳಾಗದಿರಲೆಂಬ ಉದ್ದೇಶದಿಂದ ಈ ತಿದ್ದುಪಡಿ.

ಕಾನಸೂರು ರಾಜೀವ ಅಜ್ಜೀಬಳ

### ಅಸಂಬದ್ಧ!

"ನಮ್ಮದು ನಾಮರಹಿತ ಪುರಾತನ ಸನಾತನ ಧರ್ಮ" (ಏಪ್ರಿಲ್ ಸಂಚಿಕೆ) ಮಠಾಧಿಪತಿಯೊಬ್ಬರ ಸಂಕುಚಿತ ದೃಷ್ಟಿಕೋನವನ್ನು ಬಿಂಬಿಸುವಂತಿತ್ತು. ಹಿಂದು ಧರ್ಮವು ಇಡೀ ಜಗತ್ತಿನಲ್ಲಿ ಹಿಂದೆ ಇತ್ತೆಂದು ವಾದಿಸುವುದು ಎಷ್ಟು ಅಸಂಬದ್ಧ!

'ಕಲಾ' ಎಂಬ ಶಬ್ದವು ಒಂದು ನಗರಕ್ಕೆ ಸಂಬಂಧಿಸಿದ್ದೆಂಬ ವಾದವೂ ಇದೆ. ಆರ್ಯಪೂರ್ವ ಕಾಲದ 'ಕಲ' ನಗರದ ಕಲೆಯನ್ನು ಇಲ್ಲಿಗೆ ಆಮದು ಮಾಡಿ ಅದನ್ನು ಕಲೆ ಎಂದು ಕರೆಯಲಾಯ್ತು. ಆದ್ದರಿಂದಲೇ ಹಲವರಿಗೆ ಈಚಿನತನಕವೂ ಕಲೆ ಎಂದರೆ ಅಶುದ್ಧ. ಹಿಂದು ಧರ್ಮವನ್ನು ಹೊಗಳುವ ಬದಲು ಮಾನವ ಧರ್ಮವನ್ನು ಹೊಗಳುವ ಲೇಖನಗಳು ಬರಲಿ.

ಹಾಲಾಡಿ ಶಶಿಧರ

ಏಪ್ರಿಲ್ ಸಂಚಿಕೆಯಲ್ಲಿ ಪ್ರಕಟವಾದ ಕೆಲವು ಲೇಖನಗಳಲ್ಲಿನ ದೋಷಗಳು ಹಾಗೂ ಸಂಶಯಗಳು:

1. 'ಆಂತರಿಕ ತಡೆ' (ಪುಟ 46)ಯಲ್ಲಿ ಹೌಡಿನಿ ಒಬ್ಬ ಪ್ರಸಿದ್ಧ ಮಂತ್ರವಾದಿ ಎಂದಿದೆ. ಆದರೆ ಆತ ಒಬ್ಬ ಐಂದ್ರಜಾಲಿಕ. ಇಂದ್ರಜಾಲಕ್ಕೂ ಮಂತ್ರವಾದಕ್ಕೂ ತುಂಬ ವ್ಯತ್ಯಾಸವಿದೆ.

2. 'ಕುರುಡರಾಗಿಯೂ ಬೆಳಕು ಕಂಡ ಡಾ॥ ಪರಮಶಿವಯ್ಯನವರು' (ಪುಟ 53)ರಲ್ಲಿ "ಪಾಠ ಹೇಳುವಾಗ ಅಗತ್ಯಬಿದ್ದರೆ ತಾವೇ ಚಿತ್ರ ಬಿಡಿಸಿ ತೋರಿಸುತ್ತಾರೆ" ಎಂದಿದೆ. ಹೇಗೆ ಸಾಧ್ಯ?

3. 'ನಮ್ಮದು ನಾಮರಹಿತ ಪುರಾತನ ಧರ್ಮ' (ಪುಟ 60)ದಲ್ಲಿ ಏನೆಲ್ಲ ಹೇಳುತ್ತ "ಸೂರ್ಯ ಮೇರುಪರ್ವತದ ಸುತ್ತ ಪರಿಭ್ರಮಿಸುತ್ತಾನೆ" ಎಂದಿದೆ. ಪ್ರಾಥಮಿಕ ಶಾಲೆಯ ಮಗುವಿಗೂ ಗೊತ್ತು ಅದು ತಪ್ಪು ಎಂದು.

ಪುಣೆ ಡಾ॥ ಗೋಪಾಲ ಕಾರ್ಕಳ

### ಹೀಗಿರಬೇಕಿತ್ತು

ನನ್ನ ಲೇಖನ 'ಅತಿವಾಹಕಗಳು' (ಮಾರ್ಚ್ ಸಂಚಿಕೆ)ದಲ್ಲಿ ಕೆಲವು ಮುದ್ರಣ ದೋಷಗಳಿಂದಾಗಿ ತಪ್ಪುಗಳಿವೆ:

1. ಏಳನೆ ಪುಟದಲ್ಲಿ ಕೊನೆಯ ಸಾಲಿನಲ್ಲಿ 'ಕೆಮರ್ಲಿಂಗ್ ಜಾನ್ಸ್' ಎಂದಿದೆ. ಅದು 'ಕೆಮರ್ಲಿಂಗ್ ಓನ್ಸ್' ಆಗಬೇಕಿತ್ತು.

2. ಎಂಟನೆ ಪುಟದಲ್ಲಿ 30ನೆ ಸಾಲಿನಿಂದ ಆರಂಭವಾಗುವ ವಾಕ್ಯದಲ್ಲಿ ಕೆಲವು ಪದಗಳು ಬಿಟ್ಟುಹೋಗಿವೆ..... "ತಂತಿಗಳ ಮೂಲಕ ವಿದ್ಯುತ್ಪ್ರವಾಹವು ಹರಿಯುವಾಗ ತಂತಿಯು ವಿದ್ಯುತ್ಪ್ರವಾಹಕ್ಕೆ....." ಎಂದಾಗಬೇಕಿತ್ತು.

3. ಹನ್ನೊಂದನೆ ಪುಟದ ಒಂಬತ್ತನೆಯ ಸಾಲಿನಲ್ಲಿ 'ಬಿಸಲಿರುವಾಗ' ಎಂದಿರುವುದು 'ಬಿಸಿಲಿರುವಾಗ' ಎಂದಾಗಬೇಕು.

ಮದ್ರಾಸ್ ಐ. ಪ್ರಿರಾಮ

### ಕನ್ನಡ ಲೇಖಕರ ವಿಳಾಸಗಳು

ಪಲವು ದಿಕ್ಕಿನಲ್ಲಿ ಹಬ್ಬುತ್ತಿರುವ ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕೃತಿರಚನೆ ಮಾಡುತ್ತಿರುವ ಎಲ್ಲ ಸಮಕಾಲೀನ ಕನ್ನಡ ಲೇಖಕರ ಹೆಸರು ವಿಳಾಸಗಳನ್ನು ಸಂಗ್ರಹಿಸಿ ಪುಸ್ತಕ ರೂಪದಲ್ಲಿ ಪ್ರಕಟಿಸಲು ಧಾರವಾಡದ ಸಂಕ್ರಮಣ ಪ್ರಕಾಶನ ಯೋಜನೆ ಹಾಕಿಕೊಂಡಿದೆ. ಅತ್ಯಂತ ಉಪಯುಕ್ತವಾದ ಈ ಯೋಜನೆಯ ವಿವರಗಳಿಗಾಗಿ "ಸಂಕ್ರಮಣ ಪ್ರಕಾಶನ, ಸಾಧನಕೇರಿ, ಧಾರವಾಡ-8" ಈ ವಿಳಾಸಕ್ಕೆ ಬರೆಯಬೇಕೆಂದು ಲೇಖಕರಲ್ಲಿ ಕೋರಲಾಗಿದೆ.

# ಕಸ್ತೂರಿ

ವರ್ಷ ೩೨ ಮೇ ೧೯೮೮ ಸಂಚಿಕೆ ೯

## ಶಿವಭಕ್ತರ ಶಿವಾಲಯ

● ಸ್ವಾಮಿ ಅಭಿರಾಮಾನಂದ ●

**ಪೂ**ಸಲನ್ ನಾಯನಾರರು ತಮಿಳುನಾಡಿನ ಮಹಾ ಶಿವಭಕ್ತರು. ಸಕಲಶಾಸ್ತ್ರ ಪಾರಂಗತರಾದ ಈ ಭಕ್ತರು ಆ ನಾಡಿನ ಸರ್ವ ಜನರಿಂದ ಗೌರವಾನ್ವಿತರಾಗಿದ್ದರು. ಶಿವಭಕ್ತರ ಸೇವೆಯೆಂದರೆ ಅವರಿಗೆ ಅತ್ಯಂತ ಪ್ರೀತಿ. ತನ್ನ ಅಲ್ಪ ಸಂಪಾದನೆಯನ್ನೆಲ್ಲ ಶಿವಭಕ್ತರಿಗೆ ದಾನ ನೀಡುವುದರಲ್ಲಿ ಸಂತೋಷಿಸುತ್ತಿದ್ದರು.

ಒಂದು ದಿನ ಅವರು ತಮ್ಮ ಹಳ್ಳಿಯಲ್ಲಿ ಶಿವಾಲಯ ನಿರ್ಮಿಸಬೇಕೆಂದು ಸಂಕಲ್ಪಿಸಿದರು. ಆದರೆ ವ್ಯವಹಾರರಂಗದಲ್ಲಿ ಪೂಸಲನ್ ನಾಯನಾರರು ಮುಗ್ಧರು. ದೇವಾಲಯ ನಿರ್ಮಾಣಕ್ಕೆ ಸುಲಭವಾಗಿ ಹಣವನ್ನು ಸಂಗ್ರಹಿಸಬಹುದೆಂದು ತಿಳಿದರು. ತಮ್ಮ ಪ್ರದೇಶದ ಶ್ರೀಮಂತರ ಬಳಿಗೆ ಹೋಗಿ ಶಿವಾಲಯ ನಿರ್ಮಾಣದ ವಿಚಾರ ಮಂಡಿಸಿದಾಗ ಎಲ್ಲರೂ ಮೆಚ್ಚಿಗೆ ಸೂಚಿಸಿದರು. ಆದರೆ ಕಾಣಿಕೆ ಕೇಳಿದಾಗ ಪ್ರತಿಯೊಬ್ಬರೂ ಮೆಲ್ಲಗೆ ಹಿಂದೆ ಸರಿದರು. ನಾಯನಾರರಿಗೆ ಏನು ಮಾಡಬೇಕೋ ತಿಳಿಯಲಿಲ್ಲ. ಶಿವಾಲಯ ನಿರ್ಮಿಸುವುದು ಹೇಗೆ? ತುಂಬಾ ಚಿಂತನೆ ಮಾಡಿದರು. ಕೊನೆಗೆ ಮನಸ್ಸಿನಲ್ಲಿಯೆ ಶಿವಾಲಯ ನಿರ್ಮಿಸಲು ನಿರ್ಧರಿಸಿದರು.

ತಮ್ಮ ಅದ್ಭುತವಾದ ಕಲ್ಪನಾಶಕ್ತಿಯಿಂದ ಕಟ್ಟಡಕ್ಕೆ ಬೇಕಾದ ಧನಸಂಗ್ರವನ್ನವರು ಮಾಡಿದರು. ದೇವಾಲಯಕ್ಕೆ ಬೇಕಾದ ಸಾಧನ ಸಲಕರಣೆಗಳನ್ನು ಕೊಂಡುಕೊಂಡರು. ಆಗಮಾನುಸಾರವಾಗಿ ದೇವಾಲಯದ ಬುನಾದಿ ಹಾಕಿ, ರಾತ್ರಿಯೆಲ್ಲಾ ದೇವಾಲಯುವನ್ನು ಅತ್ಯಂತ ಭಕ್ತಿಯಿಂದ ನಿರ್ಮಿಸತೊಡಗಿದರು.

ಕಲ್ಪನಾರಂಗದಲ್ಲಿಯೇ, ತಳಹದಿಯಿಂದ ಶಿಖರದವರೆಗೆ ಬೃಹದ್ದೇವಾಲಯ ನಿರ್ಮಾಣವಾಯಿತು. ಶಾಸ್ತ್ರಾನುಸಾರವಾದ ಎತ್ತರದ ಕಳಸವೂ ನಿರ್ಮಾಣಗೊಂಡಿತು. ಹೀಗೆ ಕಲ್ಪನಾಶಕ್ತಿಯಿಂದಲೇ ಅನೇಕ ದಿನಗಳವರೆಗೆ ಶ್ರಮಿಸಿ ದೇವಾಲಯುವನ್ನು ಪೂರ್ತಿಯಾಗಿ ನಿರ್ಮಿಸಲಾಯಿತು. ಅನಂತರ ಕಟ್ಟಡದ ಅಲಂಕರಣ ಕಾರ್ಯ ಪ್ರಾರಂಭಿಸಿ ಮುಗಿಸಿದರು. ದೇವಾಲಯಕ್ಕೆ ಅಗತ್ಯವಾದ ಪ್ರಾಕಾರವನ್ನೂ ಪುಷ್ಕರಣಿಯನ್ನೂ ಕಟ್ಟಿದರು.

ಈ ರೀತಿ ದೇವಾಲಯುವು ಸರ್ವಾಂಗಸುಂದರ

ವಾಗಿ ನಿರ್ಮಾಣಗೊಂಡ ನಂತರ ವಿಗ್ರಹ ಪ್ರತಿಷ್ಠಾಪನೆಯ ಮುಹೂರ್ತವನ್ನು ನಿರ್ಧರಿಸಿದರು. ಅದೇ ಕಾಲಕ್ಕೆ ಕಾಂಚೀಪುರದ ರಾಜನೂ ರಾಜ್ಯದ ಸಂಪತ್ತನ್ನೆಲ್ಲ ಬಳಸಿ ಶಿವನಿಗಾಗಿ ಭವ್ಯ ಶಿಲೆಯ ಕಟ್ಟಡವನ್ನು ನಿರ್ಮಿಸಿದ್ದನು. ಆ ಭವ್ಯ ದೇವಾಲಯದಲ್ಲಿ ವಿಗ್ರಹ ಪ್ರತಿಷ್ಠಾಪನೆಗಾಗಿ ರಾಜನು ಗೊತ್ತು ಮಾಡಿದ ಮುಹೂರ್ತವೂ ಪೂಸಲನ್ ನಾಯನಾರರು ತಮ್ಮ ಕಾಲ್ಪನಿಕ ದೇವಾಲಯದಲ್ಲಿ ಶಿವಪ್ರತಿಷ್ಠಾಪನೆಗಾಗಿ ಗೊತ್ತು ಮಾಡಿದ ಮುಹೂರ್ತವೂ ಒಂದೇ ಆಗಿದ್ದವು.

ರಾಜನು ಪ್ರತಿಷ್ಠಾಪನೆಗಾಗಿ ಭವ್ಯ ಉತ್ಸವವನ್ನು ಏರ್ಪಡಿಸಿದನು. ಎಲ್ಲ ವ್ಯವಸ್ಥೆಯನ್ನು ಸ್ವತಃ ನೋಡಿಬಂದನು. ಉತ್ಸವದ ವ್ಯವಸ್ಥೆ ಅತ್ಯುತ್ತಮವಾಗಿರುವುದನ್ನು ಕಂಡು ಸಂತೃಪ್ತಿಯಿಂದ ಮಲಗಿದನು. ನಾಳೆ ಬೆಳಗಾದರೆ ಪ್ರತಿಷ್ಠಾಪನೆಯ ಉತ್ಸವ! ಆ ಸಂತೋಷದಲ್ಲಿ ಗಾಢ ನಿದ್ರಾರಕ್ತನಾದಾಗ ಶಿವನು ಸ್ವಪ್ನದಲ್ಲಿ ಕಾಣಿಸಿಕೊಂಡು ಹೇಳಿದನು:

"ನನ್ನ ಪ್ರಿಯ ಭಕ್ತ ಪೂಸಲನ್ ನಾಯನಾರನು ಅತ್ಯಂತ ಲೋಕೋಪಕಾರಿಯಾದ ಶಿವಾಲಯವನ್ನು ನಿರ್ಮಿಸಿದ್ದಾನೆ. ನಾಳೆಯೇ ನನ್ನನ್ನು ಪ್ರತಿಷ್ಠಾಪಿಸಲಿದ್ದಾನೆ. ಆದ್ದರಿಂದ ನಿನ್ನ ಶಿವಾಲಯದ ವಿಗ್ರಹ ಪ್ರತಿಷ್ಠಾಪನೆಯ ಮುಹೂರ್ತವನ್ನು ಮುಂದಕ್ಕೆ ಹಾಕು."

ಮಹಾರಾಜನು ನಿದ್ರೆಯಿಂದ ಎಚ್ಚೆತ್ತು ಅದ್ಭುತವಾದ ಸ್ವಪ್ನದ ಬಗೆಗೇ ಚಿಂತಿಸಿದನು. ಪೂಸಲನ್ ನಾಯನಾರರನ್ನು ಕಂಡು ಪೂಜೆ ಸಲ್ಲಿಸಿ ಆತನು ನಿರ್ಮಿಸಿದ ದೇವಾಲಯವನ್ನು ಕಾಣಬೇಕೆಂದೂ ಅಲ್ಲಿ ಶಿವನನ್ನು ಪೂಜಿಸಬೇಕೆಂದೂ ಬಯಸಿದನು. ಪೂಸಲನ್‌ರ ಮನೆಗೆ ಬಂದು ಅವರಿಗೆ ಹೇಳಿ ಕಳಿಸಿದನು. ಅವರು ರಾಜನ ಬಳಿಗೆ ಬಂದಾಗ ರಾಜ ಕೇಳಿದನು:

"ನಿಮ್ಮ ಶಿವಾಲಯದಲ್ಲಿ, ಭಗವದನುಗ್ರಹದಿಂದ ನೀವಿಂದು ಪ್ರತಿಷ್ಠಾಪನಾ ಮುಹೂರ್ತ ಗೊತ್ತು ಮಾಡಿರುವಿರಂತೆ. ದಯವಿಟ್ಟು ನನಗೂ ನಿಮ್ಮ ಶಿವಾಲಯವನ್ನು ತೋರಿಸಿದರೆ ನಾನು ಶಿವಪೂಜೆಯಲ್ಲಿ ಭಾಗಿಯಾಗುತ್ತೇನೆ."

ಮಹಾಭಕ್ತ ಪೂಸಲನ್‌ರು ಆಶ್ಚರ್ಯದಿಂದ ರಾಜನ ಕಡೆಗೆ ನೋಡುತ್ತಾ ಹೇಳಿದರು:

"ಪರಮಾತ್ಮನು ನನ್ನ ದೇವಾಲಯದ ವಿಷಯ ನಿನಗೆ ಹೇಳುವುದು ಸರಿ ಎಂದು ಭಾವಿಸಿದ್ದರೆ ಕೇಳು" ಎನ್ನುತ್ತ ತಮ್ಮ ಮಾನಸಿಕ ದೇವಾಲಯ ನಿರ್ಮಿತಿಯ ಬಗೆಗೆ ತಿಳಿಸಿದರು.

ರಾಜನು ಈ ಅದ್ಭುತ ಕತೆ ಕೇಳಿ ಅತ್ಯಾಶ್ಚರ್ಯದಿಂದ ಉದ್ಗರಿಸಿದನು: "ಭಕ್ತರ ಮಹಿಮೆ ಏನು ಅದ್ಭುತ! ಧನವಿಲ್ಲವೆಂದು ಈ ಭಕ್ತರು ಮಾನಸಿಕವಾಗಿಯೇ ದೇವಾಲಯ ನಿರ್ಮಿಸಿದರು! ದಯಾಮಯನಾದ ಪರಮಾತ್ಮನು ಈ ಭಕ್ತ ಹೃದಯದ ದೇವಾಲಯದಲ್ಲಿ ಪ್ರತಿಷ್ಠಾಪಿತನಾಗಲು ಬಯಸಿದನಲ್ಲದೆ, ಜಗತ್ತಿನಲ್ಲಿಯೇ ಅತ್ಯಂತ ಹೆಚ್ಚಿನ ವೆಚ್ಚದಿಂದ ನಾನು ಕಟ್ಟಿಸಿದ ಭವ್ಯ ದೇವಾಲಯದಲ್ಲಿ ಪ್ರತಿಷ್ಠಾಪಿತನಾಗಲು ಮುಹೂರ್ತವನ್ನು ಮುಂದಕ್ಕೆ ಹಾಕಲು ಹೇಳಿದನು!"

ರಾಜನು ಪೂಸಲನ್ ನಾಯನಾರರಿಗೆ ಸಾಷ್ಟಾಂಗ ನಮಸ್ಕಾರ ಸಲ್ಲಿಸಿ ಭಕ್ತಿಭರಿತ ಹೃದಯದವನಾಗಿ ಅರಮನೆಗೆ ಹಿಂತಿರುಗಿದನು.

*

ಅನುವಾದ: ಸಾಕ್ಷಿ

('ಗ್ರಾಮ ಕ್ಷೇಮ' ಮಾಸಪತ್ರಿಕೆಯಿಂದ ಸಾಭಾರ)

ತನಗೆ ಮುನಿವವಂಗೆ ತಾ ಮುನಿಯಲೇಕಯ್ಯ?
ತನಗಾದ ಆಗೇನು ಅವರಿಗಾದ ಚೇಗೇನು?
ತನುವಿನ ಕೋಪ ತನ್ನ ಹಿರಿಯತನದ ಕೇಡು!
ಮನದ ಕೋಪ ತನ್ನ ಅರಿವಿನ ಕೇಡು!
ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ
ನೆರೆಮನೆಯ ಸುಡದು ಕೂಡಲ ಸಂಗಮದೇವ.

# ಬರಡಾಗುತ್ತಿರುವ ಸಹ್ಯಾದ್ರಿ

ಪಾಂಡುರಂಗ ಹೆಗಡೆ

ಭೂದಾನ ಆಂದೋಲನದ ಮೂಲಕ ಪಾದಯಾತ್ರೆಗೆ ಗೌರವದ ಸ್ಥಾನ ತಂದು ಕೊಟ್ಟವರು ವಿನೋಬಾ- 50ರ ದಶಕದಲ್ಲಿ. ಅಂದಿನಿಂದ ಅನೇಕರು ಪಾದಯಾತ್ರೆಯನ್ನು ಪ್ರಚಾರದ ಸಾಧನವಾಗಿ ಪರಿಣಾಮಕಾರಿಯಾಗಿ ಬಳಸಿಕೊಂಡಿದ್ದಾರೆ. ಆದರೆ ಪ್ರಸ್ತುತ ಲೇಖಕರ ಪಾದಯಾತ್ರೆಯು ಭಿನ್ನವಾಗಿರುವಂತೆ ವೈಶಿಷ್ಟ್ಯಪೂರ್ಣವೂ ಆಗಿದೆ. ನಾಡಿನ ಪರಿಸರದ ಸಮತೋಲಕ್ಕೇ ಕೊಡಲಿಯೇಟು ಹಾಕುತ್ತಿರುವ ಮನುಷ್ಯನ ದುರಾಸೆಗೆ ಕನ್ನಡಿ ಹಿಡಿದು ತೋರುವುದು ಅವರ ಉದ್ದೇಶ. ಸಹ್ಯಾದ್ರಿಯ ಅರಣ್ಯ ನಾಶದಿಂದ ಉಂಟಾಗುತ್ತಿರುವ, ಉಂಟಾಗಲಿರುವ ಗಂಭೀರ ಅಪಾಯದ ಮುನ್ನೆಚ್ಚರಿಕೆ ಇಲ್ಲಿದೆ.

ಪುಷ್ಪಗಿರಿಯ ದೇವಸ್ಥಾನದಿಂದ ಕುಮಾರ ಪರ್ವತದೆಡೆಗೆ ಹೊರಟಾಗ ಮುಂಜಾನೆಯ ಮಂಜು ಇನ್ನೂ ದಟ್ಟವಾಗಿತ್ತು. ಪುಷ್ಪಗಿರಿಯಿಂದ ನಮಗೆ ದಾರಿ ತೋರಿಸಲು ಜೊತೆಗೆ ಬಂದಿದ್ದ ಪೂವಯ್ಯ ಮತ್ತು ನಿಂಗಪ್ಪ ಕಾಡಿನ ಮಧ್ಯ ಇರುವ ಕಾಲು ದಾರಿಯಲ್ಲಿ ಮುಂದೆ ಸಾಗುತ್ತಿದ್ದರು. ಸಣ್ಣದಾಗಿ ಹರಿಯುತ್ತಿದ್ದ ಹಳ್ಳಗಳನ್ನು ದಾಟಿ ಏಲಕ್ಕಿ ಮಲೆಯನ್ನು ಪ್ರವೇಶಿಸಿದೆವು. ಪೂವಯ್ಯ ತನ್ನ ಏಲಕ್ಕಿ ಮಲೆಯ ಇಳವರಿ ಹೇಗೆ ಕಡಿಮೆ ಆಗಿದೆ ಎಂಬುದನ್ನು ವಿವರಿಸುತ್ತಿದ್ದ. ಏಲಕ್ಕಿ ಮಲೆಗಳನ್ನು ದಾಟಿ ದಟ್ಟವಾದ ಕಾಡನ್ನು ಪ್ರವೇಶಿಸಿದಾಗ ಆಕಾಶದೆಡೆಗೆ ತಲೆ ಎತ್ತಿನಿಂತ ದೊಡ್ಡ ಮರಗಳ ಎಡೆಯಲ್ಲಿ ದಾರಿ ಮಾಡಿಕೊಂಡು ಮುನ್ನಡೆಯುತ್ತಿದ್ದೆವು. ಜೊತೆಗೆ ಬಂದಿದ್ದ ನಿಂಗಪ್ಪನವರಿಗೆ ಕೆಲವು ಕಡೆ ದಾರಿ ತಪ್ಪುತ್ತಿತ್ತು. ನಾವು ನೀರಿನ ತೊರೆಯೊಂದರ ಹತ್ತಿರ ತಲಪಿದಾಗ ಆ ಹಳ್ಳದ ತಂಪಾದ ನೀರನ್ನು ಕುಡಿದು ವಿಶ್ರಾಂತಿ ಪಡೆಯಲು ಮರದ ಕೆಳಗೆ ಕುಳಿತುಕೊಂಡೆವು. ಪೂವಯ್ಯ "ಈ ಹೊಳೆಯನ್ನು ನಾವು 'ಲಿಂಗದ ಹೊಳೆ' ಎಂದು ಕರೆಯುತ್ತೇವೆ. ಇದರ ನೀರು ಅಮೃತವಿದ್ದ ಹಾಗೆ. ಈ ಹಳ್ಳ ಮುಂದೆ ಕುಮಾರಧಾರೆಗೆ ಹೋಗಿ ಸೇರುತ್ತದೆ" ಎಂದು ಹೇಳಿದ. ನಾವು ನೇತ್ರಾವತಿಯ ಉಪನದಿಗಳಲ್ಲಿ ಒಂದಾಗಿರುವ ಕುಮಾರಧಾರೆಯು ಹುಟ್ಟುವ ಕ್ಷೇತ್ರದಲ್ಲಿದ್ದೆವು. ಈ ಕ್ಷೇತ್ರವನ್ನು ಜಲಾನಯನ ಕ್ಷೇತ್ರ ಎಂದು (Catchment area) ಕರೆಯುತ್ತಾರೆ. ಲಿಂಗದ ಹೊಳೆಯ ನೀರಿನ ಸವಿಯನ್ನು ನೆನೆದು ಹಳ್ಳದ ಬದಿಯಿಂದ ಎದ್ದು ನಿಂತಾಗ ಕಾಲಿಗೆ ಉಂಬಳ ಹತ್ತಿಕೊಂಡು ರಕ್ತ ಹೀರುತ್ತಿದ್ದವು. ಮಳೆಗಾಲ ಮುಗಿದು ಶಿವರಾತ್ರಿಯ ಹತ್ತಿರ ಈ ಅಡವಿಯಲ್ಲಿ ಉಂಬಳದ ಉಪಟಳ.

ನದಿಮೂಲಗಳ ಉಳಿವಿಗಾಗಿ ಆರಂಭಿಸಿದ್ದ ಅಪ್ಪಿಕೋ ಪಾದಯಾತ್ರೆಯಲ್ಲಿ ಕೊಡಗಿನ ಕಾವೇರಿ ಜಲಾನಯನ ಪ್ರದೇಶವನ್ನು ನೋಡಿ ಈಗ ನೇತ್ರಾವತಿಯ ಜಲಾನಯನ ಪ್ರದೇಶವನ್ನು ಪ್ರವೇಶಿಸಿದ್ದೆವು.

ನೇತ್ರಾವತಿ ನದಿಯು ದಕ್ಷಿಣ ಕನ್ನಡ ಜಿಲ್ಲೆಯ ಜೀವನಾಡಿ. ನೇತ್ರಾವತಿಯ ಉಪನದಿಗಳಲ್ಲಿ ಮಹತ್ವದ್ದು ಕುಮಾರಧಾರಾ ಕೆಂಪುಹೊಳೆ (ಶಿರಾಡಿ ಘಾಟಿಯ ಹತ್ತಿರ) ಶಿಶಿಲಾ, ನೆರಿಯಾ, ಮೃತ್ಯುಂಜಯ (ಚಾರ್ಮಾಡಿಯಿಂದ ಉಗಮ) ಮತ್ತು ಕುದುರೆ ಮುಖದ ಹತ್ತಿರ ಗಂಗಾ ಮೂಲದಲ್ಲಿ ಉಗಮಿಸುವ ನೇತ್ರಾವತಿ. ಪಶ್ಚಿಮಘಟ್ಟದ ಕಡಿದಾದ ಸದಾ ಹಸಿರು ಅರಣ್ಯ ಪ್ರದೇಶದಲ್ಲಿ ಜನಿಸಿರುವ ಈ ನದಿಗಳು ಒಂದಾಗಿ ಬೃಹತ್ ರೂಪತಾಳಿ ನೇತ್ರಾವತಿ ನದಿಯಾಗಿ ಹರಿಯುತ್ತದೆ.

ಪಶ್ಚಿಮಘಟ್ಟವನ್ನು ಇಳಿದು ಬಂದ ಈ ನದಿಗಳು ಗುಡ್ಡಗಾಡಿನ ಕಣಿವೆಗಳಲ್ಲಿರುವ ಅಡಿಕೆ, ತೆಂಗಿನ ತೋಟಕ್ಕೆ ನೀರನ್ನು ಉಣಿಸುತ್ತವೆ. ಜೊತೆಗೆ ಹೊಲದಲ್ಲಿ ಬತ್ತದ ಎರಡು ಫಸಲನ್ನು ಬೆಳೆಯಲು ನೀರಾವರಿಯನ್ನು ಒದಗಿಸುತ್ತವೆ. ಕರಾವಳೀ ತೀರವನ್ನು ಸಮೀಪಿಸಿದ ಹಾಗೆ ಈ ಉಪನದಿಗಳೆಲ್ಲ ಒಂದಾಗಿ ಬೃಹತ್ ರೂಪತಾಳಿ ಚಿಕ್ಕ ಪಟ್ಟಣಗಳಿಂದ ಹಿಡಿದು ಮಂಗಳೂರು ಶಹರಕ್ಕೂ ಕುಡಿಯುವ ನೀರನ್ನು ನೇತ್ರಾವತಿಯು ಕೊಡುತ್ತಿದೆ. ಮಂಗಳೂರಿನ ಹತ್ತಿರ ಸ್ಥಾಪಿಸಲಾಗಿರುವ ಬೃಹತ್ ಉದ್ದಿಮೆಗಳಿಗೆ ಸಿಹಿನೀರನ್ನು ನೇತ್ರಾವತಿ ಪೂರೈಸುತ್ತದೆ. ಕೊನೆಯದಾಗಿ ನೇತ್ರಾವತಿಯು ಸಮುದ್ರದಲ್ಲಿ ಜೀವಿಸುವ ಮೀನಿನ ಅಭಿವೃದ್ಧಿಗೆ ಸಹಾಯ ಮಾಡಿ ಅಂಬಿಗರ ಅಭ್ಯುದಯಕ್ಕೆ ಆಧಾರವಾಗಿದೆ. ನೇತ್ರಾವತಿಯು ತನ್ನ ಪ್ರವಾಹದಲ್ಲಿ ತೇಲಿಸಿಕೊಂಡು ಬಂದ ಗೊಬ್ಬಿನ ಪದಾರ್ಥಗಳು ಒಳ್ಳೆಯ ಮೀನು ತಯಾರಿಕೆಗೆ ಅತಿ ಅವಶ್ಯಕವಾಗಿವೆ. ತನ್ನ ಹುಟ್ಟಿನಿಂದ ಸಮುದ್ರ ಸೇರುವವರೆಗೆ ಜನರ ಜೀವನಕ್ಕೆ ಆಧಾರವನ್ನೊದಗಿಸುವ ನೇತ್ರಾವತಿಯನ್ನು ನಾವು ದಕ್ಷಿಣ ಕನ್ನಡದ ಜೀವನಾಡಿ ಎಂದು ಕರೆಯುವುದು ಸಮಂಜಸವಲ್ಲವೆ?

ಸಹ್ಯಾದ್ರಿಯ ಸದಾಹಸಿರು ಕಾಡು ನೇತ್ರಾವತಿ ನದಿಯ ತಾಯಿ. ನದಿಯ ಆರೋಗ್ಯ ಸರಿಯಾಗಿರಬೇಕಾದಲ್ಲಿ ತಾಯಿಯ (ಕಾಡಿನ) ಸ್ಥಿತಿ ಚೆನ್ನಾಗಿರಬೇಕು. ನದಿಯ ಜಲಾನಯನ ಪ್ರದೇಶದ ಸ್ಥಿತಿಗತಿಯನ್ನು ಅರಿಯಲು ನಾವು ಅಪ್ಪಿಕೋ ಪಾದಯಾತ್ರೆಯ ಸಂದರ್ಭದಲ್ಲಿ ನೇತ್ರಾವತಿಯ ಉಪನದಿಗಳ ದಡದಲ್ಲಿ 140 ಕಿ.ಮೀ. ಕಾಲ್ನಡಿಗೆಯಲ್ಲಿ ಕ್ರಮಿಸಿದೆವು. ಕುಮಾರಧಾರೆ ಉಗಮಿಸುವ ಕುಮಾರಪರ್ವತದಿಂದ ಇಳಿದು ಸುಬ್ರಹ್ಮಣ್ಯ ತಲಪಿದೆವು.

ಸುಬ್ರಹ್ಮಣ್ಯದಿಂದ ಶಿರಾಡಿ ಘಾಟಿಯ ಕೆಂಪು ಹೊಳೆ ಕ್ಷೇತ್ರಕ್ಕೆ ಗುಂಡ್ಯದ ಮೂಲಕ ತಲಪಿದೆವು. ಗುಂಡ್ಯದಿಂದ ಶೇಬಾಜೆ, ಅರಸಿನ ಮಕ್ಕಿಯ ಹತ್ತಿರ ಶಿಶಿಲಾ ನದಿಯನ್ನು ದಾಟಿದೆವು. ಅಲ್ಲಿಂದ ನೆರಿಯಾ, ಚಾರ್ಮಾಡಿ ತಲಪಿ ಮುಂಡಾಜೆ, ದಿಡುಪೆ ಮೂಲಕ ಕುದುರೆಮುಖ ಶಿಖರವನ್ನು ಮುಟ್ಟಿದೆವು.

**ಕುಮಾರಧಾರೆ:** ಸುಬ್ರಹ್ಮಣ್ಯದ ಹತ್ತಿರ ಹರಿಯುವ ಕುಮಾರಧಾರೆಯು ಕೊಡಗಿನ ಸೋಮವಾರಪೇಟೆ ತಾಲ್ಲೂಕಿನಲ್ಲಿ ಉಗಮಿಸುತ್ತದೆ. ಕುಮಾರಧಾರೆಯ ಪಕ್ಕದಲ್ಲಿರುವ ಅರಣ್ಯಕ್ಷೇತ್ರ ತೀವ್ರಗತಿಯಲ್ಲಿ ನಾಶವಾಗುತ್ತಿದೆ. ಉದಾಹರಣೆಗಾಗಿ ಕುಂದಳ್ಳಿಯ ಹತ್ತಿರ ಕಡಿದಾದ ಗುಡ್ಡದ ಮೇಲಿನ ಅರಣ್ಯ ಮಾಯವಾಗಿ ಕಲ್ಲುಗಳು ಗೋಚರವಾಗತೊಡಗಿವೆ. ಈ ನದಿಯ ಇಕ್ಕೆಲಗಳಲ್ಲಿರುವ ಏಲಕ್ಕಿ ತೋಟದ ಮಾಲಿಕರೂ ಮಾರುಕಟ್ಟೆಯಲ್ಲಿ ಏಲಕ್ಕಿ ಬೆಳೆ ಕಡಿಮೆಯಾಗಿರುವುದರಿಂದ ಗಿಡಗಳನ್ನು ಕಡಿದು ಮಾರಾಟಮಾಡಿ ಹಣಗಳಿಸಲು ಆರಂಭಿಸಿದ್ದಾರೆ. ಕುಮಾರಧಾರೆಗೆ ನೀರನ್ನು ಒದಗಿಸುವ ಚಿಕ್ಕಮಗಳೂರು, ಹಾಸನ ಜಿಲ್ಲೆಯ ಅರಣ್ಯಗಳಲ್ಲಿ ನಿರಂತರವಾಗಿ ಹಸಿರು ಮರಗಳ ನಾಶ ನಡೆಯುತ್ತಲಿದೆ. ಕುಮಾರಪರ್ವತದ ಹತ್ತಿರದಲ್ಲಿರುವ ಲಿಂಗದಹೊಳೆಯ ಕ್ಷೇತ್ರದಲ್ಲಿ ಅರಣ್ಯದ ಸ್ಥಿತಿ ಉತ್ತಮವಾಗಿದೆ. ಆದರೆ ಪ್ರತಿವರ್ಷ ಬೆಂಕಿಯಿಂದಾಗಿ ಈ ಅರಣ್ಯವೂ ನಾಶವಾಗುವ ಸಂಭವ ಹೆಚ್ಚಾಗಿದೆ. ಸುಬ್ರಹ್ಮಣ್ಯ ದೇವಸ್ಥಾನದ ಹತ್ತಿರದಿಂದ ಕಾಣುವ ಅರಣ್ಯ ಸಹ ದಟ್ಟವಾಗಿದ್ದು, ಕುಮಾರಧಾರೆಗೆ ಆಧಾರವಾಗಿದೆ. ಒಟ್ಟಾರೆ ಕುಮಾರಧಾರೆ ಹಾಸನ, ಚಿಕ್ಕಮಗಳೂರು ಮತ್ತು ಕೊಡಗು ಜಿಲ್ಲೆಗಳಲ್ಲಿ ವಿನಾಶದ ಅಂಚನ್ನು ತಲುಪಿದೆ.

**ಕೆಂಪು ಹೊಳೆ:** ಸುಬ್ರಹ್ಮಣ್ಯದಿಂದ ಗುಂಡ್ಯಕ್ಕೆ ಬರುವಾಗ ದಾರಿಯಲ್ಲಿ ಕೊಂಬಾರ ಸುರಕ್ಷಿತ ಅರಣ್ಯ ಎಂಬ ಫಲಕವನ್ನು ಕಂಡೆವು. ಆದರೆ ಈ ಸುರಕ್ಷಿತ ಅರಣ್ಯದಲ್ಲಿ ದಟ್ಟವಾದ ನೈಸರ್ಗಿಕ ಕಾಡಿರಬೇಕಾದ ಸ್ಥಳದ ಒಂದೇ ಜಾತಿಯ ಗಾಳಿ ಗಿಡವ ನೆಡುತೋಪು ಕಂಡುಬರುತ್ತಿತ್ತು. ಇದೇ ಕೊಂಬಾರ ಕ್ಷೇತ್ರದಲ್ಲಿ ಸದಾ ಹಸಿರುಕಾಡಿನ ಕೆಳಗಿನ ಹಂತದ ಗಿಡಗಳನ್ನು ಕಡಿದು ಕೋಕೋ



ಬೆಳೆಯುವ ಸರಕಾರದ ವಿಫಲ ಪ್ರಯತ್ನವನ್ನು ಕಂಡೆವು. ಗಾಳಿ ಗಿಡಗಳ ನೆಡು ತೋಪು ಮತ್ತು ಸದಾ ಹಸಿರು ಕಾಡಿನಲ್ಲಿ ಕೆಳಮಟ್ಟದ ಗಿಡಗಳನ್ನು ಕಡಿದು ಕೋಕೋ ನೆಡುವ ಕಾರ್ಯ ಭೂಮಿಯ ತೇವಾಂಶವನ್ನು ಹಿಡಿದಿಟ್ಟುಕೊಳ್ಳುವ ಕ್ರಿಯೆಗೆ ಧಕ್ಕೆಯನ್ನುಂಟುಮಾಡುತ್ತಿದೆ.

ಶಿರಾಡಿ ಘಾಟಿಯ ಹತ್ತಿರ ಕೆಂಪು ಹೊಳೆಯ ಜಲಾನಯನ ಪ್ರದೇಶದ ಪರಿಸ್ಥಿತಿ ನಿಜವಾಗಿಯೂ ದಂಗು ಬಡಿಸುವಂತಹದು. ನಾವು ಕೇರಳಕ್ಕೆ ಬಂದಿರಬೇಕೆಂದು ಅನಿಸತೊಡಗಿತು. ಕೇರಳೀಯರು ದೊಡ್ಡ ಪ್ರಮಾಣದಲ್ಲಿ ಇಲ್ಲಿ ನೆಲಸಿ ದಟ್ಟವಾಗಿದ್ದ ಅರಣ್ಯವನ್ನು ಕಡಿದು ರಬ್ಬರ ನೆಡುತೋಪನ್ನು ಸೃಷ್ಟಿಸಿದ್ದಾರೆ. ನಿಜಲಿಂಗಪ್ಪನವರು ಮುಖ್ಯಮಂತ್ರಿಗಳಾಗಿದ್ದ ಕಾಲದಲ್ಲಿ ಇಲ್ಲಿ ಬಂದು ಕರ್ನಾಟಕದ ಅರಣ್ಯ ಅತಿಕ್ರಮಿಸಿದ ಕೇರಳೀಯರು ರಾಜಕೀಯವಾಗಿ ಬಹಳ ಪ್ರಭಾವಶಾಲಿಗಳು. ರಾಜ್ಯ ಸರಕಾರವು ಇವರನ್ನು ಅತಿಕ್ರಮಣ ಮಾಡಿದ ಪ್ರದೇಶದಿಂದ ಎಬ್ಬಿಸಬೇಕೆಂಬ ಆದೇಶವನ್ನು ಆಗ ನೆಹರೂ ಸಂಪುಟದಿಂದ ಸಚಿವರಾಗಿದ್ದ ಮಹಾಬಿಮವರ ಮೂಲಕ ನಿಷ್ಕ್ರಿಯಗೊಳಿಸಿದರು. ಅಂದಿನಿಂದ ಬಂದಿರುವ ಕೇರಳೀಯರು ಅಪ್ಪನ

# ಮರೆಯಲಾಗದ ಅನುಭವ!

ಅಪ್ಪಿಕೋ ಪಾದಯಾತ್ರೆಯ ಸಂದರ್ಭದಲ್ಲಿ ಹಲವಾರು ಇಕ್ಕಟ್ಟಿನ ಪ್ರಸಂಗಗಳನ್ನು ಎದುರಿಸ ಬೇಕಾಗಿ ಬಂತು. ಆ ಅನುಭವಗಳ ಕೆಲ ತುಣುಕುಗಳು:

ಶೇಬಾಜೆ ಬೆಳ್ತಂಗಡಿ ತಾಲ್ಲೂಕಿನ ಒಳಹಳ್ಳಿ. ನಾವು ಶೇಬಾಜೆ ತಲುಪುತ್ತಿರುವಾಗ ಸಂಜೆಯಾಗಿತ್ತು. ದಾರಿಯಲ್ಲಿ ಶಾಲೆಯಿಂದ ಮರಳುತ್ತಿದ್ದ ಶಾಲಾ ಮಕ್ಕಳು ನಮ್ಮ ಬೆನ್ನು ಚೀಲ ತಲೆಯ ವಸ್ತ್ರವನ್ನು ನೋಡಿ ಹೆದರಿ ಓಡತೊಡಗಿದರು. ಸಧಾನವಾಗಿ ಅವರನ್ನು ರಮಿಸಿ, ನಾವಾರೆಂದು ತಿಳಿಸಿ ದೋಸ್ತಿ ಮಾಡಿದೆವು. ಆಗ ಮಕ್ಕಳ ಗುಂಪೇ ನಮ್ಮ ಜೊತೆಗಿತ್ತು.

ಶೇಬಾಜೆ ತಲುಪಿದಾಗ ನಮಗೆ 40 ಕಿಲೋಮೀಟರ್ ದೂರ ನಡೆದು ಅತೀವ ದಣಿವಾಗಿತ್ತು. ಯಾರ ಪರಿಚಯವೂ ಇರಲಿಲ್ಲ. ಅಲ್ಲಿರುವ ಪ್ರಸಿದ್ಧ ದೇವಸ್ಥಾನದಲ್ಲಿ ಮಲಗಿ ರಾತ್ರಿ ಕಳೆದರಾಯಿತೆಂದು ದೇವಸ್ಥಾನದ ಹತ್ತಿರ ಹೋದೆವು. ದೇವಸ್ಥಾನ ವನ್ನು ನೋಡಿಕೊಳ್ಳುತ್ತಿದ್ದ ಹತ್ತಿರದ ಅಂಗಡಿಯವ ನಮ್ಮ ಕುಲಗೋತ್ರಗಳನ್ನೆಲ್ಲ ವಿಚಾರಿಸಿದ. ನಂತರ "ನೀವು ಪೊಲೀಸ್ ಸ್ಟೇಶನ್‌ದಿಂದ ಯಾರೆಂದು ಗುರುತಿನ ಚೀಟಿ ಬರೆದುಕೊಂಡು ಬಂದಿರುವಿರೋ?" ಎಂದು ಕೇಳಿದಾಗ ಇಲ್ಲವೆನ್ನದೆ ಬೇರೆ ದಾರಿ ಇರಲಿಲ್ಲ. ನಮ್ಮ ಪಾದಯಾತ್ರೆಯ ಕರಪತ್ರ ಕಾವೇರಿ ಮೂಲದಿಂದ ನಾವು ಪಾದಯಾತ್ರೆ ಆರಂಭಿಸಿದಾಗ ತೆಗೆದಿದ್ದ ಚಿತ್ರದ ವರದಿ ಬಂದ ವಾರ್ತಾ ಪತ್ರದ ಪ್ರತಿ ತೋರಿಸಿದರು ಸಾಧ್ಯವಿಲ್ಲ ಎನ್ನುವ ಹಾಗೆ ಹೇಳಿದ. ಕಾಲು ಹೆಜ್ಜೆ ಮುಂದಿಡ ಲಾರದಷ್ಟು ದಣಿವಾದರೂ ಅನಿವಾರ್ಯವಾಗಿ ಮುಂದೆ ಹೊರಟೆವು. ದೇವಸ್ಥಾನದ ಅರ್ಚಕರ ಮನೆ ಹುಡುಕಿ ಆಶ್ರಯ ಕೋರಿದಾಗ ಅವರು ತಮ್ಮ ಮನೆಯವಳು ಇಲ್ಲ ಎಂಬ ಕಾರಣ ನೀಡಿದರು. ಇನ್ನು ಕೊನೆಯ ಪ್ರಯತ್ನವೆಂದು ದಾರಿಯ ಪಕ್ಕದಲ್ಲಿದ್ದ ಪಟೇಲರ ಮನೆ ಹೊಕ್ಕೆವು. ವಯಸ್ಸಾದ ಪಟೇಲರು ಆದರದಿಂದ ಸ್ವಾಗತಿಸಿದರು. ಬಾಯಾರಿಕೆಗೆ ನೀಡಿದರು 'ನಾವು ಅಂದು ಸಂಜೆ ಉಳಿದು ಕೊಳ್ಳುವ ಪ್ರಸ್ತಾಪ ಇಟ್ಟಾಗ ಅವರು "ನೀವು ಸಂಜೆ ಈ ಹೊತ್ತು ಹೋಗಬೇಕೆಂದರೂ ನಾವು ಬಿಡುವುದಿಲ್ಲ. ನೀವು ಉಳಿದು ನಾಳೆ ಬೆಳಿಗ್ಗೆ ಹೋಗಿ ಎಂದಾಗ ಆಶ್ಚರ್ಯ ಚಕಿತರಾದೆವು. ಅವರ ಮಗ ತರಂಗದಲ್ಲಿ ಅಪ್ಪಿಕೊ ಚಳವಳಿಯ ಬಗ್ಗೆ ಬಂದ ಲೇಖನವನ್ನೂ ಓದಿದ್ದ ಅವನು ತೆಂಗಿನ ತೋಟಕ್ಕೆ ನಮ್ಮನ್ನು ಕರೆದೊಯ್ದು ಕುಡಿದಷ್ಟು ಎಳನೀರನ್ನು ಕುಡಿಸಿದಾಗ ದಣಿವೆಲ್ಲ ಮಾಯವಾಗಿತ್ತು.

ಆದರೆ ನಾವು ಸ್ನಾನ ಮಾಡಿ ಮನೆಯಲ್ಲಿ ಕುಳಿತುಕೊಂಡಾಗ ಪೊಲೀಸ್ ಸ್ಟೇಶನ್ನಿನಿಂದ ಫೋನ್ ಬಂದಿತು. ನಾವು ಅಲ್ಲಿದ್ದೆವೆಯೇ ಎಂಬುದನ್ನು ಪೊಲೀಸರು ಖಚಿತಪಡಿಸಿಕೊಳ್ಳುತ್ತಿದ್ದರು. ನಾವು ಉಳಿದಿದ್ದ ಮನೆಯ ಪುರಂದರರಾಯರು ಚಳವಳಿಯ ನನ್ನ ಪರಿಚಯ ನೀಡಿದಾಗ ಪೊಲೀಸರಿಗೆ ಸಮಾಧಾನ. ಅಂದು ನಾವು ಬೇರೆಡೆಗೆ ತಂಗಿದ್ದಾದರೆ ಪೊಲೀಸರ ಆತಿಥ್ಯ ಖಚಿತವಾಗಿತ್ತು. ಶೇಬಾಜೆಯ ದೇವಸ್ಥಾನದಲ್ಲಿ ಕಳ್ಳತನವಾದ ನಂತರ ಹೊರಗಡೆಯ ಜನರ ಮೇಲೆ ಪೊಲೀಸರ ಸಂಶಯ ಹೆಚ್ಚಾಗಿರುವದಾಗಿ ತಿಳಿದು ಬಂತು.

ಚಾರ್ಮಾಡಿಯಿಂದ ಮುಂಡಾಜೆಗೆ ಬರುತ್ತಿರುವಾಗ ದಾರಿಯಲ್ಲಿ ನಮ್ಮ ಗುರುತಿರದ ಒಬ್ಬ ವ್ಯಕ್ತಿ ತಮ್ಮ ಮನೆಗೆ ಬರಬೇಕೆಂದು ಆಗ್ರಹಮಾಡಿದ. ಮನೆಯಲ್ಲಿ ಬಹಳ ಆದರಾತಿಥ್ಯಮಾಡಿ ನಾವು ಹಿಂದೆ ಅರಣ್ಯದಿಂದ ಮರ ಕಡಿದು ಸಾಗಿಸುತ್ತಿದ್ದೆ ಏನು ಮಾಡುವದು ಜೀವನ ನಡೆಯಿಸುವ ಸಲುವಾಗಿ ಈ ತಪ್ಪು ಕೆಲಸ ಮಾಡಬೇಕಾಗುತ್ತಿತ್ತು. ಆದರೆ ಈಗ ಆ ಕೆಲಸವನ್ನು ಬಿಟ್ಟಿರುವೆನು. ನನ್ನ ಮನಸ್ಸು ಪರಿವರ್ತನೆಯಾಗಿದೆ ಎಂದು ಹೇಳಿದಾಗ ನಮಗೆ ಸಂತಸ. ಆ ವ್ಯಕ್ತಿ ಅಪ್ಪಿಕೊ ಚಳವಳಿಯ ಬಗ್ಗೆ ಬಹಳ ತಿಳಿದುಕೊಂಡಿದ್ದ. ಆದರೆ ನಮಗೆ ನಂತರ ತಿಳಿದುಬಂದ ವಿಷಯವೆಂದರೆ ಈ ವ್ಯಕ್ತಿ ಹಿಂದಿನ ತಿಂಗಳು ಸಾಗವಾನಿಯನ್ನು ಕಳ್ಳ ಸಾಗಟ ಮಾಡುವಾಗ ಸಿಕ್ಕಿಬಿದ್ದಿದ್ದನಂತೆ!

*

ಹಳ್ಳಿಗಳಲ್ಲಿ ತಲೆತಲಾಂತರದಿಂದ ವಾಸಿಸುತ್ತಿದ್ದ ಜನರಿಂದ ಆಸ್ತಿಪಾಸ್ತಿಗಳನ್ನು ಕೊಂಡು ಪುಟ್ಟ ಕೇರಳವನ್ನು ನಿರ್ಮಾಣ ಮಾಡಿದ್ದಾರೆ. ಶಿರಾಡಿಯಿಂದ ಅರಸಿನಮಕ್ಕಿ, ಕಾಯರತಡ್ಕದ ಮೂಲಕ ಚಾರ್ಮಾಡಿಗೆ ಬರುವ ದಾರಿಯಲ್ಲಿ ಪ್ರತಿಯೊಂದು ಕಡೆ ನಾವು ದಕ್ಷಿಣ ಕನ್ನಡದಲ್ಲಿದ್ದೇವೋ ಕೇರಳದಲ್ಲಿದ್ದೇವೋ ಎಂಬ ಸಂಶಯವಾಗುತ್ತಿತ್ತು.

ಇವೆಲ್ಲಕ್ಕಿಂತ ಮಿಗಿಲಾಗಿ ನಮ್ಮ ಅರಣ್ಯ ಇಲಾಖೆ ನೇತ್ರಾವತಿಯ ದಡದ ಹತ್ತಿರವೇ ಇರುವ ವೇನೂರು ಅರಣ್ಯವನ್ನು ಸಂಪೂರ್ಣವಾಗಿ ನಾಶಪಡಿಸಿದ್ದು ಜಲಾನಯನ ಕ್ಷೇತ್ರದ ವಿನಾಶದ ಪ್ರತೀಕ.

**ಬರಡಾಗುತ್ತಿರಲು ಕಾರಣಗಳು:** ನೇತ್ರಾವತಿಯ ಹಸಿರು ಒಡಲಾದ ಶಿಶಿಲಾ, ಚಾರ್ಮಾಡಿ, ಮೇದಾರ, ಮಿಯಾರ ಮತ್ತು ನಾರವಿ ಅರಣ್ಯದಲ್ಲಿ ಪ್ಲಾಯ್‌ವುಡ್ ಕಾರಖಾನೆಗಳು ನಿರಂತರವಾಗಿ ಮರಗಳನ್ನು ಕಡಿಯುತ್ತಿವೆ. ಸರಕಾರ ಎಕರೆಗೆ ಕೇವಲ ಎರಡು ಮರಗಳನ್ನು ಮಾತ್ರ ಕಡಿಯುವ ನಿಯಮವಿದೆ ಎಂದು ಸಾರಿದರೂ ನಿಜಸ್ಥಿತಿ ಬೇರೆಯೇ ಆಗಿದೆ. ಈ ಕ್ಷೇತ್ರದ ಕಡಿದಾಗಿರುವ ದಟ್ಟ ಅರಣ್ಯದಲ್ಲಿ ಎಕರೆಗೆ 60-70 ಮರಗಳು ನಾಶವಾಗುತ್ತಿವೆ. ಇದರಿಂದ ಫಲವತ್ತಾದ ಮಣ್ಣು ಕೊಚ್ಚಿ ಹೋಗುತ್ತಿರುವುದನ್ನು ಮಳೆಗಾಲದಲ್ಲಿ ನಾವು ಸ್ವತಃ ನೇತ್ರಾವತಿಯ ಕೆಂಪು ಬಣ್ಣವನ್ನು ನೋಡಿದಾಗ ಸ್ಪಷ್ಟವಾಗುತ್ತಿದೆ.

ನೇತ್ರಾವತಿ ಬರಡಾಗಲು ಎರಡನೆಯ ಕಾರಣ ಅರಣ್ಯದ ಅತಿಕ್ರಮಣ: ಕೇರಳದವರು ಬಂದು ಬರಡಾಗಿರುವ ಸ್ಥಳವನ್ನು ಸಂಪದ್ಭರಿತವಾಗಿ ಮಾಡಿದರೆ ನಮ್ಮ ನಾಡಿಗೂ ಒಳಿತು. ಆದರೆ ಹೆಚ್ಚಿನ ಕೇರಳೀಯರು ಅರಣ್ಯವನ್ನು ಅತಿಕ್ರಮಿಸಿದ್ದಾರೆ. ಇನ್ನು ಅರಣ್ಯ ಅತಿಕ್ರಮಣ ಮಾಡದವರು ಕೇರಳದಿಂದ ಆಮದುಮಾಡಿಕೊಂಡಿರುವ ಹೊಸ ಕೃಷಿಯ ಪದ್ಧತಿಗಳು ಭೂಮಿಯ ಜಲಾನಯನ ಪ್ರದೇಶವನ್ನು ಬರಡು ಮಾಡುತ್ತಿವೆ. ಕೇರಳೀಯರು ಲಿಂಬೆಹುಲ್ಲಿನಿಂದ ಎಣ್ಣೆಯನ್ನು ತೆಗೆಯುವ ಕೆಲಸದಲ್ಲಿ ನಿರತರಾಗಿದ್ದಾರೆ (ಸಿಟ್ರೂನಿಲಾ ಎಣ್ಣೆ). ಇದನ್ನು ಭಟ್ಟಿ ಇಳಿಸುವಾಗ ಅಗಾಧ ಪ್ರಮಾಣದ ಉರುವಲಿನ ಅವಶ್ಯಕತೆ ಇದೆ. ಇದರಿಂದ ಜಲಾನಯನ ಪ್ರದೇಶದ ಕಾಡಿನ ಮೇಲೆ ಒತ್ತಡ ಹೆಚ್ಚುತ್ತಿದೆ. ಇದರ ಜೊತೆಗೆ ಅವರು 'ಲಾವಂಚ' ಎಂಬ ಸುವಾಸನೆಯುಕ್ತ ಎಣ್ಣೆ ತೆಗೆಯುವ ಬೇರನ್ನು ಬೆಳೆಯುತ್ತಾರೆ. ಈ ಎರಡೂ ಬೆಳೆಗಳು ಅಧಿಕ ಧನವನ್ನು ತರುವ ಕೃಷಿಗಳಾದರೂ, ಇವುಗಳಿಂದ ಭೂಸವಕಳಿಯ ಪ್ರಮಾಣ ಶೇಕಡಾ 100ರಷ್ಟು ಹೆಚ್ಚುತ್ತದೆ. ಆದರೆ ದಕ್ಷಿಣ ಕನ್ನಡದ ಜನರು ಹಿಂದೆ ಮಾಡುತ್ತಿದ್ದ ಕೃಷಿ, ಅಡಿಕೆ, ತೆಂಗು, ಗದ್ದೆ ಈ ಪ್ರಮಾಣದ ಭೂಸವಕಳಿಗೆ ಎಡೆಮಾಡಿಕೊಡದೆ ನಿಸರ್ಗದ ಜೊತೆ ಹೊಂದಿಕೊಂಡು ನಿರಂತರವಾಗಿ ಭೂಮಿಯ ಸತ್ವವನ್ನು ಕಾಪಾಡುವ ಕೃಷಿ ಪದ್ಧತಿಯನ್ನು ಅಳವಡಿಸಿಕೊಂಡಿದ್ದರು. ಆದರೆ ಈಗ ಅವರು ಕೇರಳೀಯರ ಮಾರಕ ಕೃಷಿ ಪದ್ಧತಿಯನ್ನು ಅನುಸರಿಸತೊಡಗಿದ್ದಾರೆ. ಹಣಗಳಿಸುವುದು ಮುಖ್ಯವಾಗಿ ನಮ್ಮ ಜೀವನಕ್ಕೆ ಆಧಾರವಾಗಿರುವ ಮಣ್ಣನ್ನು ಕಳೆದುಕೊಳ್ಳುವ ಸಮಾಜ ಹೆಚ್ಚಿಗೆ ದಿನ ಬಾಳಲಾರದು. ಈ ಕಾರಣಗಳಿಂದಾಗಿ ಕೇರಳೀಯರ ವಲಸೆಗಿಂತ ಅವರು ತಂದಿರುವ ಕೃಷಿ ಪದ್ಧತಿ ನೇತ್ರಾವತಿಯ ಜಲಾನಯನ ಪ್ರದೇಶವನ್ನು ಬರಡು ಮಾಡುತ್ತಲಿದೆ.

ದಕ್ಷಿಣ ಕನ್ನಡದಲ್ಲಿ ಅದರಲ್ಲೂ ಪ್ರಮುಖವಾಗಿ ನೇತ್ರಾವತಿಯ ಜಲಾನಯನ ಪ್ರದೇಶದಲ್ಲಿ ತೀವ್ರವಾಗಿ ಹಬ್ಬುತ್ತಿರುವ ರಬ್ಬರ್ ಕೃಷಿಯು ಮುಂಬರುವ ವರ್ಷಗಳಲ್ಲಿ ನದಿಯ ಜಲವನ್ನು ಬತ್ತಿಸುವುದು. ಜಲಾನಯನ ಪ್ರದೇಶಗಳಲ್ಲಿ ಅರಣ್ಯ ಇಲಾಖೆಯನ್ನು ಹೊರತುಪಡಿಸಿ ವೈಯಕ್ತಿಕವಾದ ಜನರು ತಮ್ಮ ನಿಜ ಕ್ಷೇತ್ರದಲ್ಲಿನ ಅರಣ್ಯವನ್ನು ನಾಶಪಡಿಸಿ, ರಬ್ಬರ್ ಬೆಳೆಯಲು ಆರಂಭಿಸಿದ್ದಾರೆ. ಸರಕಾರದ ರಬ್ಬರ್ ಬೋರ್ಡ್ ಧನಸಹಾಯ ನೀಡುವ ಮೊದಲು ರಬ್ಬರ್ ನೆಡುವ ಜಮೀನಿನಲ್ಲಿ ಯಾವುದೇ ಇತರ ಗಿಡಗಳು ಇರಬಾರದು ಎಂಬ ಶರ್ತನ್ನು ಹಾಕಿ ಗಿಡಗಳ ನಾಶಕ್ಕೆ ಕಾರಣವಾಗಿದೆ. ರಬ್ಬರ್ ಬೆಳೆಸುವುದರಿಂದ ಪರಿಸರದ ಮೇಲೆ ಯಾವ ದುಷ್ಪರಿಣಾಮ ಬೀಳುವುದಿಲ್ಲವೆಂದು ದಕ್ಷಿಣ ಕನ್ನಡದ ಪರಿಸರವಾದಿಗಳ ಅಭಿಪ್ರಾಯ. ಆದರೆ ಒಂದೇ ಜಾತಿಯ ನೆಡು ತೋಪುಗಳಿಂದ (Monoculture Plantation) ಭೂಮಿಯ ತೇವಾಂಶ ಮಣ್ಣಿನ

ಫಲವತ್ತತೆಯನ್ನು ಹೆಚ್ಚಿಸಲಿಕ್ಕೆ ಆಗದು. ಇದ ರಿಂದ ಪರಿಸರದ ಮೇಲಾಗುವ ಹಾನಿಯೇ ಅಧಿಕವಾಗಿದೆ. ಹಲವಾರು ವರ್ಷಗಳಿಂದ ಕೇರಳದಲ್ಲಿ ರಬ್ಬರ್ ಬೆಳೆದ ಕ್ಷೇತ್ರದಲ್ಲಿ ಈ ತರ ಹದ ಹಾನಿಯಿಂದ ನೀರಿನ ತೇವಾಂಶ ಕಡಿಮೆ ಯಾಗಿದೆ (ಉದಾಹರಣೆಗೆ ಕೊಟ್ಟಾಯಂ ಜಿಲ್ಲೆ). ರಬ್ಬರ್ ಬೆಳೆಯಿಂದ ನಮಗೆ ಆದಾಯ ಬರಬಹುದು. ಆದರೆ ದೀರ್ಘಕಾಲೀನ ಪರಿಸರ ಅಪಾಯವನ್ನು ಮುಖ್ಯವಾಗಿ ನೀರು ಮತ್ತು ಮಣ್ಣನ್ನು ಬಲಿಕೊಡಲು ಸಿದ್ಧರಾಗಿ ನಾವು ರಬ್ಬರ್ ಬೆಳೆಯುವ ನಿರ್ಣಯ ಮಾಡುವುದು ಒಳಿತು.

ದಿಡುಪೆಯಲ್ಲಿ 55 ವರ್ಷದಿಂದ ವಾಸಿಸುತ್ತಿ ರುವ ಎನ್.ಕೆ.ಪದಕೆಯವರು ಹೇಳಿದ್ದು ನೆನ ಪಿಗೆ ಬರುತ್ತದೆ. ಅವರು "ಕಳೆದ ಐದು ವರ್ಷ ಗಳಿಂದ ಮಳೆಗಾಲವೇ ಬದಲಾಗಿದೆ. ನೇತ್ರಾ ವತಿಯಲ್ಲಿ ಮಳೆಗಾಲದಲ್ಲಿ ಸಹ ನೀರು ತುಂಬಿ ಹರಿಯದು" ಎನ್ನುತ್ತಾರೆ. ಈ ಸ್ಥಿತಿ ನೇತ್ರಾ ವತಿಯ ಮೂಲವಾದ ದಿಡುಪೆಯಲ್ಲಾದರೆ ಮುಂಬರುವ ವರ್ಷಗಳಲ್ಲಿ ಏನಾದೀತೆಂದು ಊಹಿಸಬಹುದು. ಮೇಲೆ ವಿವರಿಸಿದ ಹಾಗೆ, ನಮ್ಮ ತಪ್ಪಾಗಿರುವ ಅರಣ್ಯನೀತಿ ಅಸಮರ್ಪಕ ಕೃಷಿನೀತಿಯಿಂದಾಗಿ ನೇತ್ರಾವತಿಯು ಬರ ಡಾಗುತ್ತಿದೆ.

ಮಂಗಳೂರಿನಲ್ಲಿ ಸ್ಥಾಪನೆಯಾಗಲಿರುವ ತೈಲಾಗಾರ ಮತ್ತು ಇತರ ಬೃಹತ್ ಉದ್ಯಮೆ ಗಳಿಗೆ ನೇತ್ರಾವತಿಯೇ ನೀರು ಪೂರೈಸಬೇಕು. ಇದಕ್ಕಾಗಿ ನೆರಿಯಾ ಅಣೆಕಟ್ಟು ನಿರ್ಮಿಸುವ ಯೋಜನೆ ಇದೆ. ರೈತರು ನೇತ್ರಾವತಿಯಿಂದ ಪಂಪ್‌ಸೆಟ್ ಹಾಕಿ ನೀರನ್ನು ಉಪಯೋಗಿಸದ ಹಾಗೆ ಪ್ರತಿಬಂಧಿಸಿದ ಸರಕಾರ ನೇತ್ರಾವತಿಯ ಹಸಿರು ಒಡಲನ್ನು ನದಿಗೆ ನಿರಂತರವಾಗಿ ನೀರನ್ನು ಉಣಿಸುವ ಹಸಿರು ಕಾಡನ್ನು ಪ್ಲಾಯ್ ವುಡ್ ಕಾರಖಾನೆಗೆ ಗುತ್ತಿಗೆ ಕೊಡುತ್ತಿದೆ. ಒಡ ಲನ್ನು ಬರಿದಾಗಿಸುವ ಈ ಕಾರಖಾನೆಗಳಿಗೆ ನಿರ್ಬಂಧವಿಲ್ಲ.

ನೇತ್ರಾವತಿಯನ್ನು ಬದುಕಿಸಬೇಕಾದರೆ ಸುಬ್ರ ಹ್ಮಣ್ಯದ ದೇವಸ್ಥಾನದ ವ್ಯವಸ್ಥಾಪಕರು ಕಂಡು ಕೊಂಡಿರುವ ದಾರಿಯನ್ನು ಅನುಸರಿಸಬೇಕು. ಅವರು ಸರಕಾರದ ಜೊತೆ ಹೋರಾಟ ನಡೆಸಿ ಕುಮಾರಪರ್ವತದ ಅರಣ್ಯದಲ್ಲಿ ಮಫತ್ ಲಾಲ್ ಪ್ಲಾಯ್‌ವುಡ್ ಕಂಪನಿಯವರು ಕಾಲಿ ಡದ ಹಾಗೆ ಮಾಡಿದರು. ಸರಕಾರವು ಮೇಲೆ ಹೇಳಿದ ಜಲಾನಯನ ನಾಶವಾಗುತ್ತಿರುವ ಕಾರಣಗಳನ್ನು ಅರಿತು ಶೀಘ್ರ ಕ್ರಮ ಕೈ ಗೊಂಡರೆ ಮಾತ್ರ ದಕ್ಷಿಣ ಕನ್ನಡದ ಜೀವನಾಡಿ ಯಾಗಿರುವ ನೇತ್ರಾವತಿಯನ್ನು ಉಳಿಸಿ ಕೊಳ್ಳಲು ಸಾಧ್ಯವಾದೀತು. *



## ಕನ್ನಡದ ಓದು

ಪ್ರತಿಭಾಸಂಪನ್ನರಾದ ಕನ್ನಡಿಗರು, ಕನ್ನಡದಲ್ಲಿ ಬರೆಯಬೇಕಾದರೆ ಕಷ್ಟವಲ್ಲ, ಕಷ್ಟವಾಗಿರ ಬಾರದು. ಆದರೆ ಕೆಲವರು ತಮ್ಮ ವಿಚಾರವಾಗಿ ನೃಪತುಂಗನು ಒಂದು ಸಾವಿರ ವರ್ಷಗಳ ಕೆಳಗೇ ಕೊಟ್ಟ "ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣತಮತಿಗಳ್" ಎಂಬ ಪ್ರಶಸ್ತಿಯ ಸತ್ಯತೆ ಯನ್ನು ಸ್ಥಾಪಿಸಬೇಕೆಂದು ಹಟ ತೊಟ್ಟಿರುವಂತೆ ಕಾಣುತ್ತದೆ. ಸದಾ ಓದುತ್ತಿರಬೇಕಾದದ್ದೇ ವೃತ್ತಿ ಯಾಗಿ ಉಳ್ಳವರು ಕೂಡ ಓದುವುದು ಕಡಿಮೆಯಾಗಿದೆ.

ನಮ್ಮಲ್ಲಿ ಓದುವುದಕ್ಕೆ ಬೇಕಾದ ಸೌಲಭ್ಯಗಳೂ ಕಡಿಮೆ; ಸೌಲಭ್ಯಗಳು ಇರುವ ಕಡೆ ಅವುಗಳನ್ನು ನಾವು ಉಪಯೋಗಿಸಿಕೊಳ್ಳುವುದನ್ನು ಅರಿಯೆವು; ಖಂಡನೀಯವಾದ ರೀತಿಯಲ್ಲಿ, ನಿಂದನೀಯ ವಾದ ರೀತಿಯಲ್ಲಿ ಉಪಯೋಗಿಸಿಕೊಳ್ಳುವೆವು. ಪುಸ್ತಕಗಳೂ ಅವುಗಳ ಕಣ್ಣು ಮೂಗುಗಳೂ ನಮ್ಮ ಕೈಯಲ್ಲಿ ಸುರಕ್ಷಿತವಾಗಿರುತ್ತವೆಂಬ ನಂಬಿಕೆಯಿಲ್ಲ. *

● ಎ.ಆರ್. ಕೃಷ್ಣಶಾಸ್ತ್ರಿ ●

(ಹೈದರಾಬಾದ್‌ನಲ್ಲಿ ನಡೆದ ಇಪ್ಪತ್ತಾರನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಭಾಷಣದಿಂದ)

# ಮೃತ್ಯುವಿನ ದವಡೆಯಲ್ಲಿ ಮೂರು ಗಂಟೆ...

● ಕಿಂಕರ ಮುಂಬಯಿ ●

**ಈ** ಘಟನೆ ಬಹಳ ಹಿಂದಿನ ಕಾಲದ್ದಲ್ಲ. ಪ್ರಸಿದ್ಧ ವೈಜ್ಞಾನಿಕ ಎ. ಕಿಚನರ್ ಒಂದು ದಿನ ಜ್ವಾಲಾಮುಖಿಯ ಕುರಿತು ಓದುತ್ತಿರುವಾಗ ಅವನ ತಲೆಯಲ್ಲಿ ಹೊಳೆದ ಒಂದು ವಿಚಾರ "ಜ್ವಾಲಾಮುಖಿ ಬೆಂಕಿ ಕಾರಲು ಆರಂಭಿಸಿದಾಗ ಅದರ ಗರ್ಭದಲ್ಲೇನಿರಬಹುದು?" ಆಮೇಲೆ ಅವನು ಸದಾ ಈ ಕುರಿತು ಯೋಚನ ಮಗ್ನನಾಗಿದ್ದು ಕೊನೆಗೊಂದುದಿನ "ಕೂಡಲೇ ಸ್ಫೋಟಗೊಳ್ಳಲಿರುವ ಯಾವುದಾದರೊಂದು ಜ್ವಾಲಾಮುಖಿಯ ಉದರದೊಳಗೆ ಪ್ರವೇಶಿಸಿ ಪ್ರಮಾಣಬದ್ಧ ಮಾಹಿತಿಗಳನ್ನು ಸಂಗ್ರಹಿಸುವೆನು" ಎಂಬ ನಿರ್ಧಾರಕ್ಕೆ ಬಂದ.

ಕಿಚನರ್ ಇದಕ್ಕೆ ಸಂಬಂಧಿಸಿದ ವಿವರ ಮತ್ತು ಈ ಅಭಿಯಾನದ ವರದಿಗಳನ್ನು ಒಟ್ಟುಗೂಡಿಸಿ ಅಭ್ಯಾಸಿಸತೊಡಗಿದ. ಇದರಿಂದ ಅವನಿಗೆ ಈ ಹಿಂದೆಯೂ ಕೆಲ ವೈಜ್ಞಾನಿಕರು ಇವನ್ನು ತಿಳಿಯಲು ಪ್ರಯತ್ನಿಸಿದ್ದರೆಂದು ಆದರೆ ಯಾರಿಗೂ ಯಶ ದೊರೆಯಲಿಲ್ಲವೆಂದೂ ತಿಳಿದುಬಂತು. ಇದನ್ನರಿತ ಕಿಚನರ್ ಮೊದಲೊಮ್ಮೆ ಹತೋತ್ಸಾಹಿಯಾದರೂ ಕೂಡಲೇ ಅವನ ದೃಢ ನಿರ್ಧಾರವು ಅವನಲ್ಲಿ ಹೊಸ ಹುರುಪು ತುಂಬಿಸಿ ಕಾರ್ಯ ಪ್ರವೃತ್ತವಾಗಲು ಪ್ರೇರೇಪಿಸಿತು.

ತನ್ನ ಈ ಮಹತ್ ಪ್ರಯೋಗದ ಬಗ್ಗೆ ವಿಸ್ತೃತ ಮಾಹಿತಿಗಳನ್ನು ದೊರಕಿಸಿ ಸಾಕಷ್ಟು ಅಧ್ಯಯನಗೈದ ಬಳಿಕ ಕಿಚನರ್ 'ಸ್ಟ್ರಾಂಬೋಲಿ' ಎಂಬ ಹೆಸರಿನ ಜ್ವಾಲಾಮುಖಿಯನ್ನಾರಿಸಿಕೊಂಡ. ಇದು ಸಿಸಿಲಿ ದ್ವೀಪದ ಉತ್ತರಕ್ಕಿದೆ. ಸದಾಕಾಲ ಬೆಂಕಿ ಉಗುಳುತ್ತಿರುವ ಜಗತ್ತಿನ ಗಣನೀಯ ಜ್ವಾಲಾಮುಖಿಗಳಲ್ಲಿ ಒಂದಾಗಿದೆ. ಇದರ ಆಕಾರ ಪ್ರತಿ ವರ್ಷ ಬದಲಾಗುತ್ತಿರುತ್ತದೆ. ಕಿಚನರ್ ಇದರ ಬಗ್ಗೆ ಹೆಚ್ಚು ತಿಳಿದಿದ್ದನಲ್ಲದೆ ಅದರ ಮುಖದವರೆಗೂ ಹೋಗಿ ಬಂದಿದ್ದ.

ಜ್ವಾಲಾಮುಖಿಯ ಒಳಹೋಗುವ ನಿರ್ಣಯಗೈದ ಬಳಿಕ ಕಿಚನರ್ ತನ್ನ ಸಹಾಯಕರಿಗೆ ಅಭಿಯಾನದ ಕುರಿತು ತಿಳಿಸಿದ. ಇದನ್ನರಿತ ಸಹಾಯಕರು ಒಮ್ಮೆ ವಿಸ್ಮಯಕ್ಕೊಳಪಟ್ಟರೂ ಕಿಚನರ್ ದೃಢ ಸಂಕಲ್ಪದೆದುರು ಏನೂ ಹೇಳದಾದರು. ಎಲ್ಲರೂ ಒಂದಾಗಿ ಕೆಲಸ ಮಾಡುವುದರ ಹೊರತಾಗಿ ಇನ್ನಾವುದೇ ಉಪಾಯವಿರಲಿಲ್ಲ. ಕಿಚನರ್ ಇವರಿಗೆ ಸಂಗತಿಗಳನ್ನೆಲ್ಲ ಮನದಟ್ಟು ಮಾಡಿಕೊಟ್ಟ, ನಂತರ ಕಾರ್ಯಕ್ಕಾರಂಭಿಸಿದ.

ಜ್ವಾಲಾಮುಖಿಯ ಉದರದಲ್ಲಿ ಉಷ್ಣತೆ ಅತ್ಯಧಿಕ ಪ್ರಮಾಣದಲ್ಲಿರುವುದರಿಂದ ಅದಕ್ಕಾಗಿ ಕಲ್ಲುನಾರಿನಿಂದ ಒಂದು ಸಾವಿರ ಅಡಿ ಉದ್ದದ ಹಗ್ಗವೊಂದನ್ನು ತಯಾರಿಸಿದ. ಇದು ಅತ್ಯಧಿಕ ತಾಪದಲ್ಲೂ ಕರಗುವುದಿಲ್ಲ. ಕಿಚನರ್ ತನ್ನ ಶರೀರಕ್ಕೆ ಬೇಕಾದ ಉಡುಪು ಮೆಟ್ಟು ಚೀಲ ಶಿರಸ್ತ್ರಾಣ ಇತ್ಯಾದಿಗಳನ್ನು ಕಲ್ಲುನಾರಿನಿಂದ ಮಾಡಿಸಿದನು. ಒಳಗಡೆ ಗಾಳಿ ಇಲ್ಲದಿರುವುದರಿಂದ ಆಕ್ಸಿಜನ್‌ನ ಕೆಲವು ಚೀಲಗಳನ್ನು ಸಿದ್ಧಗೊಳಿಸಿ ಅವನ್ನು ಕಲ್ಲುನಾರಿನಿಂದ ಸರಿಯಾಗಿ ಹೊದಿಸಿದನು.

ಎಲ್ಲಾ ಸಿದ್ಧತೆಗಳಾದ ಮೇಲೆ ಒಂದು ದಿನ



ಕಿಚನರ್ ತನ್ನ ಸಾಮಾನುಗಳೊಂದಿಗೆ ಸ್ಟ್ರಾಂಬೋಲಿ ಬೆಟ್ಟದ ಶಿಖರದೆಡೆಗೆ ನಡೆದನು. ಸಾವಿರಾರು ಜನ ಈ ಸಾಹಸಿ ವೈಜ್ಞಾನಿಕನ ಅಭೂತಪೂರ್ವಕಾರ್ಯ ನೋಡಲು ನೆರೆದಿದ್ದರು. ಸ್ಟ್ರಾಂಬೋಲಿಯು ಸಮುದ್ರದ ಮಧ್ಯದಲ್ಲಿದೆ. ಸರಕುಗಳನ್ನು ಬಹಳ ಪ್ರಯಾಸದಿಂದ ಸ್ಟ್ರಾಂಬೋಲಿಯ ತುದಿಗೆ ಕೊಂಡೊಯ್ಯಲಾಯಿತು.

ಸಾಗರದ ಬಳಿ ಕೂಡಿದ್ದ ಜನರು ಕಿಚನರ್‌ನ ಉತ್ಸಾಹ ಹೆಚ್ಚಿಸಲು ಹರ್ಷಧ್ವನಿಗೈಯುತ್ತಿದ್ದರು. ಪೂರ್ಣ ಸಿದ್ಧತೆಯಿಂದ ಕಿಚನರ್ ಜ್ವಾಲಾಮುಖಿಯ ಎದುರು ಬಂದು ನಿಂತ. ಬಳಿಕ ರಾಟೆಯ ಮೂಲಕ ಅವನನ್ನು ಕೆಳಗಿಳಿಸಲಾಯಿತು. ಮರಣದ ಬಾಯೊಳಗೆ ಪ್ರವೇಶಿಸುತ್ತಿರುವಾಗ ಕಿಚನರ್ ಭಯಗ್ರಸ್ತನಾಗಿದ್ದ. ಕೆಳಗೆ ಕಾಲಿಡುವಷ್ಟು ಸ್ಥಳವಾದರು ಇರಬಹುದೆ? ಒಳಗೆ ಹೋದ ಮೇಲೆ ಏನಾಗಬಹುದು? ತನ್ನ ಉಪಕರಣಗಳೇನಾದರೂ ಮೋಸ ಮಾಡಬಹುದೊ? ಎಂಬಿತ್ಯಾದಿ ಪ್ರಶ್ನೆಗಳು ಅವನನ್ನು ಕಾಡುತ್ತಿದ್ದವು.

ಹಗ್ಗ ನಿಧಾನವಾಗಿ ಕೆಳಗಿಳಿಯುತ್ತಿತ್ತು. ಗಾಬರಿಗೊಂಡಿದ್ದರೂ ಕಿಚನರ್ ತನ್ನ ಸುತ್ತಲಿನ ವಸ್ತುಗಳನ್ನು ಲಕ್ಷ್ಯಪೂರ್ವಕ ನೋಡುತ್ತಿದ್ದನಲ್ಲದೆ ಅವಶ್ಯಕತೆಗನುಸಾರ ಶಕ್ತಿಶಾಲೀ ಕ್ಯಾಮರಾದಿಂದ ಚಿತ್ರಗಳನ್ನು ತೆಗೆಯುತ್ತಿದ್ದ. ಕಿಚನರ್ ಹೇಳುತ್ತಾನೆ "ಕೆಲವೊಮ್ಮೆ ನನ್ನ ಅಕ್ಕಪಕ್ಕದ ಗೋಡೆಗಳು ಸಂಪೂರ್ಣ ಕಪ್ಪಾಗಿ ಕಂಡರೆ ಇನ್ನೂ ಕೆಲವೊಮ್ಮೆ ಕೆಂಪು ಮತ್ತು ಹಳದಿಯಾಗಿ ತೋರುತ್ತಿದ್ದವು. ಗೋಡೆಗಳ ಸುತ್ತಲೂ ನೂರಾರು ರಂಧ್ರಗಳಿದ್ದವು. ಇವುಗಳಿಂದ ಗಂಧಕದ ಅಲೆಗಳು ಹೊರಡುತ್ತಿದ್ದವು.

ತುಸು ಹೊತ್ತಿನಲ್ಲಿ ಕಿಚನರ್ ಜ್ವಾಲಾಮುಖಿಯ ತಳಭಾಗಕ್ಕೆ ತಲುಪಿದ. ಕೆಳಭಾಗ ಸುಮಾರು ಎಂಟುನೂರು ಅಡಿಗಳಷ್ಟು ಕೆಳಗೆ ಇತ್ತು. ಕೆಳಗಿನ ಹೆಚ್ಚಿನ ಭಾಗಗಳು ಒಡೆದಿದ್ದು ಅವುಗಳಲ್ಲಿ ಹೊಗೆ ತುಂಬಿತ್ತು. ಉಷ್ಣತೆ ಅಪರಿಮಿತವಾಗಿತ್ತು. ಇಷ್ಟೊಂದು ಬಿಸಿಯಲ್ಲೂ ಬಂಡೆಗಲ್ಲು ಅಬಾಧಿತವಾಗಿ ನಿಂತಿತ್ತು. ಕಿಚನರ್ ಬಂಡೆಯ ಮೇಲೆ ಕಾಲೂರಿ ಸುತ್ತಲೂ ನೋಡತೊಡಗಿದ.

ಎಲ್ಲಿ ಕಿಚನರ್ ಇಳಿದಿದ್ದನೋ ಅದರ

ಆಚೀಚೆ ಇನ್ನೆಷ್ಟೋ ಗುಹೆಗಳಿದ್ದವು. ಇವುಗಳಲ್ಲಿ ಕೆಲವು ಹತ್ತರಿಂದ ಮೂವತ್ತು ಅಡಿಗಳವರೆಗೆ ಅಗಲವಾಗಿದ್ದವು. ಇವುಗಳಿಂದ ಬೆಂಕಿಯ ಕಾರಂಜಿಗಳು ಆಗಾಗ್ಗೆ ಪುಟಿಯುತ್ತಿದ್ದವು. ಕಿಚನರ್‌ನ ಸುತ್ತಲೂ ಈ ಕಾರಂಜಿಗಳು ಸರದಿಯಂತೆ ಪುಟಿಯುತ್ತಿದ್ದವು. ಬೇರೆ ಬೇರೆ ಗವಿಗಳಿಂದ ಹೊರಡುವ ಕಾರಂಜಿಗಳ ಸಮಯದ ಅಂತರವನ್ನು ತಿಳಿದು ಅನುಮಾನದ ಮೇರೆಗೆ ಅವುಗಳೊಳಗೆ ಇಣುಕಿ ನೋಡುತ್ತಾ ಮಾಹಿತಿ ಸಂಗ್ರಹಿಸುತ್ತಿದ್ದನಲ್ಲದೆ ಚಿತ್ರಗಳನ್ನು ಸೆರೆಹಿಡಿಯುತ್ತಿದ್ದ. ಗುಹೆಗಳಲ್ಲಿ ಕುದಿಯುವ ಲಾವಾ ಗ್ಯಾಸ್ ಮತ್ತು ಗಾಢ ಹೊಗೆ ಇತ್ತು.

ಒಮ್ಮೆ ಹೀಗೆಯೆ ಬಗ್ಗಿ ನೋಡುತ್ತಿರುವಾಗ ಅಕಸ್ಮಾತ್ತಾಗಿ ಲಾವಾ ತೂಫಾನಿನಂತೆ ಉಕ್ಕೇರಿ ಬಂತು. ಕಿಚನರ್ ಹೆದರಿ ಕೂಡಲೇ ಅಲ್ಲಿಂದ ದೂರ ಸರಿದ. ಅವನು ದೂರ ಹೋಗುತ್ತಿರುವಷ್ಟರಲ್ಲೇ ಭಯಂಕರ ಶಬ್ದವಾಗಿ ಲಾವಾ ಕಾರಂಜಿಯೋಪಾದಿಯಾಗಿ ಬಹಳ ಎತ್ತರದವರೆಗೆ ನೆಗೆದು ಪುನಃ ಅದೇ ಗುಹೆಯೊಳಗೆ ಬಿದ್ದು ಸುತ್ತಲೂ ಹರಡಿತು. ಇದರ ಪುನರಾವರ್ತನೆ ಮೇಲಿಂದ ಮೇಲೆ ಆಗುತಿತ್ತು. ಮೇಲೆ ಪುಟಿದ ಲಾವಾದ ಸ್ವಲ್ಪಾಂಶ ಸಮುದ್ರದೊಳಗೂ ಬಿದ್ದಿತ್ತು.

ಕಿಚನರ್ ಒಳಗಿಳಿದು ಮೂರು ಗಂಟೆಯು ಹೊತ್ತಾಗಿತ್ತು. ಅವನು ಬಹಳ ಆಯಾಸಗೊಂಡಿದ್ದರಿಂದ ಕಾರ್ಯಮುಂದುವರಿಸುವುದು ಅಸಾಧ್ಯವಾಯಿತು. ಕೊಂಡು ಹೋಗಿದ್ದ ಗಾಳಿಯು ಮುಗಿಯುತ್ತಾ ಬರುತ್ತಿತ್ತು. ಸ್ವಲ್ಪ ಹೊತ್ತಿನಲ್ಲಿ ಆಕ್ಸಿಜನ್ ಪೂರ್ಣ ಮುಗಿದು ಹೋಗಿದ್ದರಿಂದ ಗಂಧಕದ ಹೊಗೆಯಿರುವ ಶ್ವಾಸವನ್ನು ತೆಗೆದುಕೊಳ್ಳಬೇಕಾಯಿತು. ಇನ್ನು ಇಲ್ಲಿರುವದು ಅಪಾಯಕರವೆಂದರಿತು ಅವನು ಕಲ್ಲುನಾರಿನ ಹಗ್ಗವನ್ನು ಅಲ್ಲಾಡಿಸಿ ತನ್ನನ್ನು ಮೇಲಕ್ಕೆಳೆಯಲು ಮೇಲಿದ್ದ ಸಹಾಯಕರಿಗೆ ಸಂಕೇತವಿತ್ತ. ಕೂಡಲೆ ಸಹಾಯಕರು ಅವನನ್ನು ಮೇಲೆಳೆದರು. ಮೇಲಕ್ಕೆ ಬರುತ್ತಾ ಬರುತ್ತಾ ಕಿಚನರ್ ಮೂರ್ಛೆಹೋದ.



"ಅಪ್ಪನ ಮನೆಗೆ ಹೋಗಿರುವುದರಿಂದ ನಿನ್ನೆಯ ದಿನದ ಗೈರು ಹಾಜರಿಯನ್ನು ಮನ್ನಿಸಿ ಶಾಲೆಗೆ ಪ್ರವೇಶ ಕೊಡಬೇಕಾಗಿ...."

ಕಿಚನರ್ ಹೊರ ಬರುತ್ತಲೆ ನೆರೆದಿದ್ದ ಜನಸಮೂಹ ಜಯಜಯಕಾರ ಮಾಡಿ ಸ್ವಾಗತಿಸಿತು. ಅವನು ಜೀವಂತವಾಗಿ ಹೊರಬಂದದ್ದನ್ನು ಕಂಡು ಜನರಿಗೆ ಅಪಾರ ಸಂತೋಷವಾಯಿತು. ಓರ್ವ ವೈಜ್ಞಾನಿಕ ಮೃತ್ಯುವಿನ ದವಡೆಯಲ್ಲಿ ಮೂರು ಗಂಟೆಗಳ ಕಾಲವಿದ್ದು ತಿರುಗಿ ಬಂದ. ಕಿಚನರ್ ಜ್ವಾಲಾಮುಖಿಯ ಗರ್ಭದೊಳಗೆ ಹೊಕ್ಕು ಪಾರಾಗಿ ಬಂದ ಮೊದಲ ವ್ಯಕ್ತಿಯಾದ. ಅವನ ಸಾಹಸಮಯ ಅಭಿಯಾನದಿಂದ ಜ್ವಾಲಮುಖಿಯೊಳಗಿನ ಅಗಮ್ಯಸ್ಥಿತಿ ಸರ್ವವಿದಿತವಾಯಿತು. *

('ನವಭಾರತ ಟೈಮ್ಸ್' ಪತ್ರಿಕೆಯಲ್ಲಿನ ಸುರೇಂದ್ರ ಶ್ರೀವಾಸ್ತವರ ಲೇಖನದ ಆಧಾರದಿಂದ.)

ತಾವು ಶ್ರೀಮಂತರೆಂದು ನಂಬಿಸುವ ಯತ್ನದಲ್ಲೇ ಕೆಲವು ಜನ ಬಡವರಾಗುತ್ತಾರೆ.

• ಅನಾಮಿಕ



# ಇತಿಹಾಸ ಎಷ್ಟು? ಕಲ್ಪನೆ ಎಷ್ಟು?

● ಸುಹಾಸ ●

ಭಾರತೀಯ ಮನೆಗಳಲ್ಲಿ ರಾಮಾಯಣಕ್ಕೆ ಎಂಥ ಮನ್ನಣೆ ಇದೆಯೆಂದು ದೂರದರ್ಶನದ ಧಾರವಾಹಿ ಸಾಬೀತುಗೊಳಿಸಿತು. ತಾವು ಕೇಳಿ ಕಲ್ಪಿಸಿಕೊಂಡ ರಾಮಾಯಣದ ಘಟನೆಗಳು ಟಿ.ವಿ. ತೆರೆಯ ಮೇಲೆ ಪಾತ್ರಗಳಾಗಿ, ಘಟನೆಗಳಾಗಿ ಮೂಡಿದಾಗ ಎವೆಯಿಕ್ಕದೇ ಜನ ನೋಡುತ್ತಾರೆ. ರಾಮಾಯಣ ನಮ್ಮ ನೆಲದಲ್ಲಾದ ಘಟನೆ ಎನ್ನುವ ಅವರ ನಂಬಿಕೆಗೆ ಮತ್ತಷ್ಟು ಪುಷ್ಟಿ ದೊರೆಯುತ್ತದೆ. ಕಾರಣ, ಕಂಡಿದ್ದು ಅವರಿಗೆ ಹೆಚ್ಚು ಸತ್ಯವಾಗುತ್ತದೆ. ದೂರದರ್ಶನದಲ್ಲಿ ಪ್ರಸಾರ ಆಗುತ್ತಿರುವ ರಾಮಾಯಣ ಧಾರವಾಹಿ ಒಂದು ದೃಷ್ಟಿಯಲ್ಲಿ ನಮ್ಮ ಧಾರ್ಮಿಕ ಇತಿಹಾಸದ ಮತ್ತೊಂದು ರೂಪ. ಆದರೆ ದೂರದರ್ಶನದ ಈ ರಾಮಾಯಣದ ಘಟನೆಗಳು ನಡೆದವೇ! ನಡೆದವಾದರೆ ಇಲ್ಲಿ ಚಿತ್ರಿಸಿದಂತೆಯೇ ನಡೆದವೇ! ಎನ್ನುವ ಪ್ರಶ್ನೆ ಕೆಲವು ಜನರನ್ನಾದರೂ ಕಾಡುತ್ತದೆ. ಆ ಬಗ್ಗೆ ಹಲಕೆಲವು ವಿದ್ವಾಂಸರು, ಇತಿಹಾಸಕಾರರು ಏನು ಹೇಳುತ್ತಾರೆ ಎನ್ನುವುದು, ರಾಮಾಯಣದ ಬಗೆಗಿನ ಮತ್ತೊಂದು ವಿಚಾರಗಳ ಪದರನ್ನು ತೆರೆದಿಡುತ್ತದೆ.

'ರಾಮಾಯಣ' ನಮ್ಮ ಆದಿಕಾವ್ಯ (ಮಹಾ

ಭಾರತವನ್ನು ಇತಿಹಾಸ ಎನ್ನುವುದು ರೂಢಿ). ಆಧುನಿಕ ಕಾಲದ ಅರ್ಥದಲ್ಲಿ ಅದೊಂದು ಕಾವ್ಯ ಪರಂಪರೆ. ಮೂಲ ಕೃತಿಕಾರ ವಾಲ್ಮೀಕಿ (ಕಾಲ ಸರಿಯಾಗಿ ತಿಳಿಯದು). ಕಾಲ ಪ್ರವಾಹದಲ್ಲಿ ಅದು ಜನರ ಕೃತಿಯಾಗಿ ಬೆಳೆಯಿತು. ಮೂಲದ ಜತೆಗೆ ಹಲವು ಸೇರ್ಪಡೆಗಳಾದವು. ಕೆಲವು ರೂಪಾಂತರಗಳು ಬಂದವು. 'ತಿಣುಕಿದನು ಫಣಿರಾಯ ರಾಮಾಯಣಗಳ ಭಾರದಲಿ' ಎಂದ ಕುಮಾರವ್ಯಾಸ. ಇದು ರಾಮಾಯಣದ ಅತೀವ ಜನಪ್ರಿಯತೆ ಸಾರಿದಂತೆ, ಅದರ ಬಗೆಗಿನ ರೇಜಿಗೆಯನ್ನೂ ಬಿಂಬಿಸುತ್ತದೆ. ಆದರೂ ಇವತ್ತಿಗೂ ರಾಮಾಯಣದ ಪುನರ್ರಚನೆ ನಿಂತಿಲ್ಲ. ವಾಲ್ಮೀಕಿ ರಾಮಾಯಣದಿಂದ ಕುವೆಂಪು ಅವರ ರಾಮಾಯಣ ದರ್ಶನಂ ವರೆಗೆ, ಬಯಲಾಟದ ಸಂಪೂರ್ಣ ರಾಮಾಯಣದಿಂದ ರಮಾನಂದ ಸಾಗರರ ದೂರದರ್ಶನ ಧಾರವಾಹಿಯವರೆಗೆ ನಾವು ಎಲ್ಲವನ್ನೂ ಸ್ವಾಗತಿಸುತ್ತ ಬಂದಿದ್ದೇವೆ.

ನಾವು ಆಧುನಿಕರು. ಅನುಮಾನಗಳಿಂದ ಸತ್ಯ ಹುಡುಕಲು ಬಯಸುವ ಜನ. ರಾಮಾಯಣದಂಥ ಅತಿ ಜನಪ್ರಿಯ ಕೃತಿಯ ಬಗೆಗೂ ನಮಗೆ ಅನುಮಾನಗಳು ಸಹಜ. ಹಲವು ಶತಮಾನಗಳನ್ನೇ ಹಾಯ್ದು ನಮ್ಮ ಕೈಸೇರಿದ 'ರಾಮಾಯಣದ ಎಲ್ಲ ಘಟನೆಗಳೂ ಸತ್ಯ' ಎನ್ನುವವರು ಇದ್ದಾರೆ. ಅದೆಲ್ಲ 'ಮಿಥ್ಯ' ಎಂದು ಘೋಷಿಸುವವರೂ ಇದ್ದಾರೆ. ಹೀಗಿರುವಾಗ: ರಾಮಾಯಣ ಕೃತಿಯಲ್ಲಿ ಇತಿಹಾಸ ಎಷ್ಟು, ಕಲ್ಪನೆ ಎಷ್ಟು ಎಂದು ತೂಗಿ ನೋಡಬೇಕಾಗುತ್ತದೆ.

***ಲಂಕೆ-ಲಂಕೆಯಲ್ಲ***

ಇದುವರೆಗೆ ನಂಬಿದ್ದ ಸಿಂಹಳ ದ್ವೀಪವೇ ರಾವಣನ ಲಂಕೆ ಎನ್ನುವುದು ಕೇವಲ ಕಲ್ಪನೆ ಎಂದು ಮೊದಲು ಹೇಳಿದವರು ಟಿ. ಪರಮ ಶಿವ ಐಯ್ಯರ್. ದಕ್ಷಿಣದವರಾದ ಇವರು 1940ರಲ್ಲಿ ಪ್ರಕಟಿಸಿದ Ramayana and Lanka ಪುಸ್ತಕದಲ್ಲಿ ತಮ್ಮ ವಿವಾದ ಮಂಡಿಸಿದರು. ಲಂಕೆಗೆ ಕಟ್ಟಿದ ಸೇತುವೆಯ ಉದ್ದ ನೂರು ಯೋಜನ ಎಂದು ಕಾವ್ಯ ಹೇಳುತ್ತದೆ. ನೂರು ಯೋಜನ ಎಂದರೆ ಹನ್ನೊಂದೂವರೆ ಮೈಲಿಗಳಾಗಬಹುದು ಅಥವಾ ನಾನ್ನೂರು ಐವತ್ತು ಮೈಲಿಗಳಾಗಬಹುದು. ಇವಾವುದೂ ಇಲ್ಲಿ ಹೊಂದುವುದಿಲ್ಲ. ಮತ್ತೊಂದು: ಉತ್ತರದ ಮಹೇಂದ್ರಗಿರಿಯಿಂದ ದಕ್ಷಿಣದ ಲಂಕೆಯ ಸುವೇಲಗಿರಿಗೆ ಸೇತುವೆ ಕಟ್ಟಿದ ರಾಮ ಎಂದು ವಿವರವಿದೆ. ರಾಮೇಶ್ವರಂ ನಲ್ಲಾಗಲೀ, ಲಂಕಾದ ಉತ್ತರ ತುದಿಯಲ್ಲಾಗಲೀ ಯಾವುದೇ ಬೆಟ್ಟಗುಡ್ಡಗಳಿಲ್ಲ. ಅಂದರೆ ರಾಮೇಶ್ವರದ ಬಳಿ ಇತ್ತೆಂದು ಹೇಳಲಾಗುವ ಸೇತುವೆ ರಾಮಾಯಣಕ್ಕೆ ಸಂಬಂಧಿಸಿದ್ದಲ್ಲ— ಇದು ಐಯ್ಯರ್ ಅವರ ವಾದ.

ಅವರ ವಾದದಂತೆ ರಾವಣ ಗೊಂಡ ಜನಾಂಗದವನು. ಜಬಲ್‌ಪುರದ ಬಳಿಯ ಇಂದ್ರಾಣಿಗಿರಿ ರಾವಣನ ಲಂಕೆ. ಮೂರು ಕಡೆ ಹಿರನ್ ನದಿಯಿಂದ ಆವೃತವಾದ ಈ ಊರು ಮಳೆಗಾಲದಲ್ಲಿ ದ್ವೀಪದ ಹಾಗೆ ಕಾಣುತ್ತದೆ. ಇದೇ ನಿಜವಾದ ರಾವಣನ ಲಂಕೆ. ಹೀಗೆನ್ನಲು ಮತ್ತೊಂದು ಕಾರಣವೂ ಇದೆ. ಗೊಂಡ ಜನ

## ರಾಮಾಯಣ ಎಂಬ ನೋಟಿನ ಯಂತ್ರ

ರಾಮಾಯಣ ಅತ್ಯಂತ ಜನಪ್ರಿಯ ಧಾರಾವಾಹಿ. ಇದರ ವೀಕ್ಷಕರು ಸೇಕಡಾ ಎಪ್ಪತ್ತಾರರಷ್ಟು. ಚಿತ್ರಹಾರ್ ಜನಪ್ರಿಯತೆಯನ್ನು ಇದು ಮೀರಿಸಿದೆ. ಇಂಥ ಅತಿ ಜನಪ್ರಿಯತೆ, ಈವರೆಗೆ ಯಾವುದೇ ಧಾರಾವಾಹಿಗೆ ದಕ್ಕಿರಲಿಲ್ಲ. ಹೀಗಾಗಿ, ಆ ಸಮಯದಲ್ಲಿ ಜಾಹೀರಾತು ಪ್ರಸಾರಕ್ಕಾಗಿ ಪೈಪೋಟಿ ಇದೆ. ಪ್ರತಿವಾರ ಇಂಥ ಜಾಹಿರಾತಿನಿಂದಲೇ ದೂರದರ್ಶನಕ್ಕೆ ಇಪ್ಪತ್ತೆಂಟು ಲಕ್ಷ ರೂಪಾಯಿಗಳು ದೊರೆಯುತ್ತವೆ.

ಐವತ್ತೆರಡು ಸರಣಿಗಳಿಗೆ ಮಾತ್ರ ಅನುಮತಿ ನೀಡಿದ್ದ ಈ ಧಾರವಾಹಿಗೆ ಮತ್ತೆ ಇಪ್ಪತ್ತಾರು ಸರಣಿಗಳಿಗೆ ಅವಕಾಶ ನೀಡಲಾಗಿದೆ. ಹಣ ಗಳಿಕೆ ಇದಕ್ಕೊಂದು ಕಾರಣ. ರಾಮಾಯಣ ನಿರ್ಮಾಪಕ/ನಿರ್ದೇಶಕ ರಮಾನಂದ್ ಸಾಗರ್ ಹೇಳುವುದೇ ಬೇರೆ. "ದೂರದರ್ಶನದಲ್ಲಿ ರಾಮಾಯಣ ಪ್ರಸಾರ ನಿಲ್ಲಿಸಿದರೆ ಈ ದೇಶದಲ್ಲಿ ದಂಗೆಯೇ ಆದೀತು."

## ಹುಟ್ಟು, ಬೆಳವಣಿಗೆ

ರಾಮಾಯಣ ಮೊದಲು ಒಂದು ಜಾನಪದ ಕಥನ ಕಾವ್ಯವಾಗಿತ್ತು. ಅಯೋಧ್ಯಾ, ಕಿಷ್ಕಿಂಧಾ ಮತ್ತು ಲಂಕೆ ಇಲ್ಲಿ ಪ್ರಮುಖ ಕ್ರಿಯಾ ಕೇಂದ್ರಗಳು. ಹಲವು ಅಧ್ಯಾಯಗಳಾಗಿ ವಿಭಜಿಸಿದ ಹನ್ನೆರಡು ಸಾವಿರ ಶ್ಲೋಕಗಳ ಕಾವ್ಯವಾಗಿ ಇದನ್ನು ವಾಲ್ಮೀಕಿ ರಚಿಸಿದ. ಮುಂದಿನ ಹಂತದಲ್ಲಿ ಬೇರೆ ಬೇರೆ ಛಂದಸ್ಸಿನ ಶ್ಲೋಕಗಳು ಸೇರ್ಪಡೆಯಾದವು. ರಾಮಾಯಣವನ್ನು ಹಲವು ಕಾಂಡಗಳಾಗಿ ವಿಭಜಿಸಲಾಯಿತು. ನಾಲ್ಕನೆಯ ಹಂತದಲ್ಲಿ ಇದರಲ್ಲಿ ಭೌಗೋಳಿಕ ವಿವರಗಳ ವ್ಯಾಪ್ತಿ ಹಿಗ್ಗಿತು. ಇಲ್ಲಿನ ಪಾತ್ರಗಳು ಅತಿ ಮಾನವರೆಂಬ ಕಲ್ಪನೆ ಬೆಳೆಯಿತು. ಕೊನೆಯ ಹಂತದಲ್ಲಿ ಇದಕ್ಕೆ ದೈವೀ ಮೂಲವನ್ನು ಹಚ್ಚಲಾಯಿತು. ಬಾಲಕಾಂಡ, ಉತ್ತರ ಕಾಂಡಗಳು ಹೊಸದಾಗಿ ಸೇರ್ಪಡೆಯಾದವು. ರಾಮ ವಿಷ್ಣುವಿನ ಅವತಾರ ಎನ್ನುವ ಕಲ್ಪನೆ ಬೇರೂರಿದ್ದು ಇದೇ ಹಂತದಲ್ಲಿ.

ಗಳ ಒಂದು ಪ್ರಭೇದದವರನ್ನು ರಾವಣ ವಂಶಿಗಳೆಂದು ಈಗಲೂ ಕರೆಯುತ್ತಾರೆ.

ವಿಖ್ಯಾತ ಇತಿಹಾಸಜ್ಞ, ಪುರಾತತ್ವ ಶಾಸ್ತ್ರಜ್ಞ ಶ್ರೀ ಎಚ್. ಡಿ. ಸಂಕಾಲಿಯಾ ಅವರದೂ ಇದೇ ಅಭಿಪ್ರಾಯ. ರಾವಣನ ಲಂಕೆ ಉತ್ತರ ಪ್ರದೇಶದ ಜಬಲ್‌ಪುರದ ಬಳಿ ಇತ್ತೆಂಬ ವಾದಕ್ಕೆ ಹಲವಾರು ಕಾರಣಗಳನ್ನೂ ಅವರು ನೀಡುತ್ತಾರೆ. ಮಧ್ಯಭಾರತದ ಗೊಂಡ ಜನಾಂಗಗಳ ಜಾನಪದ ಗೀತೆಗಳಲ್ಲಿ ಬಹಳಷ್ಟು ರಾವಣನ ಪ್ರಶಂಸೆ ಇದೆ. ಭಾರತಾದ್ಯಂತ ರಾವಣನನ್ನು ನಿಂದಿಸುವಾಗ ಇದು ಅಪರೂಪದ ಪ್ರಸಂಗ. ಇದಕ್ಕೆ ಕಾರಣ ರಾವಣ ಗೊಂಡ ಜನಾಂಗದವನು ಎಂದು ಸಂಕಾಲಿಯಾ ಅಭಿಪ್ರಾಯ. ಮತ್ತೊಂದು ವಿಚಾರ: ಇವತ್ತಿನ ಶ್ರೀಲಂಕಾ ಪ್ರದೇಶವನ್ನು ಸಿಂಹಳ ಅಥವಾ ತಾಮ್ರಪರ್ಣಿ ಎಂದೇ ಕರೆಯುತ್ತಿದ್ದರು ಲಂಕಾ ಎಂದಲ್ಲ. ಆದರೆ ಭಾರತದ ಮುಂಡರಿ ಭಾಷೆಯಲ್ಲಿ ಲಂಕಾ ಎಂದರೆ ದ್ವೀಪ ಎಂದರ್ಥ. ಈಗಲೂ ಮಧ್ಯಪ್ರದೇಶ-ಆಂಧ್ರ-ಒರಿಸ್ಸಾ ಗಡಿಗಳ ಜನ ತ್ರಿಕೂಟಗಿರಿ ಪ್ರದೇಶವನ್ನು ಪಶ್ಚಿಮ ಲಂಕಾ ಎಂದೇ ಕರೆಯುತ್ತಾರೆ.

### ರಾಮಾಯಣ ನಡೆಯಿತೇ?

ರಾಮಾಯಣ ನಡೆಯಲೇ ಇಲ್ಲ ಎಂದು ಯಾವ ಭಾರತೀಯ ಇತಿಹಾಸಕಾರರು ಹೇಳೇ ಇಲ್ಲ. ಆದರೆ ಘಟನೆಗಳ ಸ್ವರೂಪದ ಬಗ್ಗೆ ಬೇರೆ ಬೇರೆ ಅಭಿಪ್ರಾಯಗಳಿವೆ. ದೆಹಲಿಯ ಜವಹರ್‌ಲಾಲ್ ನೆಹರೂ ವಿಶ್ವವಿದ್ಯಾನಿಲಯದ ಇತಿಹಾಸ ವಿಭಾಗದ ಮುಖ್ಯರಾದ ಪ್ರಾಧ್ಯಾಪಿಕೆ ರೋಮಿಲಾ ಥಾಪರ್ ದೃಷ್ಟಿಯಲ್ಲಿ "ಉತ್ತರ ಭಾರತದ ಆದಿವಾಸಿಗಳ ನಡುವಿನ ಘರ್ಷಣೆ ರಾಮಾಯಣದ ಮೂಲ ವಸ್ತು. ಉತ್ತರದ ಕೋಸಲದ ಜನಕ್ಕೆ ಗಂಗೆಯ ಕೆಳಗಿನ ಕಣಿವೆಯ ಜನರೊಡನೆ ಯುದ್ಧಗಳೂ ನಡೆದಿರಬಹುದು. ರಾಮಾಯಣ ಕಾಲಾನುಕ್ರಮದಲ್ಲಿ ಬೆಳೆದ ಕಾವ್ಯ. ಇದರಲ್ಲಿನ ಸತ್ಯ, ಮಿಥ್ಯೆಗಳನ್ನು ಬೇರ್ಪಡಿಸುವುದು ಸುಲಭವಲ್ಲ..."

ಶ್ರೀ ಸಂಕಾಲಿಯಾ ಅವರ ಅಭಿಪ್ರಾಯದಂತೆ: "ದಶರಥ ಅಯೋಧ್ಯೆಯ ದೊರೆ. ಒಮ್ಮೆ ಮಳೆಯಿಲ್ಲದೆ ದೇಶ ಕ್ಷಾಮಕ್ಕೆ ತುತ್ತಾಯಿತು. ಕೆಲವರ ಸೂಚನೆಯಂತೆ ಆ ದೇಶಕ್ಕೆ ಋಷ್ಯಶೃಂಗ ಮುನಿಯನ್ನು ಕರೆತರಲಾಯಿತು. ಮಳೆ ಬಂದು ಸುಭಿಕ್ಷವಾದ ಮೇಲೆ ದೊರೆ ಮದುವೆಯಾದ. ಕೆಲವು ಯಜ್ಞಗಳನ್ನು ಮಾಡಿದ ಫಲವಾಗಿ ರಾಮ ಹುಟ್ಟಿದ." ಇದಿಷ್ಟು ನಡೆದಿರಬಹುದಾದ ಘಟನೆಗಳು. ಮುಂದಿನದೆಲ್ಲ ಕಲ್ಪಿತ ಇರಬಹುದು.

### ಉತ್ಖನನ

ಐತಿಹಾಸಿಕ ಘಟನೆಗಳಿಗೆ ಉತ್ಖನನಗಳು ಬಹುಮುಖ್ಯ ಆಧಾರ ಒದಗಿಸುತ್ತವೆ. ಆರ್ಕಿಯೋಲಾಜಿಕಲ್ ಸರ್ವೆ ಆಫ್ ಇಂಡಿಯಾ ಸಂಸ್ಥೆಯ ನಿರ್ದೇಶಕರಾಗಿದ್ದ ಶ್ರೀ ಬಿ.ಬಿ. ಲಾಲ್ ರಾಮಾಯಣದ ಘಟನಾ ಸ್ಥಳಗಳಲ್ಲಿ ಉತ್ಖನನ ನಡೆಸಲು ಯೋಜನೆಯೊಂದನ್ನು ಸಿದ್ಧಪಡಿಸಿದರು. ಅಯೋಧ್ಯಾ, ಶೃಂಗವೇರಪುರ, ಭಾರದ್ವಾಜ ಆಶ್ರಮ ಮತ್ತು ನಂದಿಗ್ರಾಮಗಳಲ್ಲಿ ಶೋಧಕ್ಕಾಗಿ ನಿವೇಶನಗಳನ್ನು ಗುರುತಿಸಲಾಯಿತು. 1975ರಲ್ಲಿ ಉತ್ಖನನಗಳು ನಡೆದವು. ಅತ್ಯಂತ ವ್ಯಾಪಕವಾಗಿ ನಡೆದ

ಶೋಧಗಳು ಕ್ರಿ.ಪೂ. ಏಳನೆಯ ಶತಮಾನಕ್ಕಿಂತ ಹಿಂದೆ ಅಯೋಧ್ಯೆಯಲ್ಲಿ ಜನ ವಸತಿಗಳು ಇರಲಿಲ್ಲವೆಂದು ತಿಳಿಸುತ್ತವೆ ಎಂದು ಶ್ರೀ ಬಿ.ಬಿ. ಲಾಲ್ ಅವರ ಅಭಿಪ್ರಾಯ. ರಾಮ ಆ ಪ್ರದೇಶದಲ್ಲಿ ಇದ್ದನೆಂಬುದನ್ನು ಸೂಚಿಸುವ ಯಾವ ನಿಖರ ಮಾಹಿತಿಯೂ ಸಿಗುವುದಿಲ್ಲವೆಂದು ಅವರು ವಾದಿಸುತ್ತಾರೆ. ಅಲ್ಲದೇ ಮಹಾಭಾರತವೇ ಮೊದಲು ನಡೆದಿರಬಹುದೆಂದು ತರ್ಕಿಸುತ್ತಾರೆ. ಬಿ.ಬಿ. ಲಾಲ್ ನಡೆಸಿದ ಉತ್ಖನನಗಳು ಸರಿಯಾಗಿಯೇ ಇರಲಿಲ್ಲ. ಅವರು ಸುಮ್ಮನೆ ಸರ್ಕಾರದ ಹಣವನ್ನು ವೆಚ್ಚ ಮಾಡಿ ಹಾಳುಗೆಡವಿದರು ಎಂದು ಶ್ರೀ ಸಂಕಾಲಿಯಾ ಹೇಳುತ್ತಾರೆ.

ರಾಮಾಯಣ ಎಷ್ಟು ಸತ್ಯ, ಎಷ್ಟು ಮಿಥ್ಯೆ ಎನ್ನುವ ಪ್ರಶ್ನೆಗೆ ಉತ್ತರ ಸುಲಭವಲ್ಲ. ಸಾಮಾನ್ಯವಾಗಿ ಬದುಕಿದ ಇತಿಹಾಸಕ್ಕಿಂತ ಸಾಮಾನ್ಯವಾಗಿ ಬರೆದ ಇತಿಹಾಸ ಸಂಪೂರ್ಣ ಭಿನ್ನ ಎಂಬುದನ್ನು ನಾವು ಮನದಟ್ಟು ಮಾಡಿಕೊಳ್ಳಬೇಕು. ಜತೆಗೆ ಪ್ರಸಿದ್ಧ ತತ್ವಜ್ಞಾನಿ ವಿಲ್ ಡ್ಯೂರಾಂಟ್ ಹೇಳಿದ ಈ ಮಾತುಗಳೂ ರಾಮಾಯಣದಂಥ ಕೃತಿಯ ಬಗ್ಗೆ ಉಲ್ಲೇಖಾರ್ಹ.

"ಎಲ್ಲ ದೇಶ ಕಾಲಗಳಲ್ಲಿಯೂ ಧರ್ಮ ಕ್ರಿಯಾತ್ಮಕವಾಗಿರುವುದರಿಂದ ಹಾಗೂ ಅತ್ಯಾವಶ್ಯಕ ಎಂದು ಕಾಣುವುದರಿಂದ, ಸಂದೇಹವಾದಿ ಇತಿಹಾಸಕಾರ ಕೂಡ ಅದರ ಬಗ್ಗೆ ವಿನಯಪೂರ್ವಕ ಗೌರವ ಬೆಳೆಸಿಕೊಳ್ಳುತ್ತಾನೆ. ಅಸುಖಿಗಳಿಗೆ, ನೊಂದವರಿಗೆ, ಸಂತಪ್ತರಿಗೆ, ಮುದುಕರಿಗೆ ಅದು ನೀಡಿರುವ ಅಲೌಕಿಕ ನೆಮ್ಮದಿ ಯಾವುದೇ ನೈಸರ್ಗಿಕ ನೆರವಿಗಿಂತ ಹೆಚ್ಚು ಪ್ರಶಸ್ತವೆಂದು ಲಕ್ಷಾಂತರ ಮಂದಿ ನಿರ್ಣಯಿಸಿದ್ದಾರೆ. ತಂದೆ ತಾಯಿಗಳು ಮತ್ತು ಶಿಕ್ಷಕರು ಕಿರಿಯರನ್ನು ಶಿಸ್ತಿನಲ್ಲಿಡಲು ಅದು ನೆರವಾಗಿದೆ. ಅತ್ಯಂತ ನಿಕೃಷ್ಟ ಬದುಕಿಗೂ ಅದು ಅರ್ಥವನ್ನೂ ಘನತೆಯನ್ನೂ ಅನುಗ್ರಹಿಸಿದೆ." *



## 'ಜೀವನದಿ'

'ಜೀವನದಿ'ಗೆ ವೈವಾಹಿಕ ಬಂಧನ ಒಂದು ಪೂರಕವಲ್ಲದಿದ್ದರೂ ಸಹಾಯಕ ವ್ಯವಸ್ಥೆ. ಆ 'ನದಿ'ಗೆ ಗಂಡು ಮತ್ತು ಹೆಣ್ಣು ಎಂಬ ಎರಡು ದಂಡೆಗಳಿವೆ. ಇವುಗಳಲ್ಲಿ ಮೇಲು, ಕೀಳು ಎಂಬ ಮೇಲರಿಮೆ-ಕೀಳರಿಮೆ ಸಲ್ಲದು. ಅವು ಪರಸ್ಪರ ಪೂರಕವಾಗಿರಬೇಕು. ಹಾಗಿದ್ದಲ್ಲಿ ಮಾತ್ರ ಜೀವನ ಪಾವನವಾಗಿ, ಬದುಕು ಬಂಗಾರವಾಗಿ ಭವಿಷ್ಯವು ಭವ್ಯತೆಯ ಕಡೆಗೆ ಸಾಗುವುದು! ಗಂಡು ಹೆಣ್ಣಿನ ಸಂಬಂಧ ಗಂಡಭೇರುಂಡ ಪಕ್ಷಿಯ ಶರೀರದಂತೆ ಏಕವಾಗಿರಬೇಕಲ್ಲದೆ, ವಿರುದ್ಧ ದಿಕ್ಕುಗಳನ್ನು ನೋಡುತ್ತಿರುವ ಅದರ ಎರಡು ಮುಖಗಳಂತೆ ಇರಬಾರದು! ಅವರೊಳಗೆ ಮಾನಸಿಕ ಭಿನ್ನಾಭಿಪ್ರಾಯಗಳು ಸ್ಫೋಟಿಸಿದರೆ ಆ ಸಂಸಾರಕ್ಕೆ ಹಾಲೇ ಹಾಲಾಹಲವಾಗಿ ಪರಿಣಮಿಸಿ, ಶೋಕ ಸಾಗರದಲ್ಲಿ ಮುಳುಗಲು ಅದಕ್ಕೆ ಹೆಚ್ಚು ಸಮಯ ಬೇಕಾಗುವುದಿಲ್ಲ.

ಅಂಥ ದೌರ್ಭಾಗ್ಯಶಾಲಿ ಸಂಸಾರದ ಜೀವ ತಂತುಗಳು ಕ್ಷಣ ಕ್ಷಣಕ್ಕೂ ಸತ್ತು ಸತ್ತು ಬದುಕುವಂಥ ವಿಷಮ ಪರಿಸ್ಥಿತಿಗೆ ಬಲಿಯಾಗುವರು! ಜೀವನ ಬದುಕಿ ಸಾಯುವಂತಾಗಬೇಕೇ ವಿನಾ ಸತ್ತು ಸತ್ತು ಬದುಕುವಂತಿರಬಾರದು!! ಆದುದರಿಂದ ಜೀವನದಿಯ ಎರಡು ಮುಖಗಳಾದ ಗಂಡು-ಹೆಣ್ಣುಗಳಲ್ಲಿ ಪರಸ್ಪರ ಸಹನೆ, ಹೊಂದಾಣಿಕೆ, ಸಹಬಾಳ್ವೆ, ಅರಿವು ಮುಖ್ಯವೇ ಹೊರತು ಮೇಲು ಕೀಳು ಎಂಬ ಅನಿಷ್ಟದ ಅರಿವುಗಳಲ್ಲ. ಇಂಥ ಸಂಸಾರದಲ್ಲಿ ಸುಖ ಶಾಂತಿಗಳು ಮನೆಮಾಡಿಕೊಂಡು ಜೀವ ಕುಡಿಗಳು ಚಿಗುರಿ, ಕವಲೊಡೆದು ಹೆಮ್ಮರವಾಗಿ ಬೆಳೆದು, ಸಮಾಜಕ್ಕೆ ಯಥೇಚ್ಛ ಫಲ ಪುಷ್ಪಾದಿಗಳನ್ನು ಕೊಟ್ಟು ಸಂತೃಪ್ತಿಯ ಮಂದ ಮಾರುತ ಬೀಸಿ ಸುಗಂಧಭರಿತ ವಾತಾವರಣವನ್ನು ಸೃಷ್ಟಿಸಬಲ್ಲವು. ಇದರಿಂದ ನಾವೂ ಚೆನ್ನಾಗಿ ಬದುಕಿ, ಇತರರೂ ಸುಖವಾಗಿ ನೆಮ್ಮದಿಯಿಂದ ಬದುಕಲು ಬಿಡುವಂತರಾಗುತ್ತೇವೆ. *

• ಪಮುಬಿದ್ರಿ ಪ್ರಭಾಕರರಾಯ •

# ಮಾನವತಾವಾದಿ

● ಜಗದ್ಗುರು ಮಾತೆ ಮಹಾದೇವಿ ●

*'ಬಸವಣ್ಣನವರ ಚಿಂತನೆಯ ಭಾಂಡಾರಕ್ಕೆ ಹಿಂದಿನ ಎಲ್ಲ ಚಿಂತನೆಗಳೂ ಹರಿದು ಬಂದವು, ಮುಂದಿನ ಎಲ್ಲ ಚಿಂತನೆಗಳೂ ಇಲ್ಲಿಂದ ಹೊರ ಹರಿದವು' ಎನ್ನುವುದು ಉತ್ಪ್ರೇಕ್ಷೆಯಲ್ಲ. ಬುದ್ಧನ ಹಾಗೆ ದಯಾಮಯಿ, ಮಹಾವೀರನಂತೆ ಸರಳ, ಕ್ರಿಸ್ತನಂತೆ ಸಹೃದಯ, ಮೊಹಮ್ಮದರ ಹಾಗೆ ದಿಟ್ಟ, ಎಲ್ಲ ಆಗಿದ್ದ ಬಸವಣ್ಣ ಈ ಸೃಷ್ಟಿಯ ಅದ್ಭುತದ ಹಾಗೆ ಕಾಣುತ್ತಾರೆ. ಆದರೆ, ನಮ್ಮನ್ನು ಅವರತ್ತ ಸೆಳೆಯುವುದು ಮಾರ್ಕ್ಸ್ ಮತ್ತು ಗಾಂಧಿವಾದದಂಥ ಆಧುನಿಕ ತತ್ವ ಮಾರ್ಗಗಳಿಗೆ ಪ್ರೇರಕ ಶಕ್ತಿಯಾದ ಅವರ ಚಿಂತನೆಗಳು.'*

ಹೀಗೆ ಉದ್ಗರಿಸಿದ ಶ್ರೀ ಆರ್.ಕೆ. ಶ್ರೀಕಂಠನ್‌ರು ಬಸವಣ್ಣನವರ ಬಹುಮುಖ ವ್ಯಕ್ತಿತ್ವವನ್ನು ಚಿಕ್ಕದಾಗಿ ಚೊಕ್ಕವಾಗಿ ಚಿತ್ರಿಸುತ್ತಾರೆ.

ಹನ್ನೆರಡನೆಯ ಶತಮಾನದಲ್ಲಿ ಆಗಿ ಹೋದ ಬಸವಣ್ಣನವರು ಕ್ರಾಂತಿಕಾರಿ ವಿಚಾರ ವಾದಿಗಳು ಹೇಗೋ ಹಾಗೆ ಅವರ ವ್ಯಕ್ತಿತ್ವದ ಇನ್ನೊಂದು ಮುಖ ಅಪಾರ ಅನುಕಂಪ-ಹೃದಯವಂತಿಕೆಯಿಂದ ಕೂಡಿದ ಮಾನವತಾವಾದವನ್ನು ಬಿಂಬಿಸುತ್ತದೆ. "ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ; ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು; ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ" ಎಂಬ ಬಸವ ವಚನ ಆ ಮಾನವತಾವಾದವನ್ನು ಗಾಢವಾಗಿ ಅಭಿವ್ಯಕ್ತಗೊಳಿಸುತ್ತದೆ. ವ್ಯಕ್ತಿಯು, ತನ್ನ ಸುತ್ತಲೂ ಇರುವ ನೋವು, ಆಕ್ರಂದ, ದುಃಖ, ವೈಷಮ್ಯ ಮುಂತಾದ ಎಲ್ಲವನ್ನೂ ಕಡೆಗಣಿಸಿ ಸ್ವಂತ ಸುಖದಲ್ಲಿ ತಲ್ಲೀನನಾಗುವುದು ಎಷ್ಟು ಅಮಾನುಷತೆಯೋ, ಅಷ್ಟೇ ಕ್ರೂರ, ಕಾಣದ ಒಂದು ಜಗತ್ತಿನಲ್ಲಿ ಸುಖವನ್ನರಸುತ್ತ ಮರ್ತ್ಯವನ್ನು ಕಡೆಗಣಿಸುವುದು. ಮತ್ತು ಇದು ಒಂದು ದೃಷ್ಟಿಯಿಂದ ಪಲಾಯನವಾದವೂ ಆಹುದು. ತನ್ನ ಒಳಗನ್ನು ಮತ್ತು ತನ್ನ ಸುತ್ತಲಿನ ಪರಿಸರವನ್ನು ಸುಂದರ ಸುರಮ್ಯಗೊಳಿಸುವುದೇ ಧರ್ಮದ ನಿಜವಾದ ಕರ್ತವ್ಯ ಎಂದು ಭಾವಿಸಿದ ಬಸವಣ್ಣನವರು ಹೇಳುತ್ತಾರೆ. "ಕನ್ನಡಿಯ ನೋಡುವ ಅಣ್ಣಗಳಿರಾ ಜಂಗಮವ ನೋಡಿರೆ" ಎಂದು. ಕನ್ನಡಿಯನ್ನು ನೋಡುವುದೆಂದರೆ ಸ್ವರೂಪ ಸಾಕ್ಷಾತ್ಕಾರದ ಸಾಧನೆಯಲ್ಲಿ ನಿರತವಾಗುವುದು. ಕೇವಲ ವೈಯಕ್ತಿಕ ಆತ್ಮೋದ್ಧಾರದ ಸಾಧನೆಯಲ್ಲಿ ತಲ್ಲೀನರಾಗಿ ಸಮಾಜದ ಶ್ರೇಯಸ್ಸನ್ನು ಕಡೆಗಣಿಸುವವರನ್ನು ಕುರಿತು ಹೀಗೆ ಹೇಳಿದ್ದಾರೆ. 'ಜಂಗಮದೊಳಗೆ ಲಿಂಗಯ್ಯನಿದ್ದಾನೆ.' 'ಮರಕ್ಕೆ ಬಾಯಿ ಬೇರು ಹೇಗೋ ಹಾಗೆ ದೇವನ ಮುಖ ಜಂಗಮ' 'ಸ್ಥಾವರ ಭಕ್ತಂಗೆ ಸೀಮೆಯಲ್ಲದೆ ಜಂಗಮ ಭಕ್ತಂಗೆ ಸೀಮೆಯುಂಟೆ?' ಈ ಉಕ್ತಿಗಳು ಮಾನವೀಯತೆಯ ಪರಾಕಾಷ್ಠೆ ತಲುಪುತ್ತವೆ. ಸ್ಥಾವರ ಭಕ್ತ ಗುಡಿಗೆ ಹೋಗಿ ಪೂಜೆ ಮಾಡಿದರೆ ಜಂಗಮ ಭಕ್ತ ತನ್ನ ಮನೆಯಲ್ಲಿ ಪೂಜೆ ಮಾಡಿಕೊಳ್ಳುವನು; ಅಥವಾ ಇದ್ದಲ್ಲಿಯೇ ಮಾಡುವನು. ಸ್ಥಾವರ ಭಕ್ತ ಗುಡಿಯಲ್ಲಿ ಅಭಿಷೇಕ ಮಾಡಿದರೆ, ಜಂಗಮ ಭಕ್ತ ಬಾಯಾರಿದವನಿಗೆ ಕುಡಿಯಲು ನೀರು ಕೊಟ್ಟು ದೇವನನ್ನು ತಣಿಸುವನು. ಸ್ಥಾವರ ಭಕ್ತ ಗುಡಿಯಲ್ಲಿ ಉಣ್ಣದ ದೇವನಿಗೆ ನೈವೇದ್ಯವನ್ನು ಇಟ್ಟರೆ, ಮಾನವತಾವಾದಿಯಾದ ಜಂಗಮ ಭಕ್ತ ಹಸಿದ ಒಡಲನ್ನು ತೃಪ್ತಿಪಡಿಸಲು ಉಣಲಿಕ್ಕುವನು. ಹೀಗಾಗಿ ಜಂಗಮ ಭಕ್ತ ಭಕ್ತಿನಿಸ್ಸೀಮ. "ಜಂಗಮ"- ಬಸವಣ್ಣನವರ ತತ್ತ್ವ-ಸಿದ್ಧಾಂತಗಳ ಒಂದು ಅದ್ಭುತ ಪರಿಕಲ್ಪನೆ. ಬಹುಮುಖದ ಅರ್ಥವ್ಯಾಪ್ತಿಯುಳ್ಳ ಜಂಗಮದ ಒಂದು ಅರ್ಥ ಸಮಾಜ, ಇನ್ನೊಂದು ಅರ್ಥ ಮಾನವ ಜೀವಿ, ಮತ್ತೊಂದು ಸಂಚರಿಸುವ ಜ್ಞಾನಿ. ಆದ್ದರಿಂದ ಜಂಗಮವ ಕಡೆಗಣಿಸಿ ಲಿಂಗದೇವನತ್ತ ಕಣ್ಣಿಟ್ಟವರನ್ನು ಬಸವಣ್ಣನವರು ಅಷ್ಟಾಗಿ ಮೆಚ್ಚರು.

# ಬಸವಣ್ಣ

## ಧರ್ಮ ಮತ್ತು ಮಾನವೀಯತೆ

ಬಸವಣ್ಣನವರ ಪ್ರಕಾರ ಮಾನವೀಯತೆ ಇಲ್ಲದ ಧರ್ಮವಂತಿಕೆ ಅರ್ಥಶೂನ್ಯ ಮತ್ತು ಅಸಾಧ್ಯ! ಹೃದಯಹೀನನಾದವನ ಪೂಜೆ ವ್ಯರ್ಥ ಪರಿಶ್ರಮವೇ ವಿನಾ ದೇವನನ್ನು ಮುಟ್ಟದು. "ಕೋಪಿ ಮಜ್ಜನಕ್ಕೆರೆದರೆ ರಕ್ತದ ಧಾರೆ: ಪಾಪಿ ಹೂವನೇರಿಸಲು ಆಯುಧದ ಗಾಯ."

ದಯವಿಲ್ಲದ ಧರ್ಮವದಾವುದಯ್ಯ?
ದಯವಿರಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ
ದಯವೇ ಧರ್ಮದ ಮೂಲವಯ್ಯ
ಅಂತಲ್ಲದೊಲ್ಲನಯ್ಯ ಕೂಡಲ ಸಂಗಮದೇವ!

ಜನಪ್ರಿಯವಾಗಿರುವ ಈ ವಚನವು ಮಾನವತಾವಾದದ ಪರಮ ಸೂತ್ರ. ದಯೆ ಇಲ್ಲದ್ದು ಅಂದರೆ ಯಾವುದಾದರೊಂದು ನೆಪದಲ್ಲಿ ಶೋಷಣೆ ಮಾಡುವುದು ಧರ್ಮವೇ? ಖಂಡಿತಾ ಅಲ್ಲ. ಸಕಲ ಪ್ರಾಣಿಗಳಲ್ಲಿಯೂ ದಯಾಭಾವವಿರಬೇಕು. ಅದೇ ಧರ್ಮವಂತನ ಲಕ್ಷಣ. ಹದುಳಿಗ ಹೃದಯರಾದ ಪ್ರವಾದಿಗಳಲ್ಲಿ ದಯಾಭಾವವಿದ್ದುದರಿಂದಲೇ ಅವರು ಮಾನವ ಕಲ್ಯಾಣದ ಉದ್ದೇಶದಿಂದ ಧರ್ಮಗಳನ್ನು ಸ್ಥಾಪಿಸಿದರು.

## ಪತಿತೋದ್ಧಾರ-ದಲಿತೋದ್ಧಾರ

ಶ್ರೇಷ್ಠ ಸಮಾಜ ಸುಧಾರಕ ಬಸವಣ್ಣನವರ ಮಾನವತಾವಾದದ ಪರಾಕಾಷ್ಠೆಯನ್ನು ನಾವು ಕಾಣುವುದು ಅವರು ಕೈಗೊಂಡ ಪತಿತೋದ್ಧಾರ ಮತ್ತು ದಲಿತೋದ್ಧಾರದಲ್ಲಿ. ಸಮಾಜದ ಅತ್ಯಂತ ನಿಕೃಷ್ಟ ಮತ್ತು ನಿರ್ಲಕ್ಷಿತ ಸಮೂಹವೆಂದರೆ ಪತಿತರು ಮತ್ತು ಅಸ್ಪೃಶ್ಯರು. ಧರ್ಮವಂತರು ಮಡಿವಂತರಾಗಿ ಈ ಎರಡೂ ವ್ಯಕ್ತಿಗಳವರನ್ನು ಕಾಲ ಕಸಕ್ಕಿಂತಲೂ ಕಡೆಯಾಗಿ ಕಾಣುವಾಗ ಬಸವಣ್ಣನವರು ಅವರತ್ತ ತೋರಿದ ಅನುಕಂಪ ಅಸಾಧಾರಣ.

"ಕೊಲುವವನೇ ಮಾದಿಗ, ಹೊಲಸು ತಿನ್ನುವವನೆ ಹೊಲೆಯ... ಸಕಲ ಜೀವಾತ್ಮರಿಗೆ ಲೇಸನು ಬಯಸುವವನೇ ಕುಲಜ." ಎಂಬ ಬಸವ ಗೀತೆ ಒಂದು ಸಾರ್ವಕಾಲಿಕ ಸಂದೇಶ. ಕೊಲ್ಲುವಿಕೆ, ಹಿಂಸೆ, ಅತ್ಯಾಚಾರ, ಹಲವಾರು ಬಗೆಯಲ್ಲಿ ನಡೆದಿರುತ್ತದೆ. ಅದೇ ರೀತಿ ಹೊಲಸನ್ನು ತಿನ್ನುವುದು ಕೂಡ. ಅಂಥದನ್ನು ಮಾಡುವವರು ಕೀಳೇ ವಿನಾ ಯಾವುದಾದರೊಂದು ಜಾತಿಯಲ್ಲಿ ಹುಟ್ಟಿದವರಲ್ಲ. ವ್ಯಕ್ತಿಯು ಹುಟ್ಟಿದ ಜಾತಿ ಯಾವುದಾದರೂ ಸರಿ. ಆತ ಸಕಲ ಜೀವರ ಲೇಸನ್ನು ಬಯಸುವವನೇ ಆದರೆ ಅವನು ಕುಲಜ. ಪಾಪಿ ಪತಿತರನ್ನು ಕಂಡು ಹೃದಯ ಮಿಡಿದ ಮಾತೃಹೃದಯಿ ಬಸವಣ್ಣನವರು ಅಂಥವರಿಗೆ ಧೈರ್ಯ ತುಂಬುವ ಪರಿ ಅಸಾಮಾನ್ಯವಾಗಿದೆ. "ನೀನು ಅರಿತೋ ಅರಿಯದೆಯೋ ಮಾಡಿದ ಪಾಪ ಹೇಗೆ ಹೋಗುವುದು ಎಂದು ಚಿಂತಿಸಬೇಡ. ಕಹಿ ಸೋರೆಯಕಾಯಿ ಸಿಹಿಯಾಗಬಲ್ಲುದು. ಕಬ್ಬಿಣ ಹೊನ್ನಾಗಬಲ್ಲುದು. ಅಂದಾಗ ನಿನಗೆ ಭವಿಷ್ಯ ಇರದೆ? ದೇವನಿಗೆ ಶರಣಾಗು. ಹೃದಯ ಪಲ್ಲಟ ಹೊಂದು. ನಿನಗೂ ಉತ್ತಮ ಬದುಕು ಲಭ್ಯ."

ಪರಮಾತ್ಮನ ಲೀಲಾರಂಗವಾದ ಜಗತ್ತನ್ನು, ದೇವನ ಕೊಡುಗೆಯಾದ ಮಾನವ ಜೀವನನ್ನು ಬಹುವಾಗಿ ಪ್ರೀತಿಸಿದ ಬಸವಣ್ಣನವರು ಸ್ವಾರ್ಥಿಯೂ ಪಟ್ಟಭದ್ರ ಹಿತಾಸಕ್ತನೂ ಆದ ಮಾನವನು ನಿರ್ಮಾಣ ಮಾಡಿದ ಕೃತ್ರಿಮ ಅಸಮಾನತೆ, ವೈಷಮ್ಯ, ಭೇದಭಾವದ ಅಡ್ಡಗೋಡೆಗಳನ್ನು ತಮ್ಮ ಮಾನವತಾ ವಾದದ ಸೂತ್ರ ಹಿಡಿದು ನಿವಾರಿಸಿ, ಮರ್ತ್ಯದಲ್ಲಿಯೇ ಮಹತ್ತನ್ನು ನೆಲೆಗೊಳಿಸುವ ಅಪೂರ್ವ ಕಾರ್ಯ ಮಾಡಿದರು. *

# 'ಮನೆ ಬಾಗಿಲಿಗೇ ವಿಶ್ವವಿದ್ಯಾನಿಲಯ'

ಮುಣಸವಾಡಿ ರಾಜನ್

ಪಟ್ಟಣಗಳಲ್ಲಿ ಕೇಂದ್ರೀಕೃತವಾಗಿರುವ ಉನ್ನತ ಶಿಕ್ಷಣ ಸೌಲಭ್ಯಗಳನ್ನು ಗ್ರಾಮೀಣ ಭಾಗದ ವಿದ್ಯಾರ್ಥಿಗಳಿಗೂ ವಿಸ್ತರಿಸುವ ದೃಷ್ಟಿಯಿಂದ ಇತ್ತೀಚಿನ ದಿನಗಳಲ್ಲಿ 'ಮನೆ ಬಾಗಿಲಿಗೇ' ವಿಶ್ವವಿದ್ಯಾನಿಲಯಗಳು ಬರುತ್ತಿವೆ. ಗುಣಾತ್ಮಕ ಶಿಕ್ಷಣದ ಧ್ಯೇಯೋದ್ದೇಶಗಳನ್ನು ಕೇವಲ ಜಿಹ್ವಾಚಾಪಲ್ಯಕ್ಕಾಗಿ ಅನ್ವಯ ಮಾಡಿಕೊಂಡಿರುವ 'ಆಧುನಿಕ ಶಿಕ್ಷಣ ಪದ್ಧತಿಯ' ಸಂಸ್ಥೆಗಳು ಪದವೀಧರರನ್ನು ಸೃಷ್ಟಿಸುವ ಹಾಗೂ ಸೋಮಾರಿಗಳನ್ನು ಹುಟ್ಟಿಸುವ ಮತ್ತು ತರುಣ ಜನಾಂಗದ ಆತ್ಮವಿಶ್ವಾಸವನ್ನು ಕಲಕಿ 'ಅಬ್ಬೇಪಾರಿಗಳನ್ನಾಗಿ' ಮಾಡುವ ಸಾಮರ್ಥ್ಯ ಪಡೆದಿವೆ ಎಂಬುದು ಕೇವಲ ಕಟಕಿಯಾಗಿ ಉಳಿದಿಲ್ಲ.

ಪ್ರಸಕ್ತ ಶಿಕ್ಷಣ ಕ್ರಮ ಹಳಸಿದೆ ಎಂಬುದು ನಗ್ನ ಸತ್ಯ. ಭಯೋತ್ಪಾದಕತೆ ಮೂಲೋತ್ಪಾಟನೆ ಜವಾಬ್ದಾರಿಯನ್ನು ಸರ್ಕಾರದ ಹೆಗಲಿಗೆ ಕಟ್ಟುವಂತೆ ಶಿಕ್ಷಣ ಪದ್ಧತಿಯ 'ಅಸತ್ಯ'ಗಳನ್ನು ನಿರ್ಮೂಲ ಮಾಡುವ ಜವಾಬ್ದಾರಿಯನ್ನು ವಿಶ್ವವಿದ್ಯಾನಿಲಯಗಳ ಕೊರಳಿಗೆ ಕಟ್ಟುವುದು ತರವಲ್ಲ. ಯಾಕೆಂದರೆ ಈ ಎಲ್ಲ 'ಸತ್ಯ' ಹಾಗೂ 'ಅಸತ್ಯ'ಗಳ ತಾಯಿ ಬೇರು ಇರುವುದು ಸಮಾಜದಲ್ಲಿ. ಹಾಗಿದ್ದರೂ ಶಿಕ್ಷಣ-ಶಿಕ್ಷಕ-ವಿದ್ಯಾರ್ಥಿ-ಅಶಿಸ್ತು ಇಂದು ಎಲ್ಲ ಜನರ ಬಾಯಿ ತಾಂಬೂಲ.

ಶಿಕ್ಷಕರನ್ನು ವಿದ್ಯಾರ್ಥಿಗಳೂ, ವಿದ್ಯಾರ್ಥಿಗಳನ್ನು ಶಿಕ್ಷಕರೂ ಹಾಗೂ ಈ ಎರಡೂ ಅಲ್ಲದವರು ಶಿಕ್ಷಣ ವ್ಯವಸ್ಥೆಯನ್ನು ನಿಂದಿಸುವುದು ಸರ್ವೇ ಸಾಮಾನ್ಯ. ಕೊಳೆತ ಸಮಾಜದ ಕೊಳೆತ ಶಿಕ್ಷಣ ವ್ಯವಸ್ಥೆಯನ್ನು ನಿಂದಿಸುವುದು ಕನ್ನಡಿಯಲ್ಲಿನ ತನ್ನ ಬಿಂಬವನ್ನು ತಾನೇ ನಿಂದಿಸಿದಂತೆ.

ವಿಶ್ವವಿದ್ಯಾನಿಲಯ ಹಾಗೂ ಶಾಲಾ ಕಾಲೇಜುಗಳನ್ನು ಮುಚ್ಚುವ ಮೂಲಕ ಇದಕ್ಕೆ ಪರಿಹಾರ ಕಂಡುಹಿಡಿಯಬಹುದೆಂಬುದು ಕೇವಲ ಬಾಲಿಶ ಭ್ರಮೆ. ಬೀಜ-ವೃಕ್ಷ ನ್ಯಾಯದಂತಹ ಗೋಜಲು ಸಮಸ್ಯೆಗಳ ನಡುವೆಯೂ 'ಮನೆ ಬಾಗಿಲಿಗೇ' ವಿಶ್ವವಿದ್ಯಾನಿಲಯಗಳು ಬರುತ್ತಿವೆ.

ಪ್ರತಿಯೊಬ್ಬ ವ್ಯಕ್ತಿಯು ತನ್ನ ಭವಿಷ್ಯದ ಬಗ್ಗೆ ಸುಂದರವಾದ ಕನಸುಗಳನ್ನು ಕಾಣುವಂತೆ, ಆ ಕನಸುಗಳನ್ನು ನನಸಾಗಿಸಲು ಹೆಣಗುವಂತೆ ಇದೀಗ ಕಣ್ತೆರೆಯುತ್ತಿರುವ ಮನೆ ಬಾಗಿಲಿನ ವಿಶ್ವವಿದ್ಯಾನಿಲಯಗಳು ಹೊಸ ಆಶೋತ್ತರಗಳನ್ನು ಹೊತ್ತು ಬರುತ್ತಿವೆ.

ಇಂತಹ ಭವ್ಯ ಕನಸುಗಳನ್ನು ಕಟ್ಟಿಕೊಂಡು ಮಲೆನಾಡಿನ ತಪ್ಪಲಿನಲ್ಲಿ ಕುವೆಂಪು ವಿಶ್ವವಿದ್ಯಾನಿಲಯ ಇತ್ತೀಚೆಗೆ ಕಾರ್ಯಾರಂಭ ಮಾಡಿದೆ.

ಕರ್ನಾಟಕದ ಸಂದರ್ಭದಲ್ಲಿ ಕುವೆಂಪು ಎಂಬ ಹೆಸರೇ ಅದ್ಭುತ. ಈ ವಿಶ್ವವಿದ್ಯಾನಿಲಯಕ್ಕೆ ರಾಷ್ಟ್ರಕವಿಯ ಹೆಸರನ್ನು ಇಟ್ಟಿರುವುದು ಅರ್ಥಪೂರ್ಣ. ಕುವೆಂಪು ಎಂದರೆ ಸಹ್ಯಾದ್ರಿ-ಮಲೆನಾಡು-ಕನ್ನಡ-ವಿಶ್ವಮಾನವ ಎಲ್ಲಾ ಆಗಬಹುದು.

ಕುವೆಂಪು ವಿಶ್ವವಿದ್ಯಾನಿಲಯದ ಪ್ರಥಮ ಉಪಕುಲಪತಿ ಡಾ|| ಶಾಂತಿನಾಥ ದೇಸಾಯಿ ಅವರೊಂದಿಗೆ ನಡೆಸಿದ ಸಂವಾದದಲ್ಲಿ ಅವರು ಶಿಕ್ಷಣ ಪದ್ಧತಿಯೂ ಸೇರಿದಂತೆ ಹಲವು ಸಮಸ್ಯೆಗಳನ್ನು ಕುರಿತು ಚರ್ಚಿಸಿದ್ದಾರೆ. ಸಂವಾದದ ಕೆಲವು ಭಾಗಗಳನ್ನು ಇಲ್ಲಿ ಕೊಡಲಾಗಿದೆ:



ಪ್ರಶ್ನೆ :ನಿಮ್ಮ ಪ್ರಕಾರ ವಿಶ್ವವಿದ್ಯಾನಿಲಯದ ಪರಿಕಲ್ಪನೆ ಏನು?

ದೇಸಾಯಿ:ಪಾಶ್ಚಾತ್ಯರ ಕಲ್ಪನೆಗೂ ನಮ್ಮ ಕಲ್ಪನೆಗೂ ವ್ಯತ್ಯಾಸವಿದೆ. ಭಾರತೀಯ ಸಂದರ್ಭದಲ್ಲಿ ಪಾಶ್ಚಾತ್ಯರ ವಾದಸರಣಿ ಅಗ್ರಾಹ್ಯ. ಪ್ರಾದೇಶಿಕ ಅವಶ್ಯಕತೆ ಹಾಗೂ ಸೌಲಭ್ಯಗಳನ್ನು ಅನುಗುಣವಾಗಿ ಬೆಳೆಸಿಕೊಳ್ಳುವ ಸಂಸ್ಥೆಯಾಗಿ ವಿಶ್ವವಿದ್ಯಾನಿಲಯಗಳು ರೂಪುಗೊಳ್ಳಬೇಕು. ಉಪಜೀವನಕ್ಕೆ ಇಂದಿನ ಸಂದರ್ಭದಲ್ಲಿ ಡಿಗ್ರಿಗಳು ತೀರಾ ಅನಿವಾರ್ಯ. ಅದನ್ನು ಕೊಡುವುದೂ ಅಷ್ಟೇ ಅಗತ್ಯ.

ಪ್ರಶ್ನೆ :ಅಂದರೆ ....

ದೇಸಾಯಿ:ಪದವಿ ಶಿಕ್ಷಣ ಹಾಗೂ ಕೆಳಹಂತದ ಶಿಕ್ಷಣದಲ್ಲಿ ವಿದ್ಯಾರ್ಥಿಗಳ ಬಗ್ಗೆ ಶಿಕ್ಷಕರ ಅನುಕಂಪ ದೃಷ್ಟಿ ಇರಬೇಕು. ನಮ್ಮಲ್ಲಿ ಬಹಳಷ್ಟು ಮಂದಿ ಆರ್ಥಿಕ ದುಸ್ಥಿತಿಯ ನಡುವೆ ಕೂಡ ಡಿಗ್ರಿ ಪಡೆಯಲು ಬರುತ್ತಾರೆ. ಪರಿಸ್ಥಿತಿಯನ್ನು ಅರಿಯದೇ ಕಾಠಿಣ್ಯ ಭಾವದಿಂದ ನೋಡಿದಾಗ ಸಮಸ್ಯೆ ಮತ್ತಷ್ಟು ಗೋಜಲಾಗುತ್ತದೆ. ಸಮಾಜದ ಎಲ್ಲರಿಗೆ ಶಿಕ್ಷಣ ದೊರಕಿಸುವ ದೃಷ್ಟಿಯಿಂದ ಅನುಕಂಪ ಧೋರಣೆ ಇರುವುದು ತಪ್ಪೇನಲ್ಲ. ಆದರೆ ಇದೇ ವಿಷಯವನ್ನು Higher Studiesಗೆ ಹೇಳಲು ಬರುವುದಿಲ್ಲ. ಬುದ್ಧಿವಂತರಿಗೆ ಮಾತ್ರ Higher Studies. ಅಲ್ಲದ ಶಿಕ್ಷಕರು ತುಂಬಾ Rigorous ಆಗಿ ಇರಬೇಕು.

ಪ್ರಶ್ನೆ :ಕುವೆಂಪು ವಿಶ್ವವಿದ್ಯಾನಿಲಯದ ಬಗ್ಗೆ ನಿಮ್ಮ ಕಲ್ಪನೆ?

ದೇಸಾಯಿ:ಕುವೆಂಪು ಸೃಜನ ಶಕ್ತಿಯ ಸಂಕೇತ. ಆ ಹೆಸರೇ ಅದ್ಭುತ ಕಲ್ಪನೆ. ಶಾಂತಿನಿಕೇತನದ ಮಾದರಿಯಲ್ಲಿ ವಿಶ್ವಮಾನವ ಕಲ್ಪನೆಯ ಭದ್ರ ಅಡಿಪಾಯದಲ್ಲಿ ಸಂಸ್ಥೆಯನ್ನು ಕಟ್ಟಬೇಕಾಗಿದೆ. ಪರಿಸರ ಮತ್ತು ಮನುಷ್ಯ ಸಂಬಂಧಗಳಿಗೆ ಆದ್ಯತೆ ನೀಡುವುದು ನನ್ನ ಉದ್ದೇಶ. ಡಿಗ್ರಿ ಕೊಡುವ ಹಾಗೂ ಪ್ರಾದೇಶಿಕ ಅಗತ್ಯಗಳನ್ನು ಪೂರೈಸುವುದರ ಜತೆಗೆ ಗ್ರಾಮೀಣಾಭಿವೃದ್ಧಿ ಶಿಕ್ಷಣಕ್ಕೆ ಒತ್ತು.

ವಿದ್ಯಾಭ್ಯಾಸಕ್ಕೆ ಇರುವ ಎಲ್ಲಾ ಅಡಚಣೆಗಳನ್ನು ನಿವಾರಿಸಿ ಹೆಣ್ಣುಮಕ್ಕಳು ಹಾಗೂ ಇತರ ದುರ್ಬಲ ವರ್ಗದವರ ಶಿಕ್ಷಣಕ್ಕೆ ಅವಕಾಶ ಮಾಡಿಕೊಡಬೇಕು. ಎಲ್ಲಾ ಪ್ರಾದೇ

ಶಿಕ ಸಾಧ್ಯತೆಗಳನ್ನು ದುಡಿಸಿಕೊಳ್ಳು ವುದು ನಮ್ಮ ಮುಂದಿರುವ ಗುರಿ.

ಪ್ರಶ್ನೆ :ಪರೀಕ್ಷಾ ಕ್ರಮದ ಬಗ್ಗೆ ಟೀಕೆ-ಟಿಪ್ಪಣಿ ಗಳು ಕೇಳಿ ಬಂದಿವೆ. ಈ ಬಗ್ಗೆ ನಿಮ್ಮ ನೀತಿಯೇನು?

ದೇಸಾಯಿ:ಶಿವಾಜಿ ವಿಶ್ವವಿದ್ಯಾನಿಲಯದ ಮಾದರಿಯಲ್ಲಿ ಪರೀಕ್ಷಾಕ್ರಮ ರೂಪಿಸುವ ಉದ್ದೇಶವಿದೆ. ತರ ಬೇತಿ ಪಡೆದ ಅಧಿಕಾರಿಗಳು ಪರೀಕ್ಷಾ ವಿಧಾನಗಳಲ್ಲಿ ಪಾಲ್ಗೊಳ್ಳ ಬೇಕೆಂಬುದು ನನ್ನ ಖಚಿತ ನಿಲುವು

ಪ್ರಶ್ನೆ :ನೀವು ಮೂಲತಃ ಒಬ್ಬ ಬರಹ ಗಾರರು. ಉಪಕುಲಪತಿಗಳಾಗಿ ನೇಮಕಗೊಂಡಿರುವ ಈ ಸಂದರ್ಭ ದಲ್ಲಿ ನಿಮ್ಮ ಸೃಜನಶೀಲತೆ ಕುಂಠಿತ ವಾಗುವುದು ಎಂದೆನಿಸುವುದಿಲ್ಲವೆ?

ದೇಸಾಯಿ:ಉಪಕುಲಪತಿಯಾಗಿ ನೇಮಕ ಗೊಂಡಿರುವುದು ನನ್ನ ಕರ್ತೃತ್ವದ ಶಕ್ತಿಗೆ ನೀಡಿದ ಆಹ್ವಾನ. ಇದೊಂದು ಸವಾಲು ಎಂಬುದನ್ನು ಒಪ್ಪುತ್ತೇನೆ. ಉಪಕುಲಪತಿಯಾಗಿ ಗಳಿಸುವ ಅನುಭವ ಕೂಡ ನನ್ನ ಮುಂದಿನ ಕೃತಿಗಳಿಗೆ ವಸ್ತುವಾಗ ಬಲ್ಲದು. ಮರಾಠವಾಡ, ಶಿವಾಜಿ ಹಾಗೂ ಕರ್ನಾಟಕ ವಿಶ್ವವಿದ್ಯಾ ನಿಲಯಗಳ ಆರಂಭ ದಿನಗಳಲ್ಲಿ ಕೆಲಸ ಮಾಡಿ ಅನುಭವ ಪಡೆ ದಿದ್ದೇನೆ. ಆ ಅನುಭವ ನನಗೆ ಮಾರ್ಗದರ್ಶನ ಮಾಡಬಲ್ಲದು.

ಪ್ರಶ್ನೆ :ರಾಜಕಾರಣಿಗಳ ಮಧ್ಯ ಪ್ರವೇಶದ ಬಗ್ಗೆ....

ದೇಸಾಯಿ:ಈ ಶಕ್ತಿಗಳ ಕೈವಾಡ ಸಹಜ. ಆದರೆ ಭ್ರಾತಿಯಿಂದ ನಿಭಾಯಿಸುವ ಮೂಲಕ ಇಕ್ಕಟ್ಟಿನಿಂದ ಪಾರಾಗ ಬಹುದು. ಬುದ್ಧಿಜನ್ಯವಾದ ತರ್ಕ ಮುಂದುಮಾಡಿದಾಗ ರಾಜಕಾರಣಿ ಗಳೂ ಸಹ ನಮ್ಮ ನಿಲುವನ್ನು ಒಪ್ಪು ತ್ತಾರೆ.

ರಾಜಕಾರಣಿಗಳ ಹಾಗೂ ನಮ್ಮ ಕಾಳಜಿಗಳು ಬೇರೆ ಬೇರೆ. ಶಿಕ್ಷಣದ ಮೌಲ್ಯಗಳನ್ನು ಬಿಡದೇ ಜನತಂತ್ರ ವಿಧಾನದ ಮೂಲಕ ವಿಶ್ವವಿದ್ಯಾ ನಿಲಯ ಕಟ್ಟುವುದು ನನ್ನ ಉದ್ದೇಶ.

ಕುವೆಂಪು ವಿಶ್ವವಿದ್ಯಾನಿಲಯ ಸಾಂಸ್ಕೃತಿಕ ಕೇಂದ್ರವಾಗಬೇಕು. ಸದಾ ಜೀವಂತ ವಾತಾವರಣ -ನಾಟಕ -ಚರ್ಚೆ -ಸಂಕಿರಣ ಹೀಗೆ ಏನಾದರೂ ಜರುಗುತ್ತಿರಬೇಕು. we should take it to the people.

ಪ್ರಶ್ನೆ :ಜನತಾ ಸರ್ಕಾರ ಅಧಿಕಾರಕ್ಕೆ ಬಂದ ನಂತರ ಸೃಜನಶೀಲ ವ್ಯಕ್ತಿ ಗಳನ್ನು ಜವಾಬ್ದಾರಿ ಸ್ಥಾನಗಳಲ್ಲಿ ಕೂಡಿಸುವ ಪರಂಪರೆ ಆರಂಭ ವಾಗಿದೆ. ಅದೇ ಅರ್ಥದಲ್ಲಿ ಮುಂದುವರೆದು ನೋಡಿದಾಗ ಸೃಜನಶೀಲರಂಗ ಬದಲಾಗಿರು ವುದು ಕಾಣುತ್ತದೆ. ಈ ಪ್ರವೃತ್ತಿ ಬಗ್ಗೆ ಏನನ್ನುತ್ತೀರಿ?

ದೇಸಾಯಿ:ಸಬೂಬುಗಳನ್ನು ಮುಂದುಮಾಡಿ ಜವಾಬ್ದಾರಿ ಸ್ಥಾನಗಳನ್ನು ನಿರಾಕರಿ ಸುವುದು ಸರಿಯಲ್ಲ. ಬದಲಿಗೆ ಅವ ಕಾಶ ದೊರೆತಾಗ ಜವಾಬ್ದಾರಿ ಸ್ಥಾನಗಳನ್ನು ಸಮರ್ಥವಾಗಿ ನಿರ್ವಹಿಸಬೇಕು. ಇಲ್ಲದೇ ಹೋದರೆ 'ವ್ಯರ್ಥ ಟೀಕೆ' ಮಾಡುವ ವರ್ಗಕ್ಕೆ ಸೇರಿದವರು ಎಂಬ ನಿಂದ ನೆಗೆ ಗುರಿಯಾಗುತ್ತೇವೆ.

ಪ್ರಶ್ನೆ :ರಾಜಕೀಯ ಉದ್ದೇಶಗಳಿಂದ ಸೃಜನಶೀಲರನ್ನು ಅಧಿಕಾರ ಸ್ಥಾನ ದಲ್ಲಿ ಕೂಡಿಸಿ ಜನಪದ ಚಳವಳಿ ಯನ್ನು ನಾಜೂಕಾಗಿ ಹತ್ತಿಕ್ಕಲು ಪ್ರಯತ್ನಗಳು ನಡೆಯುತ್ತಿವೆ ಅಂತಾ ರಲ್ಲ...?

ದೇಸಾಯಿ:ಇದು ತುಂಬಾ ನಾಜೂಕಾದ ಪ್ರಶ್ನೆ. ಒಂದು ವಿಷಯ; ರಾಜಕಾರಣಿ ಗಳೂ ಸಹ ಈ ಸಮಾಜದಿಂದ ಒಡ ಮೂಡಿದವರು ಎಂಬುದನ್ನು ಗಮನಿಸಬೇಕು. *

# ವಿಚಾರ ಕ್ರಾಂತಿಗೆ ಆಹ್ವಾನ

ನಮ್ಮ ಪ್ರಜಾಸತ್ತೆ ಕಲುಷಿತವಾಗಲು ಹಣ ಒಂದೇ ಕಾರಣವೆಂದು ತಿಳಿಯುವುದು ತಪ್ಪಾಗುತ್ತದೆ. ಇವೆಲ್ಲಕ್ಕೂ ಮಹತ್ವದ ಮತ್ತು ಮೂಲಭೂತವಾದ ಮತ್ತೊಂದು ಕಾರಣವೂ ಇದೆ ನಮ್ಮ ಪುಣ್ಯಭೂಮಿ ಭಾರತದಲ್ಲಿ! ಅದು ಒಂದು ಅಮೂರ್ತ ವಸ್ತು. ಅದು ಹಾಕಿಕೊಂಡಿರುವ ವೇಷದಿಂದ ತುಂಬ ಸಾಧು ಮತ್ತು ಪೂಜ್ಯ ಎಂಬಂತೆ ತೋರುತ್ತದೆ. ಅದು ಭಾವರೂಪಿಯಾದುದರಿಂದ ಅತಿ ಸೂಕ್ಷ್ಮವಾಗಿ ಹೃದಯ ಪ್ರವೇಶ ಮಾಡಿ ನಮ್ಮನ್ನು ಆಕ್ರಮಿಸುತ್ತದೆ. ಮತ್ತು ನಮ್ಮಲ್ಲಿ ನಿಜವಾಗಿಯೂ ಇರುವ ಒಂದು ಅನಿರ್ವಚನೀಯ –ಅತ್ಯಂತ ಅಂತರತಮ– ಸತ್ಯಸ್ಯ ಸತ್ಯವಾದ ಸನಾತನ ತತ್ತ್ವಕ್ಕೆ (ಅದನ್ನು ಆಧ್ಯಾತ್ಮ ಎಂದು ಹೆಸರಿಸುತ್ತೇನೆ) ಅದು ತನ್ನ ಬಾಂಧವ್ಯವನ್ನೂ ಘೋಷಿಸುತ್ತಾ ಬಂದಿರುವುದರಿಂದಲೂ ಮತ್ತು ಅದನ್ನೆ ತಾನು ಘೋಷಿಸುತ್ತಿರುವುದಾಗಿ ಹೇಳುತ್ತಲೂ ಇರುವುದರಿಂದಲೂ ಅದರ ಪ್ರಚ್ಛನ್ನ ವಂಚನೆಯ ಮುಷ್ಟಿಯಿಂದ ತಪ್ಪಿಸಿಕೊಳ್ಳುವುದೂ ಕಷ್ಟಸಾಧ್ಯವಾಗಿದೆ. ಅದರ ಹೆಸರು 'ಮತ'! ಈ ಮತಭ್ರಾಂತಿಯಿಂದ ಲೋಕಕ್ಕೆ ಆಗಿರುವಷ್ಟು ಹಾನಿ ಮತ್ತಾವುದರಿಂದಲೂ ಆಗಿಲ್ಲ ಎಂದು ತೋರುತ್ತದೆ. ಇನ್ನು ಮುಂದೆಯಾದರೂ ನೀವು ಆಧ್ಯಾತ್ಮವನ್ನು ಉಳಿಸಿಕೊಂಡು ಮತ ಮತ್ತು ಅದರಿಂದ ಜನ್ಯವಾಗಿ ಮತಭ್ರಾಂತಿ ಮತ್ತು ಮತ ಮೌಢ್ಯಗಳನ್ನು ನಿರಾಕರಿಸದಿದ್ದರೆ ನಿಜವಾದ ಪ್ರಜಾಸತ್ತೆಯಾಗಲಿ, ಸಮಾಜವಾದವಾಗಲಿ, ಸಮಾನತಾಭಾವ ಸ್ಥಾಪನೆಯಾಗಲಿ ಎಂದೆಂದಿಗೂ ಸಾಧ್ಯವಾಗುವುದಿಲ್ಲ.

ಐಕ್ಯಕ್ಕೂ ಮೈತ್ರಿಗೂ ಸಾಧನವಾಗುವ ಆ ಚಿರಂತನ ಆಧ್ಯಾತ್ಮವನ್ನು ಈ ಅಜ್ಞಾನಜನ್ಯವಾದ ಮತಭಾವನೆ ಆಕ್ರಮಿಸಿ ವರ್ಣ ಜಾತಿ ಪಂಥ ಕೋಮು ಪಂಗಡಗಳೆಂಬ ನೂರಾರು ಭೇದಭಾವನೆ ಗಳ ಬಿರುಕು ಒಡಕುಗಳಿಗೆ ಸಮಾಜವು ಸಿಕ್ಕಿ ಛಿದ್ರ ಛಿದ್ರವಾಗುವಂತೆ ಮಾಡಿದೆ. ಈ ಭೇದಭಾವ ಗಳೂ ಛಿದ್ರಗಳೂ ಎಲ್ಲಿಯವರೆಗೆ ಇರುತ್ತವೆಯೋ ಅಲ್ಲಿಯವರೆಗೆ ನಿಜವಾದ ಸಮಾನತಾ ಭಾವನೆಯ ಪ್ರಜಾಸತ್ತೆ ಬರಿಯ ಮರುಮರೀಚಿಕೆಯ ಭ್ರಾಂತಿ ಜಲವಾಗುತ್ತದೆ. ಆದ್ದರಿಂದ ಸಮಾಜವಾದದ ಪ್ರಜಾಸತ್ತೆ ನಿಮ್ಮ ಗುರಿಯಾಗಿದ್ದರೆ ಮತಭಾವನೆಯ ಶನಿ ಸಂತಾನವಾದ ಜಾತಿ ಪದ್ಧತಿಯ ಸಂಪೂರ್ಣ ವಿನಾಶಕ್ಕೆ ನೀವು ಕಂಕಣ ಕಟ್ಟಿಕೊಂಡು ಹೋರಾಡಬೇಕು.

ಈ ಬಿರುಕು-ಒಡಕುಗಳಿಗೆ ಮತ್ತು ಭೇದಭಾವನೆಗಳಿಗೆ ಮೂಲಕಾರಣ ಎಲ್ಲಿದೆ ಎಂಬುದನ್ನು ಹುಡುಕಿ, ನೀವು ಅದರ ಬೇರಿಗೆ ಬೆಂಕಿ ಹೊತ್ತಿಸಿ ಸಮಾನತೆಯನ್ನು ಸಾಧಿಸಬೇಕಾಗಿದೆ. ಮೊದಲು ನಿಮ್ಮ ನಿಮ್ಮ ಹೃದಯಗಳನ್ನೆ ಶೋಧಿಸಿಕೊಳ್ಳಬೇಕು. ಶತಮಾನಗಳ ಬೋಧನೆ ಮತ್ತು ನಂಬಿಕೆಗಳ ಫಲವಾಗಿ ನಿಮ್ಮ ವಿಚಾರಶಕ್ತಿಯೆ ಕುಂಠಿತವಾಗಿ ಹೋಗಿದೆ. ವಿಜ್ಞಾನ ಸಂಪನ್ನವಾದ ಪಾಶ್ಚಾತ್ಯ ನಾಗರಿಕತೆ ನಮ್ಮನ್ನು ಇನ್ನೂರು ವರ್ಷ ಆಳಿದರೂ ಅದರ ವಿಜ್ಞಾನ ಸೃಷ್ಟಿಸಿದ ಯಂತ್ರ ನಾಗರಿಕತೆಯನ್ನು ಅನುಕರಿಸಿದೆವೆ ಹೊರತು ವೈಜ್ಞಾನಿಕ ದೃಷ್ಟಿ ನಮ್ಮದಾಗಲಿಲ್ಲ; ಮತ್ತು ಆ ವೈಜ್ಞಾನಿಕ ದೃಷ್ಟಿಗೂ ತಾಯಿ ಬೇರಾದ ವೈಚಾರಿಕತೆಯನ್ನೂ ನಾವು ಮೈಗೂಡಿಸಿಕೊಳ್ಳಲಿಲ್ಲ. ಇನ್ನು ಮುಂದಾದರೂ ನಾವು ವೈಜ್ಞಾನಿಕ ದೃಷ್ಟಿಯ ಮತ್ತು ವೈಚಾರಿಕ ಬುದ್ಧಿಯ ನೆರವಿನಿಂದ ನಮ್ಮ ನಾಡಿನ ರಾಜಕೀಯ, ಸಾಮಾಜಿಕ ಮತ್ತು ಮತ ಧಾರ್ಮಿಕ ರಂಗಗಳನ್ನು ಪರಿಶೋಧಿಸದಿದ್ದರೆ ನಮಗೆ ಕೇಡು ತಪ್ಪದು. *

*[ಬೆಂಗಳೂರು ವಿಶ್ವವಿದ್ಯಾನಿಲಯದ ಹತ್ತನೆಯ ಘಟಿಕೋತ್ಸವ (1974) ಸಮಾರಂಭದಲ್ಲಿ ಕುವೆಂಪು ಅವರು ಮಾಡಿದ ಭಾಷಣದಿಂದ]*

## 'ತಾರಾಮೃತ್ತಿಕೆ'

# ಅದೇ ಇವನ ಕಸುಬು

• ಎಂ.ಎಸ್.ಎಸ್. •

ತಮಿಳುನಾಡಿನ ಮುಖ್ಯಮಂತ್ರಿ ಎಂ.ಜಿ. ರಾಮಚಂದ್ರನ್ ನಿಧನರಾದಾಗ ಕೇಳಿ ಬಂದ ಹಲವಾರು ಸುದ್ದಿಗಳಲ್ಲಿ ಒಂದು: 'ಎಂ.ಜಿ.ಆರ್' ಸ್ನಾನ ಮಾಡಿದ ನೀರನ್ನು ತೀರ್ಥದಂತೆ ಮಾರಲಾಗುತ್ತಿತ್ತು. ಅದನ್ನು ಮಕ್ಕಳಿಲ್ಲದ ವಿವಾಹಿತ ಹೆಂಗಸರು ಪವಿತ್ರ ಜಲವೆಂದು ಸ್ವೀಕರಿಸುತ್ತಿದ್ದರು. ಎಂ.ಜಿ.ಆರ್. ಸಂತಾನ ತಮ್ಮಲ್ಲಿ ಅರಳುವುದೆಂಬುದು ಅವರ ನಂಬಿಕೆಯಾಗಿತ್ತು.

ಹುಚ್ಚುತನ ಎನ್ನುತ್ತೀರಾ? ಇರಬಹುದು. ಆದರ ಇಂಥದೇ ಹುಚ್ಚುತನ 'ತಾರಾ ಸಮರ'ಕ್ಕೆ ಸಿದ್ಧವಾಗಿರುವ ಅಮೆರಿಕದಲ್ಲೂ ಇದೆ ಎಂದರೆ ನಂಬುತ್ತೀರಾ? ನೀವು ನಂಬದಿದ್ದರೂ, ಅದು ಇರುವುದಂತೂ ನಿಜ!

ಮಿಚಿಗನ್‌ನ ಟ್ರಕ್ ಡ್ರೈವರ್ ಬ್ಯಾರಿ ಗಿಬ್ಸನ್ ಒಮ್ಮೆ ತನ್ನ ಸೋದರ ಸಂಬಂಧಿಯ ಮನೆಗೆ ಹೋದಾಗ, ಆಕೆ ಹಳೆಮನೆಗೆ ಹೊಸ ರೂಪ ಕೊಡುವ ತಲೆ ಬಿಸಿಯಲ್ಲಿ ಒಂದು ಮಾತಾಡಿದಳು: "ಈ ಪುರಾತನ ಮಣ್ಣಿನಲ್ಲಿ ನಾನು ಹೂತು ಹೋಗಿದ್ದೇನೆ!" —ಗಿಬ್ಸನ್‌ಗೆ ಅನ್ನಿಸಿತು: 'ಈ ಪುರಾತನ ಮಣ್ಣನ್ನು ಇಷ್ಟಪಡುವರಿದ್ದರೆ, ಅವರಿಗೇಕೆ ಇದನ್ನು ಒಪ್ಪಿಸಬಾರದು?'

—ಇದೇ ಪ್ರಶ್ನೆ ಗಿಬ್ಸನ್‌ನ ತಲೆ ಕೆರೆಯಲಾರಂಭಿಸಿದಾಗ ಸಿಕ್ಕ ಉತ್ತರ— 'ಪ್ರಯತ್ನಿಸಿ ನೋಡು!!

ಆಗ ಹುಟ್ಟಿದ್ದು "ಸೆಲೆಬ್ರಿಟಿ ಡರ್ಟ್ ಡಿಗ್ಗರ್ಸ್." ಜಾರ್ಜ್ ವಾಷಿಂಗ್ಟನ್ ಹುಟ್ಟಿದ ಊರಿನ ಮಣ್ಣಿನ ಸಂಗ್ರಹದಿಂದ ಆರಂಭವಾದ ಈ ಸವಾಲು, "ನೀವು ಇಚ್ಛಿಸುವ ಯಾವುದೇ ಸಿನಿಮಾ ತಾರೆಯ ಮನೆಯಂಗಳದ ಮಣ್ಣು ನಿಮಗೆ ಬೇಕೆನಿಸಿದರೆ ಇಲ್ಲಿ ಸಿದ್ಧ! ನಿಮ್ಮ ಹೀರೋ —ಅಥವಾ ಹೀರೋಯಿನ್— ನಡೆದಾಡಿದ ನೆಲ— ಬೇಕೇ ನಿಮಗೆ?"— ಎಂಬಲ್ಲಿಗೆ ಬಂದು ಮುಟ್ಟಿತು.

'ಬೇಕು' — ಎಂದರು ಅನೇಕ ಮಂದಿ. ಗಿಬ್ಸನ್ ತನ್ನ ಸಾಹಸ ಆರಂಭಿಸಿದ. ಮೊದಲಿಗೆ ಕೆಲವು ಪ್ರಮುಖ ತಾರೆಯರಿಗೆ 'ನಿಮ್ಮ ಮನೆಯಂಗಳದ ಒಂದಿಷ್ಟು ಮಣ್ಣು ಬೇಕು. ತ್ರಗ

ಯಲು ಅವಕಾಶ ಕೊಡುವಿರಾ?' ಎಂದು ಪತ್ರ ಬರೆದ. ಅನೇಕ ತಾರೆಯರು ಉತ್ತರಿಸಲೇ ಇಲ್ಲ. ಕೆಲವರು 'ನಿನಗೆಲ್ಲೋ ಹುಚ್ಚು' – ಎಂದರು.

ಗಿಬ್ಸನ್ ಎದೆಗೆಡಲಿಲ್ಲ. 'ನ್ಯಾಯವಾಗಿ ಸಿಗದಿದ್ದರೆ ಕದಿ' ಎಂಬ ನೀತಿ ಅವನದು. ಒಬ್ಬ ಡ್ರೈವರ್ ಜೊತೆ ಹಾಲಿವುಡ್‌ಗೆ ಹೊರಟ. ಚಿತ್ರ ನಟರ ಮನೆಗಳನ್ನೆಲ್ಲಾ ಪತ್ತೆ ಹಚ್ಚಿದ. ಪಿಕಾಸಿ ಹಿಡಿದು, ಜೀನ್ಸ್ ಧರಿಸಿ ಹೊರಟ ಇವನನ್ನು ಸಾಮಾನ್ಯವಾಗಿ ಯಾರೂ ಅನುಮಾನಿಸಲಿಲ್ಲ. "ನಾನಾದರೂ ಅಷ್ಟೆ. ಮೆಲ್ಲನೆ ಅವರ ಮನೆಗೆ ಹೊಕ್ಕು, ಸ್ವಲ್ಪವೇ ಸ್ವಲ್ಪ ಮಣ್ಣನ್ನು ಕೆತ್ತಿ, ಹೊರ ಬರುತ್ತಿದ್ದೆ" ಎನ್ನುತ್ತಾನೆ ಗಿಬ್ಸನ್.

ಹೀಗೆ ಸಂಗ್ರಹಿಸಿದ ಮಣ್ಣನ್ನು, ಆಯಾ ತಾರೆಯರ ಹೆಸರಿನೊಂದಿಗೆ ಪುಟ್ಟ ಪೊಟ್ಟಣದಲ್ಲಿ ಗಿಬ್ಸನ್ ಮಾರಲಾರಂಭಿಸಿದ. ಮೆಡೋನಾ, ಮೈಕೆಲ್ ಜಾಕ್ಸನ್, ಮೆರಿಲ್ ಸ್ಟ್ರೀಪ್, ಎಲಿಜಬೆತ್ ಟೇಲರ್, ಕ್ಯಾಥರೀನ್ ಹೆಪ್‌ಬರ್ನ್, ಪಾಲ್ ನ್ಯೂಮನ್, ಶಿಲ್ವೆಸ್ಟರ್ ಸ್ಟಾಲೋನ್, ಚಾರ್ಲ್‌ಟನ್ ಹೆಸ್ಟನ್, ಬಾರ್ಬರಾ ಸ್ಟ್ರೈಸಂಡ್ ನಿಮಗೆ ಯಾರ ಮನೆ ಮಣ್ಣು ಬೇಕು– ನನ್ನಲ್ಲಿದೆ– ಎನ್ನತೊಡಗಿದ. ದೊಂಬಿಯೋ ದೊಂಬಿ. ಒಂದು ಪುಟ್ಟ ಪೊಟ್ಟಣಕ್ಕೆ 5.95 ಡಾಲರಿನಂತೆ ಗಿಬ್ಸನ್ ಮಾರತೊಡಗಿದ. ಮಾರುಕಟ್ಟೆಗೆ ಬಂದ ಕೂಡಲೇ ಈ ಮಣ್ಣು ಮಾರಾಟ! ಗಿಬ್ಸನ್‌ನ ಅದೃಷ್ಟ ಖುಲಾಯಿಸಿತ್ತು. ಭೂಮಿ ಮಾರಿ ಕುಬೇರರಾದವರ ಕಥೆ ನಾವು ಕೇಳಿದ್ದುಂಟು. ಮಣ್ಣು ಮಾರಿ ಶ್ರೀಮಂತನಾದ ಗಿಬ್ಸನ್ ನಮಗೆ ಹೊಸ ಪರಿಚಯ.

★

"ಅದೇನೂ ಸುಲಭದ ಕೆಲಸ ಎಂದುಕೊಳ್ಳಬೇಡಿ" ಎನ್ನುತ್ತಾನೆ ಗಿಬ್ಸನ್. ಅತಿ ಜೋಪಿಕೆಯಿದ್ದ ಡಾಲಿ ಪಾರ್ಟನ್‌ನ ಮನೆಯ ಮಣ್ಣು "ಕದಿಯಲು" ಪ್ರಯತ್ನಿಸುತ್ತಿದ್ದಾಗ ಪೊಲೀಸರ ವ್ಯಾನು ಮನೆ ಮುಂದೆ ಬಂದು ನಿಂತಿತು. "ಕ್ಷಣ ಕಾಲ ದಿಗ್ಭ್ರಮೆಗೊಂಡ ನಾನು, 'ನನ್ನದೊಂದು ಫೋಟೋ ತೆಗೀರಿ, ನಾನೊಬ್ಬ ಪ್ರವಾಸಿ ಎಂಬುದು ಗೊತ್ತಾಗುತ್ತೆ' ಎಂದೆ. ಪೊಲೀಸರ ವಾಹನ ಹಾಗೆಯೇ ಮುಂದೆ ಹೋಯಿತು" – ಎನ್ನುತ್ತಾರೆ ಗಿಬ್ಸನ್.

"ನೀವು ಪೊಟ್ಟಣಗಳಲ್ಲಿ ಮಾರುವ ಈ ಮಣ್ಣು ನಿಜವಾಗಿ ತಾರಾ ನಿವಾಸದ್ದೇ ಎಂಬುದು ಏನು ಖಾತರಿ"– ಪತ್ರಕರ್ತರ ಪ್ರಶ್ನೆ.

"ಪ್ರತಿ ಪೊಟ್ಟಣದ ಮೇಲೂ ನನ್ನ ಸಹಿ ಇರುತ್ತೆ. ಅಷ್ಟಕ್ಕೂ ಬೇರೆ ಮಣ್ಣು ಮಾರಿದರೆ ನನಗೆ ವೈಯಕ್ತಿಕ ಖುಷಿಯಾದರೂ ಏನಿರುತ್ತೆ?"

–ಜನ ಈ ಮಾತನ್ನು ನಂಬಿದರು. ಅಷ್ಟೇ ಅಲ್ಲ. ತಾರಾಮೃತ್ತಿಕೆ ಮದುವೆಯ ಉಡುಗೊರೆಯೂ ಆಯಿತು. ವಧು ತನ್ನ ಮೊದಲ ರಾತ್ರಿಯ ಹಾಸಿಗೆಯಡಿ ಈ ಮಣ್ಣನ್ನು ಹರಡುತ್ತಿದ್ದುದೂ ಉಂಟು. ಕನಸಿನಲ್ಲಾದರೂ ತನ್ನ ಹೀರೋ ತನ್ನ ಜೊತೆ ಮಲಗಲಿ ಎಂದು"– ಎನ್ನುತ್ತಾನೆ ಗಿಬ್ಸನ್.

ಜಗತ್ತಿನಲ್ಲಿ ಹೀಗೆ ಮಣ್ಣನ್ನು ಮಾರುವ ಉದ್ಯಮ ನಡೆಸುತ್ತಿರುವ ವ್ಯಕ್ತಿ ತಾನೊಬ್ಬನೇ ಎಂಬುದು ಗಿಬ್ಸನ್‌ನ ನಂಬಿಕೆ.

"ನನ್ನ ಮುಂದಿನ ಯೋಜನೆ ಇದು: ತಾರಾಮೃತ್ತಿಕೆಯನ್ನು ಒಳಗೊಂಡ ಆಭರಣ ತಯಾರಿಸುವುದು. ಅದಕ್ಕೆ ಜಗತ್ತಿನಾದ್ಯಂತ ಬೇಡಿಕೆ ಇದೆ ಎಂಬುದು ನನಗೆ ಗೊತ್ತು".

ಭಾರತಕ್ಕೂ ಇಂಥ ಆಭರಣ ಬಂದರೆ, "ಎಂ.ಜಿ.ಆರ್. ತೀರ್ಥ" ಹಳೇ ಸುದ್ದಿ ಮಾಡೀತು! *

ಪ್ರಪಂಚ ಇನ್ನಾವುದಕ್ಕೂ ಉಪಯುಕ್ತವಲ್ಲದಿದ್ದರೆ ಗಾಳಿಗೋಪುರ ಕಟ್ಟಲಿಕ್ಕೆ ಅತಿ ಉತ್ತಮ ವಿಷಯವಾಗಲಿದೆ.

-ವಿಲಿಯಂ ಹಜಲಿಟ್

ಕಪ್ಪೆಗೆ ಸಂಗೀತ
ಅರ್ಥವಾಗುತ್ತದೆಯೇ!?

# ಸಂಗೀತ ಮಂಡೂಕ

● ಡಾ॥ ರಾಮಾನುಜಂ ●

ಪ್ರಾಣಿಗಳಿಗೆ ಸಂಗೀತ ಅರ್ಥವಾಗುತ್ತದೆಯೇ ಎಂಬ ಪ್ರಶ್ನೆಯನ್ನು ಕೇಳಿದಾಗ, ಪಂಡಿತರಾದರೆ 'ಪಶುರ್ವೇತ್ತಿ ಶಿಶುರ್ವೇತ್ತಿ' ಎಂದು ಕೇಳಿಲ್ಲವೇ ಎಂದು ಬಿಟ್ಟು ನಮ್ಮ ಅಜ್ಞಾನಕ್ಕೆ ಮರುಗ ಬಹುದು. ಸಾಮಾನ್ಯರಾದರೆ, ಪುಂಗಿಗೆ ಹಾವು ಮನಸೋಲುವುದಿಲ್ಲವೇ ಎಂದು ಹೇಳಿ ಇವ ನೊಂದಿಗೇನು ಮಾತು ಎಂದು ಸುಮ್ಮನಾಗ ಬಹುದು.

ಪ್ರಾಣಿಗಳಿಗೆ ಅರ್ಥವಾಗುವುದೋ ಇಲ್ಲವೋ, ಅನೇಕ ಮನುಷ್ಯರಿಗೇ ಸಂಗೀತ ಅರ್ಥವಾಗು ವುದಿಲ್ಲವೆಂಬುದಂತೂ ನನಗೆ ಖಚಿತವಾಗಿ ಗೊತ್ತು. ಸಾಹಿತ್ಯ ಸಂಗೀತ ಕಲಾ ವಿಹೀನರು ಬಾಲ, ಕೊಂಬುಗಳಿಲ್ಲದ ಪಶುಗಳಂತೆ ಎಂದು ಭರ್ತೃಹರಿ ಹೇಳಿರುವುದು ಇಲ್ಲಿ ನನಗೆ ನೆನ ಪಾಗುತ್ತದೆ. ಆದರೆ ಇಲ್ಲಿ ಪ್ರಸ್ತುತವಾದ ವಿಷಯ ಇದಲ್ಲ, ಪಶುಗಳಿಗೆ ಅಂದರೆ ಪ್ರಾಣಿ ಗಳಿಗೆ ಸಂಗೀತ ಅರ್ಥವಾಗುತ್ತದೆಯೋ ಎಂಬುದೇ ಇಲ್ಲಿ ಜಿಜ್ಞಾಸೆಗೆ ವಿಷಯ. ಪ್ರಾಣಿ ವಿಜ್ಞಾನಿಗಳು, ಅಂದರೆ ಪ್ರಾಣಿಗಳ ಬಗ್ಗೆ ತಿಳಿ ದಿರುವ ವಿಜ್ಞಾನಿಗಳು ಹಾವುಗಳಿಗೆ ಸಂಗೀತ ಅರ್ಥವಾಗುವುದಿಲ್ಲ, ಅವು ಪುಂಗಿಯ ಚಲನೆ ಯನ್ನು ನೋಡಿ ಅದರಿಂದ ತಮಗೆ ಅಪಾಯ ವಾಗಬಹುದೇನೊ ಎಂಬ ಶಂಕೆಯಿಂದ ಪುಂಗಿಯ ಚಲನೆಗನುಗುಣವಾಗಿ ಹೆಡೆಯಾಡಿ ಸುತ್ತಾ ಎದುರಿಸಿ ನಿಲ್ಲುತ್ತವೆ ಎನ್ನುತ್ತಾರೆ. ಇದು ನಿಜವೋ ಸುಳ್ಳೋ ಎಂದು ಪರೀಕ್ಷಿಸುವ ಸಾಮರ್ಥ್ಯವಾಗಲೀ ಧೈರ್ಯವಾಗಲಿ ನನಗಿಲ್ಲ. ಆದ್ದರಿಂದ ಆ ವಿಷಯವನ್ನು ಹಾವಾ ಡಿಗನಿಗೂ ಹಾವಿಗೂ ಬಿಟ್ಟು ಬಿಡೋಣ.

ಆದರೆ ಮೊನ್ನೆ ನಾನೊಂದು ಸಗೀತ ಕಛೇರಿಗೆ ಹೋದಾಗ ಅಲ್ಲಿ ನಡೆದ ಒಂದು ಘಟನೆ ನನ್ನನ್ನು ಪುನಃ, ಪ್ರಾಣಿಗಳಿಗೆ ಸಂಗೀತ ತಿಳಿಯುತ್ತದೆಯೋ ಎಂಬ ವಿಷಯದ ಬಗ್ಗೆ ಯೋಚಿಸುವಂತೆ ಮಾಡಿತು. ಅಂದು ನಷೆದ ಆ

ಘಟನೆಯ ಹೀರೋ ಒಂದು ಕಪ್ಪೆ. ಕಪ್ಪೆಗಳಿಗೆ ಸಂಗೀತ ತಿಳಿಯುತ್ತದೆಯೋ ಎಂಬುದೇ ಅಂದು ನನ್ನನ್ನು ಚಿಂತನೆಗೀಡುಮಾಡಿದ ವಿಷಯ. ಸಾಧಾರಣವಾಗಿ ನಾವು 'ಕಪ್ಪೆ ವಟಗುಟ್ಟುತ್ತದೆ' ಎನ್ನುತ್ತೇವೆ. ಯಾರಾದರೂ ಸತತವಾಗಿ ಮಾತನಾಡುತ್ತಲೇ ಇದ್ದರೆ ಕಪ್ಪೆಯ ಹಾಗೆ ವಟಗುಟ್ಟುತ್ತಾನೆ ಎನ್ನುತ್ತೇವೆ. ಮಳೆಗಾಲದಲ್ಲಿ ನೂರಾರು ಮಂಡೂಕಗಳು ಒಟ್ಟು ಸೇರಿ ಯಾವುದೋ ಅಜ್ಞಾತ ಮೂಲೆಯಿಂದ ವಿವಿಧ ಶೃತಿಗಳಲ್ಲಿ ವಾದ್ಯವೃಂದದಂತೆ ಶಬ್ದ ಮಾಡುವುದನ್ನು ನೀವು ಕೇಳಿರಬಹುದು. ಅಂದರೆ ಹಳ್ಳಿಯಲ್ಲಿದ್ದು ಬಂದವರಾದರೆ ಕೇಳಿರಬಹುದು. ಬಹುಮಹಡಿಗಳ ಕಟ್ಟಡದ ಐದನೆಯ ಮಹಡಿಯಲ್ಲಿರುವವರಾದರೆ ಅವರಿಗೆ ಈ ವಿಷಯ ಗೊತ್ತಾಗಲಾರದು. ಅಂತಹವರು ಕಪ್ಪೆಯಿರಲಿ, ಮಳೆಯನ್ನೇ ನೋಡಿರುವ ಸಾಧ್ಯತೆಯೂ ಕಡಿಮೆ.

'ಕಪ್ಪೆಯ ಸಂಗೀತ' ಅನ್ನುವ ಪ್ರಯೋಗವನ್ನಂತೂ ನಾನು ಕೇಳಿದ್ದೇನೆ. 'ಆರಂಭಮಾಡಿಬಿಟ್ಟವು ಕಪ್ಪೆಗಳು ತಮ್ಮ ಸಂಗೀತವನ್ನು) ಎಂದು ನಮ್ಮ ತಾತನವರು ಮಳೆಗಾಲದಲ್ಲಿ ಹೇಳಿದ್ದುದು ನನಗೆ ನೆನಪಿದೆ. ಇದು ಹಾಸ್ಯಕ್ಕಾಗಿ ಹೇಳಿದ ಮಾತಿರಬಹುದು. ಸಂಗೀತ ಹೇಗೆ ಮಾತಿನ ಧ್ವನಿಗಿಂತ ಭಿನ್ನವಾಗಿ ಅಲೌಕಿಕವಾಗಿದೆಯೋ ಅದೇ ರೀತಿ ಕಪ್ಪೆಯ ಲಯಬದ್ಧ ಧ್ವನಿಯ ಪುನರಾವರ್ತನೆ. ಅಲೌಕಿಕವಾಗಿರುತ್ತದೆಯಾದ್ದರಿಂದ ಅದನ್ನು ಸಂಗೀತಕ್ಕೆ ಹೋಲಿಸಿರಬಹುದು. ಅಥವಾ ಅದರಲ್ಲಿ ಯಾವುದೋ ರಾಗದ ಛಾಯೆ ಇದರೂ ಇರಬಹುದು. ಅಥವಾ ಇದು ವಿರುದ್ಧಾರ್ಥದ ಪ್ರಯೋಗವಿರಬಹುದು. ಗಾರ್ದಭ ಸಂಗೀತ ಎನ್ನುವುದಿಲ್ಲವೇ. ಹಾಗೆ 'ಸಂಸ್ಕೃತದಲ್ಲಿ ಒಯ್ದುರು' ಅನ್ನುವುದೂ ಹಾಗೆಯೇ ಇದು ಸರಿಯೋ ತಪ್ಪೋ ಎಂಬ ಪ್ರಶ್ನೆ ಇನ್ನು ಪ್ರಸ್ತುತವಲ್ಲ. ಕೇವಲ ಲೋಕವ್ಯವಹಾರವನ್ನು ಇಲ್ಲಿ ಉಲ್ಲೇಖಿಸಿದ್ದೇನೆ ಅಷ್ಟೆ.

ಇರಲಿ, ಈಗ ಕಪ್ಪೆಯ ವಿಷಯಕ್ಕೆ ಬಂದಾಗ. ಕಪ್ಪೆಯ ವಟಗುಟ್ಟುವಿಕೆಯನ್ನು ಸಂಗೀತಕ್ಕೆ ಹೋಲಿಸಿರುವುದು, ಅದು ಸಂಗೀತ ವಿರುದ್ಧ ಧ್ವನಿಯಾಗಿರುವುದರಿಂದಲೋ ಅಥವಾ ಅದರಲ್ಲೂ ಸಂಗೀತದ ಸಾಮ್ಯವಿದೆ ಎಂದು ಕೆಲವರು ಸಂಗೀತ ವಿರೋಧಿಗಳು ಭಾವಿಸುವುದರಿಂದಲೋ, ಆಗಿರಬಹುದಾದರೂ, ಇದೂ ಕೂಡ ನನ್ನ ಪುಸ್ತಕದ ಚರ್ಚೆಯ ವಿಷಯ ಅಲ್ಲ. ಹಾಗಾದರೆ ಮತ್ತೇನು? ಕಪ್ಪೆಗೆ ಸಂಗೀತ ಅರ್ಥವಾಗುತ್ತದೆಯೋ ಎಂಬುದೇ ಪ್ರಸ್ತುತ ವಿಷಯ. ಸಂಗೀತ ಅರ್ಥವಾಗುವವರಿಗೆ ಸಂಗೀತ ಹಾಡಲು ಬರದಿರಬಹುದು. ಊಟಮಾಡಲು ಬಲ್ಲವರಿಗೆ ಅಡುಗೆ ಮಾಡಲು ಬರದೇ ಇರಬಹುದಲ್ಲವೇ! ಇಲ್ಲಿ ಕಪ್ಪೆಯ ಧ್ವನಿ ಸಂಗೀತವೇ ಅಲ್ಲವೇ ಎಂಬುದು ಏನಾದರೂ ಆಗಲಿ. ಕಪ್ಪೆಗೆ ಆ ಜೀವಕ್ಕೆ. ಸಂಗೀತ ಅರ್ಥವಾಗುತ್ತದೆಯೊ. ಅದು ರಸಾಸ್ವಾದನೆ ಮಾಡಬಲ್ಲದು ಎಂಬುದೇ ಮೊನ್ನೆ ನಡೆದ ಘಟನೆ ನನ್ನನ್ನು ಚಿಂತಿಸಲು ಪ್ರೇರೇಪಿಸಿದ ವಿಷಯ. ಈಗ ಹೆಚ್ಚು ಗೊಂದಲ ಮಾಡದೆ ಮೊನ್ನೆ ನಡೆದ ಘಟನೆಗೇ ಬಂದು ಬಿಡುತ್ತೇನೆ.

ಅದೊಂದು ರಾಮೋತ್ಸವದ ಸಂಗೀತದ ಸಂಜೆ. ದೈವಾತ್, ಎಲ್ಲೂ ಗಲಾಟೆ, ದೊಂಬಿ, ಹೊಡೆದಾಟ, ಬಡಿದಾಟ, ಕಡಿದಾಟ, ಕೊಲೆ, ಕೊಳ್ಳೆ ಇತ್ಯಾದಿ ಭಾರತೀಯ ದಂಡ ಸಂಹಿತೆಯಲ್ಲೂ ಉಕ್ತವಾಗಿರುವ ಅಪರಾಧಗಳು ಅಂದು ನಡೆಯದಿದ್ದುದರಿಂದ ನಾನು ಪೊಲೀಸ್ ಅಧಿಕಾರಿಯಾಗಿದ್ದರೂ, ಸಂಗೀತ ಕೇಳಲು ಹೋಗಲು ಸಾಧ್ಯವಾಯಿತು. ನಾನು ಹೋಗಿದ್ದ ದಿನ ತಮಿಳುನಾಡಿನ ಒಬ್ಬ ದೊಡ್ಡ ವಿದ್ವಾಂಸರ ಕಛೇರಿ. ಹಣೆಗೆ ವಿಭೂತಿ, ಅದರ ಮೇಲೆ ಗಂಧ. ಅದರ ಮೇಲೆ ಕುಂಕುಮ. (ಅಥವಾ ಕುಂಕುಮದ ಮೇಲೆ ಗಂಧವೊ ಏನೋ) ಹೀಗೆ ವಿವಿಧ ರೀತಿಯ, ಬಣ್ಣಗಳ ಧಾರ್ಮಿಕ ಚಿಹ್ನೆಗಳಿಂದ ಶೋಭಿತವಾದ ಲಲಾಟಫಲಕವುಳ್ಳವರಾಗಿ ಮದರಾಸಿನ ವಿದ್ವಾಂಸರು ಹಾಡುತ್ತಿದ್ದರು. ಅವರು ಹಾಕಿಕೊಂಡಿದ್ದ ಅಚ್ಚ ಬಿಳಿಯ ಷರ್ಟು ಅವರ ಮೈಬಣ್ಣವನ್ನು ಎತ್ತಿ ತೋರಿಸುತ್ತಿತ್ತು. ಅವರ ಪಕ್ಕದಲ್ಲಿ ಮದರಾಸಿನ ಮೃದಂಗ ವಿದ್ವಾಂಸರೂ ಅವರದೇ ಬಣ್ಣದ ಮೃದಂಗದೊಡನೆ ಹೋರಾಡುತ್ತಿದ್ದರು. ಎಡಗಡೆ ಪಿಟೀಲು ವಿದ್ವಾಂಸರು ನಿರುತ್ಸಾಹದಿಂದ ಪಿಟೀಲು ನುಡಿಸುತ್ತಾ ವೈರಾಗ್ಯಭಾವದಿಂದ ಇದ್ದರು. ಇವರ

ಒಂದುಗಡೆ ಮೈಸೂರಿನವರೆ ಆದ ತಂಬೂರಿ ನುಡಿಸುತ್ತಿದ್ದ ಕರ್ನಾಟಕದ ಕಲಾವಿದರೊಬ್ಬರು. ಕರ್ನಾಟಕದವರಿಗೆ ಅವಕಾಶವನ್ನೇ ಕೊಡುವುದಿಲ್ಲವೆಂದರೆ ಚಳುವಳಿ ಮಾಡಿದುದರ ಫಲವಾಗಿ ತಂಬೂರಿ ನುಡಿಸಲು ಕರ್ನಾಟಕದವರಿಗೆ ಅವಕಾಶವನ್ನು ಅನುಗ್ರಹಿಸಿದ್ದರು ಸಂಗೀತ ಸಭೆಯವರು.

ಆದರೆ ಗುಣಕ್ಕೆ ಮತ್ಸರವಿಲ್ಲ. ಕಛೇರಿ ಅಮೋಘವಾಗಿತ್ತು. ಅದ್ಭುತವಾದ ಶಾರೀರ. ಶರೀರವೂ ಹಾಗೆಯೇ ಅಭೋಗಿ. ರಾಗದ ಅದ್ಭುತ ಅಲಾಪನೆಯನ್ನು ಮಾಡಿ ಒಂದು ಕೀರ್ತನೆ ಹಾಡಿ ಸ್ವರಹಾಕಲು ಪ್ರಾರಂಭಮಾಡಿದರು ಗಾಯಕರು. ತ್ರಿಶ್ರನಡೆಯಲ್ಲಿ ಸ್ವರ ಪ್ರಸ್ತಾರ ಆರಂಭವಾಗಿ ಶ್ರೋತೃಗಳು ರೋಮಾಂಚಗೊಂಡಿದ್ದಾಗ ಆ ಅದ್ಭುತ ಘಟನೆ ನಡೆದುಹೋಯಿತು. ನಾನು ವೇದಿಕೆಯಿಂದ ಸುಮಾರು ಹದಿನೈದು ಅಡಿಗಳ ದೂರದಲ್ಲಿ ಕುರ್ಚಿಯಲ್ಲಿ ಕುಳಿತಿದ್ದೆ. ತ್ರಿಶ್ರನಡೆಯ ಸ್ವರ ಆರಂಭವಾದಕೂಡಲೇ ಅತ್ಯುತ್ಸಾಹದಿಂದ ಒಂದು ಕಪ್ಪೆ ನನ್ನ ಕಡೆಯಿಂದ ತ್ರಿಶ್ರನಡೆಗೆ ಸರಿಯಾಗಿ ಕುಪ್ಪಳಿಸಿ ವೇದಿಕೆಯ ಕಡೆಗೆ, ಅಂದರೆ ಸಂಗೀತ ವಿದ್ವಾಂಸರ ಕಡೆಗೆ ಗುರಿಯಿಟ್ಟುಕೊಂಡು ಹೋಗಿ ವೇದಿಕೆಯನ್ನು ಹತ್ತಲು ಪ್ರಯತ್ನಿಸಿ ವಿಫಲವಾಗಿ ಕೆಳಗೆ ಬಿದ್ದು ಅಲ್ಲಿಯೇ ಕುಳಿತುಬಿಟ್ಟಿತು. ಇದನ್ನು ನಾನು ಹಾಗೂ ಇತರ ಕೆಲವರು ರಸಿಕರು ನೋಡಿದಾಗ, ಅಂತಹ ಸಂಗೀತಮಯ, ರೋಮಾಂಚಕರ ಸನ್ನಿವೇಶದಲ್ಲೂ ನಮಗೆಲ್ಲ ನಗು ಬಂದುಬಿಟ್ಟಿತು. ನಾವೆಲ್ಲ ಫಕ್ಕನೆ ನಕ್ಕುಬಿಟ್ಟೆವು. ಆದರೆ ಸಂಗೀತ ವಿದ್ವಾಂಸರು ಮಾತ್ರ ಆ ಕಪ್ಪೆಯನ್ನು ನೋಡಲಿಲ್ಲವಾದ್ದರಿಂದ ನಾವು ನಕ್ಕುಬಿಟ್ಟಿದ್ದು ಏಕೆಂದು ತಿಳಿಯದೆ ಕಕ್ಕಾಬಿಕ್ಕಿಯಾಗಿ ಕೊನೆಗೆ ಕೋಪಿಸಿಕೊಂಡುಬಿಟ್ಟರು. ನಮ್ಮನ್ನು ಕೋಪದಿಂದ ನೋಡುತ್ತಾ ತಾಳವನ್ನು ತೊಡೆಯ ಮೇಲೆ ಭಟೀರ್, ಭಟೀರ್ ಎಂದು ಹೊಡೆಯುತ್ತಾ ಅಭೋಗಿಯ ಸ್ವರಗಳನ್ನು ಮುಗಿಸಿ


"ಸ್ವಾಮಿ ದಯಮಾಡಿ ಅಂಜನ ಹಾಕಿ ನೋಡಿ ಈ ನನ್ನ ಮಗಳಿಗೆ ಒಂದು ಗಂಡು ಹುಡುಕಿ ಕೊಡೀ. ... ..."

ಬಿಟ್ಟರು.

ಈಗ, ಸಂಗೀತಗಾರರ ಪ್ರಕ್ರಿಯೆ ನಮಗೆ ಮುಖ್ಯವಲ್ಲ. ಅವರ ಸಂಗೀತಕ್ಕೆ ಕಪ್ಪೆಯು ತೋರಿಸಿದ ಪ್ರತಿಕ್ರಿಯೆ ಮಾತ್ರ ನಮಗೀಗ ಮುಖ್ಯ. ತ್ರಿಶ್ರ ನಡೆಯಲ್ಲಿ ಆ ಕಪ್ಪೆ ಕುಣಿದು ಕುಪ್ಪಳಿಸುತ್ತಾ ಸಂಗೀತಗಾರರ ಕಡೆಗೆ ಹೋಗಿ ಬಿಟ್ಟಿದ್ದು ಉಪೇಕ್ಷಿಸುವಂತಹ ಘಟನೆಯೇನಲ್ಲ. ಅದು ಆಕಸ್ಮಿಕವಾದ ಘಟನೆ ಯೆಂದೂ ನನ್ನ ಮನಸ್ಸು ಒಪ್ಪಿಕೊಳ್ಳುತ್ತಿಲ್ಲ. ಎಂದೂ ಇಲ್ಲದ ಉತ್ಸಾಹ ಆ ಕಪ್ಪೆಗೆ ಆಭೋಗಿ ರಾಗದಲ್ಲಿ ಸ್ವರಹಾಕುವ, ಅದೂ ತ್ರಿಶ್ರ ನಡೆಯಲ್ಲಿ ಹೇಗೆ ಬಂದಿತು? ಮನುಷ್ಯ ರಾದ ನಮ್ಮನ್ನೇ ಕುಣಿಯಲು ಪ್ರೇರೇಪಿಸುವ ಆ ನಡೆ ಕಪ್ಪೆಯನ್ನು ಕುಪ್ಪಳಿಸಲು ಪ್ರೇರೇಪಿಸಿತು ಎಂದು ಒಪ್ಪಿಕೊಳ್ಳುವುದರಲ್ಲಿ ತಪ್ಪೇನಿದೆ? ಇದನ್ನು ಆಕಸ್ಮಿಕ ಅಥವಾ ಸಂಗೀತಕ್ಕೆ ಸಂಬಂಧ ವಿಲ್ಲದ ಒಂದು ಕ್ರಿಯೆ ಮಾತ್ರ ಎಂದು ವಾದಿಸು ವುದಾದರೆ, ಆ ಕಪ್ಪೆಗೆ ಸಂಗೀತದ ಸಮಯ ದಲ್ಲೇ ವೇದಿಕೆಯ ಬಳಿ ಹೋಗಲೇಬೇಕಾದ ಮಹಾಕಾರ್ಯವೇನಿತ್ತು? ಹಾಗೂ ತ್ರಿಶ್ರ ನಡೆಗೆ ಸರಿ ಯಾಗಿ ಕುಪ್ಪಳಿಸುತ್ತಾ ಹೋಗಬೇಕಾದ ಪ್ರಮೇಯವೇನಿತ್ತು? ಇದನ್ನು ಆಕಸ್ಮಿಕವೆನ್ನು ವುದು ಬಹಳ ಕಷ್ಟವಾಗುತ್ತದೆ. ನನಗೆ ತೋರು ವುದು ಏನೆಂದರೆ, ಅದು ವೇದಿಕೆಯ ಮೇಲೆ ಹತ್ತಿ ಸಂಗೀತಗಾರರ ಬಳಿಯೇ ಕುಳಿತು ಸಂಗೀತ ಕೇಳಿಬಿಡಬೇಕು ಅಥವಾ ತನ್ನದೇ ಶೈಲಿ ಯಲ್ಲಿ ಅವರನ್ನು ಅಭಿನಂದಿಸಿಬಿಡಬೇಕು, ಎಂಬ ಉದ್ದೇಶವನ್ನು ಇಟ್ಟುಕೊಂಡಿತ್ತು. ಆದರೆ ವೇದಿಕೆಯ ಎತ್ತರ ಮೂರು ಅಡಿಗಳಷ್ಟು ಇದ್ದುದರಿಂದ ಅಷ್ಟು ಎತ್ತರ ಹೈಜಂಪ್ ಅಂದರೆ ಎತ್ತರ ಜಿಗಿತ ಮಾಡುವ ಸಾಮರ್ಥ್ಯ ಆ ಕಪ್ಪೆಗೆ ಇಲ್ಲದಿದ್ದುದರಿಂದ ಅದು ಹತಾಶ ವಾಗಿ ಇಲ್ಲಿಯೇ ಕುಳಿತುಬಿಡಬೇಕಾಯಿತು ಅಷ್ಟೆ. ಇದನ್ನೆಲ್ಲ ನೋಡಿದರೆ ಈ ಮಂಡೂಕ ಪ್ರುತಿ ಅಂದರೆ ಕಪ್ಪೆಯ ಕುಪ್ಪಳಿಕೆ ಆಕಸ್ಮಿಕ ಕ್ರಿಯೆ ಯಲ್ಲ ಎಂಬುದು ಸ್ಪಷ್ಟ.

ಸಂಗೀತದ ಮಾಧುರ್ಯಕ್ಕೆ, ಸ್ವರದ ಲಯಕ್ಕೆ ಕಪ್ಪೆ ತೋರಿದ ಲಯಬದ್ಧ ಪ್ರತಿಕ್ರಿಯೆ ಯೆಂಬುದೇ ಸರಿ. ಆದ್ದರಿಂದ ಇಂತಹ ಪ್ರತಿ ಕ್ರಿಯೆಯನ್ನು ತೋರಿಸಬೇಕಾದರೆ ಕಪ್ಪೆಗೆ ಸಂಗೀತ ಅರ್ಥವಾಗಿರಲೇಬೇಕು. ಆದ್ದರಿಂದ ಪಶುರ್ವೇತ್ತಿ ಎಂಬ ಮಾತು ನೂರಕ್ಕೆ ನೂರು ಸತ್ಯ ಎಂಬುದನ್ನು ಈ ಸಂಗೀತ ಮಂಡೂಕ ಸಾಧಿಸಿ ತೋರಿಸಿದೆ ಎಂಬುದರಲ್ಲಿ ಸಂದೇಹ ವಿಲ್ಲ.

ಈ ರಸಿಕ ಮಂಡೂಕದ ಕುಪ್ಪಳಿಕೆಯ ಘಟನೆ ಯನ್ನು ನೋಡಿದ ಮೇಲೆ ನನಗೆ, ಪ್ರಾಣಿಗಳಿಗೆ ವಿಶೇಷವಾಗಿ ಮಂಡೂಕಕ್ಕೆ ಶಾಸ್ತ್ರೀಯ ಸಂಗೀತ, ಅದರಲ್ಲೂ ಮದರಾಸಿನವರ ಸಂಗೀತ ಅರ್ಥವಾಗುತ್ತದೆಯೆಂಬುದು ಮನ ದಟ್ಟಾಗಿ ಪಶುರ್ವೇತ್ತಿ ಎಂದ ಭರ್ತೃಹರಿಯ ಜ್ಞಾನದ ಬಗ್ಗೆ ನನ್ನ ಗೌರವ ಹೆಚ್ಚಾಗಿದೆ.

ಈಗಿನ ಪ್ರಾಣಿ ವಿಜ್ಞಾನಿಗಳು ಯಾರಾದರೂ ಈ ಲೇಖನವನ್ನು ಓದಿ, ಸಂಗೀತವೂ ಮಂಡೂಕವೂ ಎಂಬ ವಿಷಯದಲ್ಲಿ ಅಧ್ಯಯನ ನಡೆಸಿ, ಪ್ರಾಯೋಗಿಕವಾಗಿ ಮದರಾಸಿನ ಸಂಗೀತಗಾರರ ಕಛೇರಿಗಳಲ್ಲಿ ಮಂಡೂಕ ಗಳನ್ನು ನಾನಾದಿಕ್ಕುಗಳಿಂದ ಬಿಟ್ಟು, ಅವುಗಳ ಪ್ರತಿಕ್ರಿಯೆಗಳನ್ನು ಪರೀಕ್ಷಿಸಿ, ಪಶುರ್ವೇತ್ತಿ ಎಂಬ ವಿಷಯದಲ್ಲಿ ಖಚಿತವಾದ ನಿರ್ಧಾರಕ್ಕೆ ಬರಲಿ ಎಂದು ನಮ್ರವಾಗಿ ಸೂಚಿಸುತ್ತೇನೆ. *

ನಿಷ್ಕಲ್ಮಶ ಮನಸ್ಸುಳ್ಳವನು ಎಲ್ಲವನ್ನು ನಿಷ್ಕಲ್ಮಶವಾಗಿಯೇ ನೋಡುತ್ತೇನೆ.

— ಶ್ರೀಶಾರದಾ ದೇವಿ.

ಪ್ರೀತಿಯಿಂದ ಮಾತಾಡಿಸಿದರೆ ನಾಲಿಗೆಗೇನೂ ಗಾಯವಾಗುವುದಿಲ್ಲ.

● ಫ್ರೆಂಚ್ ಗಾದೆ

# ನಿಮ್ಮ ಶಬ್ದ ಭಾಂಡಾರ ಬೆಳೆಯಲಿ

## ಶಬ್ದ ಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳ ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಅದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

1. ಪಿತೂರಿ
   ಅ) ಒಳಸಂಚು
   ಆ) ತಂದೆಯಿಂದ ಬಂದ ಆಸ್ತಿ
   ಇ) ಸ್ವರ್ಗದಲ್ಲಿದ್ದವ
   ಈ) ಲಕ್ಷ್ಯ

2. ಬೆದೆಗಾತಿ
   ಅ) ಧೈರ್ಯವುಳ್ಳವಳು
   ಆ) ಬಗೆ ಬಗೆಯ ವಿದ್ಯೆ ಬಲ್ಲವಳು
   ಇ) ಕಾಮುಕ ಹೆಂಗಸು
   ಈ) ಹೆದುರುಪುಕ್ಕಿ

3. ಮಂದಿವಾಳ
   ಅ) ಜನಜಂಗುಳಿ
   ಆ) ಸೊಕ್ಕು
   ಇ) ಹೂ
   ಈ) ತೋಟದ ಮನೆ

4. ನಾವೀನ್ಯ
   ಅ) ದೋಣಿಗಾರ
   ಆ) ಒಂದು ಕಾಡು ಧಾನ್ಯ
   ಇ) ಚಾತುರ್ಯ
   ಈ) ಹೊಸತನ

5. ನಿಚಿತ
   ಅ) ಸತ್ತುಹೋದ
   ಆ) ಖಂಡಿತ
   ಇ) ಜಡ
   ಈ) ರಾಶಿ ಹಾಕಿದ

6. ಕರಣ
   ಅ) ಇಂದ್ರಿಯ
   ಆ) ಸಾಲ
   ಇ) ದಾಖಲೆ
   ಈ) ಸಾಧನ

7. ಅಪಚಾರ
   ಅ) ಮರ್ಯಾದೆ
   ಆ) ವಿಶ್ವಾಸಘಾತಕ ಸೇವಕ
   ಇ) ಅಗೌರವ
   ಈ) ತಿರಿಯುಪಿಕೆ

8. ಊರ್ಮು
   ಅ) ದ್ವೇಷ
   ಆ) ಅಹಂಕಾರಪಡು
   ಇ) ದುರ್ಬಲ ಸ್ಥಾನ
   ಈ) ಲಹರಿ

9. ಕೌಲಿಕ
   ಅ) ಜೋಡಿ
   ಆ) ಸೋಗುಗಾರ
   ಇ) ಒಪ್ಪಂದ
   ಈ) ಸಂಬಳ

10. ರೌಕುಳ
    ಅ) ಒಂದು ಶೈವ ಪಂಥ
    ಆ) ಕೂಗಾಟ
    ಇ) ಅಳುಪಿಕೆ
    ಈ) ಪೆಚ್ಚಳ

11. ಮಿಷ್ಟ
    ಅ) ಪ್ರೀತಿಯ
    ಆ) ಚಲಿಸುವ
    ಇ) ಸವಿಯಾದ
    ಈ) ಪುಡಿ

12. ಮೃಗಯಾವ್ಯಸನ
    ಅ) ಬೇಟೆಯ ಚಟ
    ಆ) ಗುಪ್ತ ಪ್ರೇಮ
    ಇ) ಹಿಂಸೆ
    ಈ) ಹುಡುಕಾಟ

## ಶಬ್ದ ಭಾಂಡಾರದ ಸರಿಯಾದ ಅರ್ಥಗಳು

**1. ಪಿತೂರಿ**

ಅ) ಒಳಸಂಚು, ಗುಪ್ತತಂತ್ರ. ಇಬ್ಬರೂ ಸೇರಿ ಪಿತೂರಿ ಮಾಡಿದರು. (ಅರಬ್ಬಿ-ಫುತೂರ್ ಉರ್ದು-ಫಿತೂರ್=ದೋಷ, ಉಪದ್ರವ)

**2. ಬೆದೆಗಾತಿ**

ಇ) ಕಾಮುಕ ಹೆಂಗಸು, ಅತಿ ಕಾಮವುಳ್ಳವಳು, ವ್ಯಭಿಚಾರಿಣಿ, ಬೆದೆಗಾತಿಯರು ಅವನ ಬೆನ್ನು ಹತ್ತಿದರು (ದೇಶ್ಯ ತೆಲುಗು ವೆದೆ ಇತ್ಯಾದಿ)

**3. ಮಂದಿವಾಳ**

ಅ) ಸೊಕ್ಕು, ಮದ, ದುರಹಂಕಾರದ ವರ್ತನೆ, ಅತಿಸಲಿಗೆ. ಉದಾ: ಮಂದಿವಾಳದಿಂದ ಶಾಪ ಪಡೆದನು(?)

**4. ನಾವೀನ್ಯ**

ಈ) ಹೊಸತನ, ನವೀನತೆ. ಉದಾ: ಅವಳ ಗಾಯನದಲ್ಲಿ ನಾವೀನ್ಯ ಇದೆ. (ಸಂ.ನವೀನ=ಹೊಸದು-ಇಂದ)

**5. ನಿಚಿತ**

ಈ) ರಾಶಿಹಾಕಿದ, ಒಟ್ಟಿದ, ಗುಡ್ಡೆ ಮಾಡಿದ. ಉದಾ: ನಿಚಿತವಾದ ಇಟ್ಟಿಗೆ (ಸಂ)

**6. ಕರಣ**

ಅ) ಇಂದ್ರಿಯ, ವಿಶೇಷವಾಗಿ ಜ್ಞಾನೇಂದ್ರಿಯ, ಉದಾ: ಕರಣಂಗಳೈದು (ಸಂ)

**7. ಅಪಚಾರ**

ಇ) ಅಗೌರವ, ಉಪಚಾರಕ್ಕೆ ವಿರುದ್ಧವಾದ ರೀತಿ. ಉದಾ: ಇದು ಸತ್ಯಕ್ಕೆ ಅಪಚಾರ (ಸಂ)

**8. ಊರ್ಮ್ಯ**

ಅ) ಅಹಂಕಾರಪಡು, ಹೆಮ್ಮೆ ತೋರಿಸು, ಗರ್ವ ಪ್ರದರ್ಶಿಸು. ಉದಾ: ಅವನ ಊರ್ಮ್ಯ ನೋಡಿದರೆ ಕೊನೆಯಿಲ್ಲ (ಉರ್ವು, ಉರ್ಬ್ಬು ಎಂಬುದರ ಒಂದು ರೂಪ?)

**9. ಕೌಲಿಕ**

ಅ) ಸೋಗುಗಾರ, ವಂಚಕ, ಮೋಸಗಾರ. ಉದಾ: ಅವನಂಥ ಕೌಲಿಕ ಬೇರೆ ಇಲ್ಲ (ಸಂ).

**10. ರೌಕುಳ**

ಈ) ಹೆಚ್ಚಳ, ಅಧಿಕ್ಯ, ಪ್ರತಾಪ. ಉದಾ: ಭೀಮನ ಉಬ್ಬಟೆಯ ರೌಕುಳಕ್ಕೆ ದುರ್ಯೋಧನ ಹಿಮ್ಮೆಟ್ಟಿದ (?)

**11. ಮಿಷ್ಟ**

ಇ) ಸಿಹಿಯಾದ, ಸವಿಯಾದ, ರುಚಿಕರವಾದ. ಉದಾ: ಮಿಷ್ಟ ಭೋಜನದಿಂದ ತೃಪ್ತರು (ಸಂ).

**12. ಮೃಗಯಾವ್ಯಸನ**

ಅ) ಬೇಟೆಯ ಚಟ, ಬೇಟೆಯಾಡುವ ಹವ್ಯಾಸ. ಉದಾ: ರಾಜನ ಮೃಗಯಾವ್ಯಸನದಿಂದ ಪಶುಗಳು ನಷ್ಟವಾದವು (ಸಂ)

**ನಿಮ್ಮ ಶಬ್ದಶಕ್ತಿಯ ತರಗತಿ**

ನೀವು ಎಷ್ಟು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

6- 8 ಸರಿಯಿದ್ದರೆ ... ಸಾಧಾರಣ
9-10 " ... ಉತ್ತಮ
11-12 " ... ಅತ್ಯುತ್ತಮ

**ನರಭಕ್ಷಕ ವೃಕ್ಷಗಳಿಲ್ಲ: ಆದರೆ ಚಿಕ್ಕ ಪ್ರಾಣಿಗಳನ್ನು ಬೇಟೆಯಾಡುವ 450 ಸಸ್ಯಗಳಿವೆ.**




# ನರಭಕ್ಷಕ ವೃಕ್ಷಗಳಿವೆಯೆ?

ಆ ಗಿಡ ದೈತ್ಯಾಕಾರದ ಅನಾನಸಿನಂತಿತ್ತು. ಅದರ ಕಾಂಡ ಹತ್ತು ಫೂಟೆತ್ತರದ ಕೊಳಗದಂತಿತ್ತು. ಅದರ ತುದಿಗೆ ಹತ್ತು ಹನ್ನೆರಡು ಫೂಟುದ್ದ, ಒಂದು ಫೂಟು ಅಗಲದ, ಸೂಜಿಯಂತೆ ತುದಿ ಚೂಪಾದ, ಎಂಟು ಪ್ರಕಾಂಡ ಎಲೆಗಳು. ಅವುಗಳ ಮೇಲೆಲ್ಲ ನಂಜಿನ ಮುಳ್ಳುಗಳು.

ಮಡಗಾಸ್ಕರ್ ದ್ವೀಪದ ಮೂಲ ನಿವಾಸಿಗಳಿಗೆ ಆ ವೃಕ್ಷ ದೇವತೆಯಾಗಿತ್ತು. "ಒಂದು ರಾತ್ರಿ ಅದರ ಪೂಜೆ ನೋಡಲು ನನ್ನನ್ನು ಕರೆದೊಯ್ದರು. ಎಳೆಹರೆಯದ ಹುಡುಗಿಯೊಬ್ಬಳನ್ನು ತಂದು ಆ ಮರ ಹತ್ತುವಂತೆ, ಅದರ ತುದಿಯಲ್ಲಿರುವ ರಸವನ್ನು ಕುಡಿಯುವಂತೆ ನಿರ್ಬಂಧಿಸಿದರು.

"ಅವಳು ಮೇಲೆ ಹತ್ತಿದ ನಂತರ ನಡೆದದ್ದನ್ನು ನೋಡಿ ನಾನು ಭಯದಿಂದ ನಿಶ್ಚೇಷ್ಟಿತನಾದೆ. ಒಂದು ಕ್ಷಣಕ್ಕೆ ಮೊದಲು ನಿಶ್ಚಲವಾಗಿದ್ದ ಆ ಮರದ ಕೊಂಬೆಗಳು ಹಾವುಗಳಂತೆ ಮಣಿ ಮಣಿದು ಸುತ್ತಿಕೊಳ್ಳತೊಡಗಿದವು. ಆ ಭೀಕರ ದೃಶ್ಯವನ್ನು ನಾನೆಂದೂ ಮರೆಯಲಾರೆ. ಹುಡುಗಿ ಚಡಪಡಿಸುತ್ತಿದ್ದಂತೆ ಆ ಮಹಾ ಎಲೆಗಳು ಮೆಲ್ಲನೆ ಎದ್ದು ತಮ್ಮ ಮುಳ್ಳುಗಳೊಡನೆ ಅವಳ ಮೇಲೆ ಮುಗಿಬಿದ್ದು ಹೈಡ್ರಾಲಿಕ್ ಪ್ರೆಸ್ಸಿನಂತೆ ಅವಳನ್ನು ಹಿಂಡತೊಡಗಿದವು..."

ಈ "ಪ್ರತ್ಯಕ್ಷ ಕಂಡ" ಘಟನೆಯನ್ನು 1878ರಲ್ಲಿ ಡಾ|| ಕಾರ್ಲ್ ಲಿಚೆ ಎಂಬಾತನು ವರ್ಣಿಸಿ ಬರೆದ ಲೇಖನ ಹಲವು ಪತ್ರಿಕೆಗಳಲ್ಲಿ ಪ್ರಕಟವಾಗಿತ್ತು.

ನರಭಕ್ಷಕ ವೃಕ್ಷಗಳ ಸಮಾಚಾರ ಪ್ರಕಟವಾದದ್ದು ಇದೇ ಮೊದಲನೆಯದಲ್ಲ. 1851ರಲ್ಲಿ ಕ್ಯಾಪ್ಟನ್ ಆರ್ಕ್ ರೈಟ್ ಎಂಬುವವನು ದಕ್ಷಿಣ ಶಾಂತ ಸಾಗರದಲ್ಲಿರುವ ಎಲ್ಬನೂರ್ ದ್ವೀಪದಲ್ಲಿ (ಮುತ್ತು ದ್ವೀಪ) ತಾನೊಂದು ದೈತ್ಯ ಪುಷ್ಪವನ್ನು ಕಂಡದ್ದಾಗಿಯೂ ಅದರ ಅಮೋಘವಾದ ಸುವಾಸನೆಗೆ ಮರುಳಾಗಿ ಅದರ 'ಪರಿಮಳದ ಗುಡಿ'ಯನ್ನು ಯಾರಾದರೂ ಪ್ರವೇಶಿಸಿದರೆ ಅದು ಅವನನ್ನು ಹಿಂಡಿ ನುಂಗಿ ಜೀರ್ಣಿಸಿಕೊಂಡುಬಿಡುತ್ತಿ

**1956ರ ಡಿಸೆಂಬರ್ ಸಂಚಿಕೆಯಲ್ಲಿ ಪ್ರಕಟವಾದದ್ದು**



*ಕಾರ್ಲ್ ಲಿಚೆ ಬಣ್ಣಿಸಿದ ನರಭಕ್ಷಕ ವೃಕ್ಷದ ಕಾಲ್ಪನಿಕ ಚಿತ್ರ*

---

ತ್ತೆಂದೂ ಬರೆದಿದ್ದನು. ನಿಕರಾಗುವಾದಲ್ಲಿ ಇನ್ನೊಂದು ಮಾಂಸಾಹಾರಿ ಬಳ್ಳಿ ತನ್ನ ನಾಯಿಯನ್ನು ತಿಂದು ಜೀರ್ಣಿಸಿಕೊಂಡಿತೆಂದು ಡನ್‌ಸ್ಟನ್ನನೆಂಬಾತನು ಪ್ರಕಟಿಸಿದ್ದನು.

ಆದರೆ ವಿಜ್ಞಾನಿಗಳು ನಡೆಸಿದ ಶೋಧಗಳಲ್ಲಿ ಇಂಥ ಕತೆಗಳ ಸತ್ಯಾಂಶ ಸಿದ್ಧವಾಗಲಿಲ್ಲ. ಅಂದಮಾತ್ರಕ್ಕೆ ಮಾಂಸಾಹಾರಿ ಸಸ್ಯಗಳೇ ಇಲ್ಲೆಂದು ಅರ್ಥವಲ್ಲ. ಅಂಥ ಸುಮಾರು 450 ಜಾತಿಯ ಸಸ್ಯಗಳಿವೆ. ಆದರೆ ಅವುಗಳಲ್ಲಿ ಅತಿ ಭಯಂಕರವಾದದ್ದು ಕೂಡ ಚಿಕ್ಕ ಹಕ್ಕಿಗಳು, ಓತಿಗಳು, ಕಪ್ಪೆಗಳಿಗಿಂತ ದೊಡ್ಡ ಪ್ರಾಣಿಗಳನ್ನು ಹಿಡಿಯುವುದಿಲ್ಲ. ಹೀಗಿದ್ದರೂ ಅವು ತಮ್ಮ ಆಹಾರವನ್ನು 'ಬೇಟೆಯಾಡುವ' ರೀತಿಗಳನ್ನು ನೋಡಿದರೆ ದಂಗು ಬಡಿಯುವಂತಿದೆ.

ಮಾಂಸಾಹಾರಿ ಸಸ್ಯಗಳು ಹೆಚ್ಚಾಗಿ ನೀರಲ್ಲಿ ಅಥವಾ ಜವುಳು ಭೂಮಿಯಲ್ಲಿರುತ್ತವೆ. ಪ್ರಾಣಿಗಳನ್ನು 'ತಿನ್ನದೆ' ಅವು ಬಾಳಬಲ್ಲವಾದರೂ ಮಾಂಸಾಹಾರ ಸಿಕ್ಕಿದರೆ ಅವು ಚೆನ್ನಾಗಿ ಬೆಳೆಯುವವೆಂದು ತಿಳಿದು ಬಂದಿದೆ. ಮಾಂಸಾಹಾರದಿಂದ ಅವು ತಮಗೆ ಬೇಕಾದ ಸಾರಜನಕ (ನೈಟ್ರೋಜನ್)ವನ್ನು ಪಡೆಯುತ್ತವೆ.

ಎಲ್ಲ ಮಾಂಸಾಹಾರಿ ಸಸ್ಯಗಳು ಕೊಳ್ಳೆಯನ್ನು ಹಿಡಿಯಲು ಬಳಸುವ ಸಾಧನಗಳು ಒಂದೇ ವಿಧವಾಗಿಲ್ಲ. ಕೆಲವು ಹೂಜಿ (Pitcher) ಯಂಥ ಅವಯವಗಳನ್ನು ಉಪಯೋಗಿಸುತ್ತವೆ. ಇವುಗಳಲ್ಲಿ ಯಾವ ಚಲನೆಯೂ ಇರುವುದಿಲ್ಲ. ಅವು ವಾಸನೆ, ಮಧು ಅಥವಾ ಬಣ್ಣದಿಂದ ಕೀಟಗಳನ್ನು ಆಕರ್ಷಿಸಿ ತಮ್ಮ ಹೂಜಿಯಲ್ಲಿ ಬಂದು ಸಿಕ್ಕಿಕೊಳ್ಳುವಂತೆ ಮಾಡುತ್ತವೆ. ಒಮ್ಮೆ ಅದರಲ್ಲಿ ಬಂದಿಳಿದ ಜಂತುಗಳು ತಿರುಗಿ ಹೋಗಲಾರದಂತೆ ಕೆಳಮುಖವಾದ ಕೇಶಗಳೂ ಜಾರುವ ಬದಿಗಳೂ ಅವಕ್ಕಿರುತ್ತವೆ. ಸಿಕ್ಕಿಕೊಂಡ ಜೀವಿಯನ್ನು ಅವು ಪ್ರಾಣಿಗಳ ಜಠರದಂತಿರುವ ಕೋಶಗಳ ಮೂಲಕ ಜೀರ್ಣಿಸಿಕೊಂಡುಬಿಡುತ್ತವೆ.

ದಕ್ಷಿಣ ಅಮೇರಿಕದಲ್ಲಿ ಮಳೆ ಹೆಚ್ಚಾಗಿರುವ ಪ್ರದೇಶದಲ್ಲಿ **ಹೆಲಿಯಾಂಫೋರಾ** ಎಂಬ ಮಾಂಸಾಹಾರಿ ಸಸ್ಯ ಇಂಥದು. ಕೆಲವು ಇಂಚು ಉದ್ದವಾದ ಅದರ ಹೂಜಿ ಸುಂದರವಾಗಿದ್ದು, ಅದರ ಬಾಯಿಗೊಂದು ಮುಚ್ಚಳವೂ ಇರುತ್ತದೆ. ಕೀಟಗಳು ಬಣ್ಣದಿಂದ ಆಕರ್ಷಣೆಗೊಂಡು ಅದರೊಳಗೆ ಹೊಕ್ಕರೆ ಒಳಗಿರುವ ನೀರಿನಲ್ಲಿ ಮುಳುಗಿ ಸಾಯುತ್ತವೆ. ಆಮೇಲೆ ಅದನ್ನು ಸಸ್ಯವು ಜೀರ್ಣಿಸಿಕೊಳ್ಳುತ್ತದೆ.

ಉತ್ತರ ಅಮೇರಿಕದಲ್ಲಿರುವ **ಸರಸೀನಿಯ** ಎಂಬ ಸಸ್ಯವು ತನ್ನ ಹೂಜಿಯ ಬಾಗಿಲವರೆಗೆ ಮಧು ಸವರಿದ ಮಾರ್ಗವನ್ನು ರಚಿಸಿಕೊಂಡು ಕೀಟಗಳನ್ನು ಆಕರ್ಷಿಸುತ್ತದೆ. ಹೂಜಿಯೊಳಗೆ ಹೊಕ್ಕಮೇಲೆ ಅದರಲ್ಲಿರುವ ಕೂದಲುಗಳು ಕೀಟವನ್ನು ಹಿಂದೆ ಸರಿಯಲಾರದಂತೆ ಮಾಡಿದರೆ, ಮಧುರವಾದ ರಸವು ಅದನ್ನು ಮುಂದೆ ಮುಂದೆ ಎಳೆದುಕೊಂಡು ಹೋಗುತ್ತದೆ. ಕೊನೆಗೆ ಕೀಟ ಸತ್ತು ಜೀರ್ಣವಾಗುತ್ತದೆ.

ಉಷ್ಣವಲಯದಲ್ಲಿ ಬೆಳೆಯುವ **ನೆಪೆಂಥೀಸ** ಎಂಬ ಬಳ್ಳಿ ಅತಿ ಸಾಮಾನ್ಯವಾದುದು. ಅದಕ್ಕೆ ಹೀರೇ ಬಳ್ಳಿಗಳಿಗಿರುವಂತೆ (tendril) ತಂತುಗಳಿರುತ್ತವೆ. ಆದರೆ ಈ ತಂತು ಎಲೆಯ ತುದಿಗೇ ಇರುತ್ತದೆ. ಅವುಗಳ ಸಹಾಯದಿಂದ ಅದು ದೊಡ್ಡ ದೊಡ್ಡ ಮರಗಿಡಗಳನ್ನೇರುತ್ತದೆ. ಪ್ರತಿ ತಂತುವಿನ ತುದಿಗೆ ಹೂಜಿಯಿರುತ್ತದೆ. ಅವುಗಳೊಳಗೆ ಅಸಂಖ್ಯ ಪಚನ ಗ್ರಂಥಿಗಳಿವೆ. ಹೂಜಿಯಲ್ಲಿರುವ ಮಂಗಳೂರು ಹೆಂಚುಗಳಂತೆ ಒಂದರ ಮೇಲೊಂದು ಇಳಿಜಾರಾಗಿರುವ ರಚನೆಗಳ ಸಹಾಯದಿಂದ ಕೊಳ್ಳೆ ಪಾರಾಗದಂತೆ ನೋಡಿಕೊಳ್ಳುತ್ತದೆ. ಹೂಜಿಯ ಆಕರ್ಷಕ ಬಣ್ಣಕ್ಕೆ ಮುಗ್ಧವಾಗಿ ಕೀಟಗಳು ಬರುತ್ತವೆ. ಜೀರುಂಡೆ, ಜೊಂಡಿಗ, ಪಾತರಗಿತ್ತಿ, ಚೇಳು ಮುಂತಾದ ಪ್ರಾಣಿಗಳ



'ಡಯೋನಿಯಾ'ದ ಇಲಿ ಕತ್ತರಿಯಂಥ ಎಲೆಯಲ್ಲಿ ಸಿಕ್ಕಿದ ಕೀಟ

ಅವಶೇಷಗಳು ಈ ಬಳ್ಳಿಯ 'ಜಠರ'ದಲ್ಲಿ ಸಿಕ್ಕುತ್ತವೆ.

ಪೋರ್ತುಗಾಲ್, ಸ್ಪೇನ್, ಮೊರೊಕ್ಕೋಗಳಲ್ಲಿರುವ ಡ್ರೋಸೋಫಿಲಂ ಅಥವಾ 'ನೊಣ' ಹಿಡಿಯುವ ಸಸ್ಯದ ಎಲೆಗಳ ಮೇಲೆ ಅಂಟಾದ ರಸದ ಬಿಂದುಗಳು ಇರುತ್ತವೆ. ನೊಣ ಮೊದಲಾದವು ಅದರಲ್ಲಿ ಸಿಕ್ಕಿಕೊಂಡು ಮುಳುಗಿ ಸಾಯುತ್ತವೆ. ಒಡನೇ ಎಲೆಗಳಲ್ಲೇ ಇರುವ ಪಾಚಕ ಗ್ರಂಥಿಗಳು ಪಾಚಕ ರಸಗಳನ್ನು ಸ್ರವಿಸಿ 24 ತಾಸುಗಳೊಳಗೆ ಕೀಟವನ್ನು ಜೀರ್ಣಿಸಿಕೊಳ್ಳುತ್ತವೆ.

ಇಲಿ ಕತ್ತರಿಗಳಂಥ ರಚನೆಗಳನ್ನು ಉಪಯೋಗಿಸಿ ಕೊಳ್ಳೆಯನ್ನು 'ಬೇಟೆಯಾಡುವ' ಸಸ್ಯಗಳ ಧೂರ್ತತನ ಇನ್ನೂ ಅದ್ಭುತವಾದದ್ದು.

ಡಾರ್ವಿನ್ನನು ಜಗತ್ತಿನಲ್ಲೇ ಅತ್ಯಾಶ್ಚರ್ಯಕರ ಸಸ್ಯವೆಂದು ಕರೆದ ಡಯೋನಿಯಾ (ಅಥವಾ ಶುಕ್ರ ಸಸ್ಯವು) ಉತ್ತರ ಅಮೇರಿಕದಲ್ಲಿದೆ. ಇದರ ಎಲೆಗಳಿಗೆ ಮಡಚುವ ಬಾಗಿಲುಗಳಿರುವಂತೆ ಎರಡು ಪಡಕು (ಪಡಿ)ಗಳಿದ್ದು, ಮೊಳಡಿ (ಹಿಂಜಸ್ ಅಥವಾ ಬಿಜಾಗ್ರೆ)ಯಂಥ ರಚನೆಗಳಿಂದ ಅವು ಸಂದುಗೂಡಿರುತ್ತವೆ. ಎಲೆಯ ಅಂಚುಗಳಿಗೆ ಬಲವಾದ ಹಲ್ಲುಗಳಿರುತ್ತವೆ. ಎಲೆಯ ಮೇಲೆ ಮೂರು ಬಲು ಸೂಕ್ಷ್ಮವಾದ ಕೇಶಗಳು ಇರುತ್ತವೆ. ಯಾವುದೇ ಜಂತು ಈ ಕೇಶಗಳನ್ನು ಸೋಕಿದರೆ ಸಾಕು, ಇಲಿ ಕತ್ತರಿಯು ಕ್ಷಣಾರ್ಧದಲ್ಲಿ ಮುಚ್ಚಿಕೊಳ್ಳುವಂತೆ ಎಲೆಯು ಮಡಚಿಕೊಂಡು ಆ ಬಡಪಾಯಿಯನ್ನು ಸೆರೆಹಿಡಿಯುತ್ತದೆ. ಅದು ಚಡಪಡಿಸುತ್ತ ಹೋದಂತೆ ಎಲೆಯಲ್ಲಿರುವ ಪಾಚಕ ಗ್ರಂಥಿಗಳು ಉತ್ತೇಜಿತವಾಗಿ ರಸಗಳು ಸ್ರವಿಸಿ ಪಚನಕ್ರಿಯೆ ನಡೆಯುತ್ತದೆ. ಕೆಲಸ ಮುಗಿದ ಮೇಲೆ ಎಲೆಗಳು ಮುಟ್ಟಲು ಮುರುಕದ ಎಲೆಗಳಂತೆ ತಿರುಗಿ ತೆರೆದುಕೊಳ್ಳುತ್ತವೆ. ಜಗತ್ತಿನಲ್ಲೆಲ್ಲ ಸಿಗುವ ಯುಟ್ರಿಕ್ಯುಲೇರಿಯಾ ಎಂಬ ಜಲ ಸಸ್ಯವು ಇಲಿ ಬಲೆಯಂಥ ಉಪಕರಣವನ್ನು ಉಪಯೋಗಿಸುತ್ತದೆ. ಇದು ಅತ್ಯದ್ಭುತ ಯಾಂತ್ರಿಕ ರಚನೆಯೇ ಸೈ. ಇದರ ತುಂಬೆಲ್ಲ ದೊಡ್ಡಬಾಯಿ, ಚೂಪು ತುದಿಯ ನೀರುಚೀಲಗಳಿರುತ್ತವೆ. ಚೀಲದ ಬಾಯಿಗೆ ಒಳಮುಖವಾಗಿ ಮಾತ್ರ ಬಾಗಿಲಿದೆ. ಅಂಟಿನಂಥ ಒಂದು ಜಿನುಗು ರಸದಿಂದ ಆಕರ್ಷಣೆ ಹೊಂದಿ ಒಂದು ಕೀಟವು ಈ ಬಾಗಿಲಿಗಿರುವ ಕೇಶಗಳನ್ನು ಮುಟ್ಟಿದ ತಕ್ಷಣ ಬಾಗಿಲು ತೆರೆಯುವುದು. ತೆರೆದ ಬಾಗಿಲಿಂದ ನೀರು ಧಾರಾಕಾರವಾಗಿ ಹರಿದು ಕೀಟವನ್ನು ಕೊಚ್ಚಿಕೊಂಡು ಚೀಲದೊಳಗೆ ಒಯ್ದುಬಿಡುತ್ತದೆ. ಅರ್ಧ ಗಂಟೆಯೊಳಗೆ ಆ ಪ್ರಾಣಿಯ ಇತಿಶ್ರೀಯಾಗಿಬಿಡುವುದು.

ಮಾಂಸಾಹಾರಿ ಸಸ್ಯಗಳ ವಿಚಾರ ಸುದೀರ್ಘ ಸಂಶೋಧನೆ ನಡೆದಿದ್ದರೂ ಕುಳಿತಲ್ಲಿ ಬೇಟೆಯಾಡುವ ಈ ಸೃಷ್ಟಿ ವೈಚಿತ್ರ್ಯದ ರಹಸ್ಯಗಳನ್ನು ಇನ್ನೂ ಪೂರ್ತಿ ಬಿಡಿಸಲು ಸಾಧ್ಯವಾಗಿಲ್ಲ. ವಿಜ್ಞಾನಿಗಳು ಇನ್ನೂ ಶೋಧಿಸುತ್ತಲೇ ಇದ್ದಾರೆ. *

('ಡಿಸ್ಕವರಿ'ಯ ಆಧಾರದಿಂದ)

# ವಿಜ್ಞಾನಗಳ ವಿಜ್ಞಾನ ಯೋಗ



●ಆರ್.ಆರ್. ದಿವಾಕರ

"ಕ್ರಿ.ಪೂ. ಏಳನೂರು ವರ್ಷಗಳ ಹಿಂದೆಯೇ ಭಾರತೀಯರು ಬಂದು ನಿಂತ ಕವಲು ದಾರಿಯಲ್ಲೀಗ ನಾವು ಪಾಶ್ಚಿಮಾತ್ಯರು ಬಂದು ನಿಲ್ಲಲಿದ್ದೇವೆ. ಆದ್ದರಿಂದಲೇ ಪೌರ್ವಾತ್ಯ ಪ್ರಜ್ಞೆಯ ಪರಿಕಲ್ಪನೆಗಳನ್ನು ಪ್ರತಿಮೆಗಳನ್ನೂ ನಾವು ಎದುರಿಸಬೇಕಾದಾಗಲೆಲ್ಲಾ ವ್ಯಗ್ರರಾಗುತ್ತೇವೆ, ಉದ್ದೀಪ್ತರಾಗುತ್ತೇವೆ, ಕಿರಿಕಿರಿಗೊಳ್ಳುತ್ತೇವೆ. ಆದರೂ ಅವುಗಳಲ್ಲಿ ವಿಶೇಷ ಆಸಕ್ತಿ ವಹಿಸುತ್ತೇವೆ."

*-ಹೇನ್ರಿ ಝಿಮರ್‌ನ "ಭಾರತೀಯ ತತ್ತ್ವಜ್ಞಾನಗಳು" ಎಂಬ ಗ್ರಂಥದ ಪ್ರಾರಂಭದ ವಾಕ್ಯಗಳಿವು.*

★ ★ ★

ಹಿಂದುಗಳಿಗೆ ಅನುಭವವೇ ಬೌದ್ಧಿಕ ಸತ್ಯಕ್ಕೆ ಪ್ರಮಾಣವಾಗಿರುವುದೇ ಈ ಪ್ರತಿಕ್ರಿಯೆಗೆ ಕಾರಣ. ಜ್ಞಾನ ಪಡೆಯಬೇಕಾದರೆ ಆ ಜ್ಞಾನವೇ ಬದುಕಾಗಬೇಕು. ಜಗತ್ತಿನಲ್ಲಿಯ ಅತ್ಯಂತ ಉತ್ಕೃಷ್ಟವಾದ ತಾತ್ತ್ವಿಕ ಚಿಂತನೆಗಳೂ ಊಹಾಪೋಹಗಳೂ ಯಾವೋ ಒಂದು ರೀತಿಯಲ್ಲಿ ಬದುಕಿನ ಭಾಗಗಳಾಗದಿದ್ದರೆ ಬರಿ. ಮಂಜುಮಂಜಾದ ತರ್ಕಗಳಾಗಿ ಬಿಡುತ್ತವೆ. ವೈಜ್ಞಾನಿಕ ಸಾಧನಗಳ ಮೂಲಕ ಇಂದ್ರಿಯ ಶಕ್ತಿಗಳ ಕ್ಷೇತ್ರವನ್ನು ವಿಸ್ತಾರಗೊಳಿಸಿರುವಂತೆಯೇ ಕೆಲವೊಂದು ಸಾಧನಗಳ ಮೂಲಕ ನಮ್ಮ ಸ್ವಾಭಾವಿಕ ಅನುಭವ ಶಕ್ತಿಗಳನ್ನೂ ಕಲ್ಪನಾತೀತವಾಗಿ ವಿಸ್ತರಿಸ

ಬಹುದು. ನಮ್ಮ ದೈನಂದಿನ ಭೌತಿಕ ಜೀವನದ ಎಲ್ಲೆಯಾಚೆಗೆ ನೂರಾರು ಅಡಿ ಕಣ್ಣಾಡಿಸಬಹುದು. ಯೋಗವೆಂದರೆ ಮಾನವ ಜೀವನದ ಸಮಗ್ರಾನುಭವವಲ್ಲದೆ ಬೇರೇನೂ ಅಲ್ಲ, ಅದೊಂದು ಪೂರ್ಣ ಮಾನವನ ವಿಜ್ಞಾನ.



"ಕೇವಲ ತರ್ಕ ಸುಖಕ್ಕಾಗಿ ಜ್ಞಾನವು ಭಾರತೀಯರನ್ನು ಕ್ವಚಿತ್ತಾಗಿ ಆಕರ್ಷಿಸಿದೆ. ಅಥವಾ ಇಂಥ ತರ್ಕಜ್ಞಾನದ ಸುಖವು ಅವರನ್ನೆಂದೂ ಆಕರ್ಷಿಸಿಲ್ಲವೆಂದೇ ಹೇಳಬಹುದು. ಇದಕ್ಕೆ ವಿಪರೀತವಾಗಿ ಅವರು ಪ್ರತ್ಯಕ್ಷಾನುಭವದಲ್ಲಿಯೇ ಆಸಕ್ತರಾಗಿದ್ದಾರೆ. ತತ್ತ್ವ ಜ್ಞಾನವನ್ನು ಸಾಕ್ಷಾತ್ಕರಿಸಿಕೊಳ್ಳಬೇಕು. ಕೇವಲ ವಿಶ್ಲೇಷಣಾತ್ಮಕ ಪಾಂಡಿತ್ಯದ ಬೆಳವಣಿಗೆ ಅಥವಾ ಬದುಕಿಗೆ ಅಪ್ರಸ್ತುತವಾದ ಸೃಷ್ಟಿಯಲ್ಲಿ ಅವರು ಇತ್ತೀಚಿನವರೆಗೂ ಆಸಕ್ತರಾಗಿರಲಿಲ್ಲ. ಪಾಶ್ಚಿಮಾತ್ಯ ಮಾದರಿಯೇ ವಿಷದ ಮನೋಧರ್ಮವನ್ನು ಅಸ್ಥಿರಗೊಳಿಸುತ್ತಿದೆ.

ಭಾರತೀಯರಿಗೆ ಜ್ಞಾನವು ಸಾಕ್ಷಾತ್ಕಾರದ ಸಾಧನವಾಗಿತ್ತು, ವಸ್ತುಸ್ವಭಾವ ಶೋಧನೆಗೆ ವ್ಯಾವಹಾರಿಕ ಶಕ್ತಿಯಾಗಿತ್ತು. ಅದರ ಉದ್ದೇಶ ನಮ್ಮ ಗುಪ್ತ ಸತ್ ಶಕ್ತಿಗಳನ್ನು ವಿಸ್ತಾರಗೊಳಿಸುವುದು. ನಮ್ಮ ಜೀವನವನ್ನು ಪರಮಸತ್ಯದಲ್ಲಿ ಪ್ರತಿಷ್ಠಿತಗೊಳಿಸುವುದು. ಅಂದರೆ ನಮ್ಮ ಅಸ್ತಿತ್ವಕ್ಕೆ ಮೂಲ ಕಾರಣವೂ ದೇಶ ಕಾಲಾತೀತವೂ ಆದ ತತ್ತ್ವದಲ್ಲಿ ನೆಲೆಗೊಳಿಸುವದೇ ಆಗಿತ್ತು"

*-ಜಾಕ್ವೀಸ್ ಎಚ್. ಮಸೂಯಿ-*
*ದಿ ಸ್ಟೋರಿ ಆಫ್ ಯೋಗ-*
*ಗ್ರಂಥದ ಮುನ್ನುಡಿಯಿಂದ*

ಮೇಲಿನ ಅವತರಣಿಕೆಗಳಲ್ಲಿ 'ಕೆಲವೊಂದು ಸಾಧನ'ಗಳನ್ನು ಬಳಸಿಕೊಳ್ಳಬೇಕೆಂದು ಹೇಳಿದ್ದು, ಯೋಗಕ್ಕೇ ನೇರವಾಗಿ ಸಂಬಂಧಿಸಿದೆ. ಪಾತಂಜಲಿ ಯೋಗ ಸೂತ್ರಗಳಿಗನುಸಾರವಾದ ಯೋಗದ ಅನೇಕ ಪ್ರಕಾರಗಳ ಸಾಧನೆಯಿಂದಲೇ ಬೌದ್ಧಿಕ, ಮಾನಸಿಕ, ರಸಾತ್ಮಕ ಹಾಗೂ ಸಂಕಲ್ಪ ಶಕ್ತಿಗಳನ್ನು ಕಲ್ಪನಾತೀತವಾಗಿ ಅಭಿವೃದ್ಧಿಪಡಿಸಬಹುದೆಂದು ಸಿದ್ಧವಾಗಿದೆ.

ಯೋಗ ಸೂತ್ರಗಳಲ್ಲಿಯ ಯೋಗವು ಧ್ಯಾನ, ವಿಚಾರ ಸಾಮರ್ಥ್ಯ ಹಾಗೂ ಸಮಾಧಿ ಗಳಲ್ಲಿ ಪರಿಣತಿ ನೀಡವುದರಿಂದ ಅದೊಂದು ಪ್ರಜ್ಞೆ ಹಾಗೂ ದಕ್ಷತೆಯ ಅನುಷ್ಠಾನವಾಗಿದೆ. ಪ್ರಾಣಾಯಾಮ ಹಾಗೂ ಚಿತ್ತವೃತ್ತಿ ನಿಯಂತ್ರಣ ಮೂಲಕ ಖಚಿತ ಜ್ಞಾನ ಪ್ರಾಪ್ತಿಯ ಸಾಧ್ಯತೆಗಳನ್ನು ಇದು ತೋರಿಸುತ್ತದೆ; ವೈರಾಗ್ಯದ ಮುಖಾಂತರ ಜೀವನದ ಮೇಲೆ ಪ್ರಭುತ್ವ ಸಾಧಿಸುವುದನ್ನು ತಿಳಿಸುತ್ತದೆ.

ಯಮ ನಿಯಮಗಳು ನಮ್ಮಲ್ಲಿ ವಿಕಾಸ ಹೊಂದಿದ ಶಕ್ತಿಗಳ ದುರುಪಯೋಗವಾಗದಂತೆ ತಡೆಯುತ್ತವೆ. ಆಧುನಿಕ ವಿಜ್ಞಾನದಂತೆ ಯೋಗವು "ಮೌಲ್ಯಗಳ ವಿಷಯದಲ್ಲಿ ತಟಸ್ಥ" ವಾಗಿರುವುದಿಲ್ಲ. ನೈತಿಕ ಹಾಗೂ ಆಧ್ಯಾತ್ಮಿಕವಾದ ಮಾನವೀಯ ಮೌಲ್ಯಗಳಿಗೆ ಮಹತ್ವ ನೀಡುತ್ತದೆ.

ಇಂದು ವಿಜ್ಞಾನ ಹಾಗೂ ತಂತ್ರಜ್ಞಾನಗಳಿಗೆ ಅನೇಕ ಪ್ರಾಪಂಚಿಕ ಮತ್ತು ಧರ್ಮನಿರಪೇಕ್ಷ ಗುರಿಗಳಿರಬಹುದು. ಆದರೆ ಯಾವುದೇ ಕ್ರಿಯೆ ಹಾಗೂ ವಿಚಾರ ಕ್ಷೇತ್ರಗಳಲ್ಲಿ ಅರ್ಥಪೂರ್ಣವಾದುದನ್ನೇನನ್ನಾದರೂ ಸಾಧಿಸಬೇಕಿದ್ದರೆ, ದೈಹಿಕ, ಪ್ರಾಣಿಕ, ಬೌದ್ಧಿಕ, ಭಾವನಾತ್ಮಕ ಶಕ್ತಿಗಳೂ ಸಂಕಲ್ಪ ಶಕ್ತಿಯ ಬಳಕೆಯೂ ಅಗತ್ಯವಾಗಿದೆ.

ಅಗತ್ಯವಾದ ಸಾಧನ ಶಕ್ತಿಗಳ ಬೆಳವಣಿಗೆಗೆ ಯೋಗವು ತುಂಬಾ ಪ್ರತಿಷ್ಠಿತವಾದ ಹಾಗೂ ಚೆನ್ನಾಗಿ ಪ್ರಯೋಗಸಿದ್ಧವಾದ ಅನುಷ್ಠಾನ ಶಾಸ್ತ್ರವಾಗಿದೆ. ಮಾನವ ಜೀವಿ ಸಂಕೀರ್ಣವಾದರೂ ಸುಸಂಘಟಿತವಾದ ಜೈವಿಕ ಪ್ರಾಣಿಯಾಗಿದ್ದಾನೆ. ಯೋಗವು, ಜೀವನದ ಯಾವುದೇ ಕ್ಷೇತ್ರದಲ್ಲಿ ಉನ್ನತ ವಿಕಾಸಕ್ಕಾಗಿ ಪ್ರಯತ್ನ ಪಡುತ್ತಿರುವ ಮಾನವನ ಸಮಗ್ರ ಅಭಿವೃದ್ಧಿಯನ್ನೇ ಗುರಿಯನ್ನಾಗಿಸಿಕೊಂಡಿದೆ. ಮನುಷ್ಯನನ್ನು ಪತನದ ದಾರಿಯಿಂದ ರಕ್ಷಿಸುವ, ನೈತಿಕ ಹಾಗೂ ಆಧ್ಯಾತ್ಮಿಕ ಸಂಯಮ ಶಕ್ತಿಯನ್ನೂ ಯೋಗದಲ್ಲಿ ಅಳವಡಿಸಿರುವುದು ಇನ್ನೊಂದು ವಿಶೇಷ ಅಂಶವಾಗಿದೆ.

ಈ ಲೇಖನದ ಮುಖ್ಯ ವಿಷಯಕ್ಕೆ ಬರುವ ಮೊದಲು, 14ನೇ ಶತಮಾನದಲ್ಲಿದ್ದ ಶೃಂಗೇರಿ ಜಗದ್ಗುರುಗಳಾದ ವಿದ್ಯಾರಣ್ಯರಿಂದ ವಿರಚಿತ

"ಜೀವನ್ಮುಕ್ತಿ" ಎಂಬ ಗ್ರಂಥದಿಂದ ಒಂದು ಮಹತ್ವದ ಅವತರಣಿಕೆಯೆತ್ತಿ ಓದುಗರ ಗಮನ ಸೆಳೆಯ ಬೇಕೆಂದು ಬಯಸುತ್ತೇನೆ.

ಆ ಅವತರಣಿಕೆಯ ಅರ್ಥ ಹೀಗಿದೆ- "(14ನೆಯ ಶತಮಾನದಲ್ಲಿ ಪ್ರಚಲಿತವಿದ್ದ) ಅನೇಕ ಸಮಯ-ಮತ ಸಂಪ್ರದಾಯಗಳಲ್ಲಿ ನಾಸ್ತಿಕರು ಮಾತ್ರ ಮಾನವ ಜೀವಿಯ ಮುಕ್ತಿಯನ್ನು ಒಪ್ಪಿಕೊಳ್ಳುವುದಿಲ್ಲ. ಜೈನ, ಬೌದ್ಧ, ವೈಶೇಷಿಕ, ನೈಯಾಮಿಕ, ಶೈವ, ವೈಷ್ಣವ, ಶಾಕ್ತ, ಸಾಂಖ್ಯ ಮತ್ತು ಯೋಗದ ಎಲ್ಲ ಶಾಖೆಗಳವರೂ ಮೋಕ್ಷವನ್ನೇ ಪರಮ ಪುರುಷಾರ್ಥವೆಂದು ನಂಬಿದ್ದಾರೆ. ಅವರ ತತ್ತ್ವ ಸಿದ್ಧಾಂತಗಳು ಭಿನ್ನಭಿನ್ನವಾದರೂ- ಜೀವನ ಆತ್ಮಗಳ ಕಲ್ಪನೆ ಬೇರೆಬೇರೆಯಾದರೂ-ಅವರೆಲ್ಲ ಮೋಕ್ಷ ಸಾಧನೆಗಾಗಿ, ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿ-ಗಳೆಂಬ ಅಷ್ಟಾಂಗಯುಕ್ತ ಪಾತಂಜಲಿ ಯೋಗವನ್ನೇ ಅನುಸರಿಸತ್ತಾರೆ."

*-ಮದ್ರಾಸಿನ ಅಡ್ಯಾರ ಪ್ರಕಾಶನವಾದ-*
*ಪಂಚದಶಿ ಕರ್ತೃ ವಿದ್ಯಾರಣ್ಯ ವಿರಚಿತ*
*ಜೀವನವಿಮುಕ್ತಿ ವಿವೇಕ-ಪು.144*

ಈ ಪ್ರಬಂಧದ ಶೀರ್ಷಿಕೆಯು ಯೋಗದ ಧ್ಯೇಯೋದ್ದೇಶಗಳ ಬಗೆಗೆ ಬಹು ದೊಡ್ಡ ಮಾತು ಹೇಳಿದಂತೆ ಅನ್ನಿಸಬಹುದು. ಆದರೆ ಮೇಲಿನ ಅವತರಣಿಕೆಯ ಯೋಗದ ಬಗೆಗಿನ ಈ ಅಭಿಪ್ರಾಯವನ್ನು ಸಮರ್ಥಿಸುತ್ತದೆನ್ನಿಸುವುದು. ಇದಲ್ಲದೆ ಪಾತಂಜಲಿ ಯೋಗ ಸೂತ್ರ ರಚನೆಯ ನಂತರ (ಕ್ರಿ.ಪೂ. 700) ಅದರ ಆಧಾರದ ಮೇಲೆ, ಜ್ಞಾನ, ಭಕ್ತಿ, ಕರ್ಮ, ರಾಜ, ಹಟ, ಲಯ-ಇತ್ಯಾದಿ ಅನೇಕ ಯೋಗಗಳು ಬೆಳೆದು ಬಂದವು. ಈ ಎಲ್ಲ ಯೋಗಗಳಿಗೂ ಮಾನವ ಆತ್ಮದ ಮುಕ್ತಿಯೇ ಗುರಿಯಾಗಿದೆ ನಿಜ. ಹಾಗೆಂದರೆ, ಮಾನವ ಚಿತ್ತ ಶಕ್ತಿಗಳ ವಿಕಾಸವನ್ನೇ ಗುರಿಯಾಗಿಟ್ಟುಕೊಂಡ ಈ ಯೋಗದ ವ್ಯಾಪಕ ಪದ್ಧತಿಯು ಮೋಕ್ಷೇತರ ಉದ್ದೇಶಗಳಿಗೆ ಉಪಯುಕ್ತವಾಗಿರಲಿಲ್ಲವೆಂದರ್ಥವಲ್ಲ. ನಿಜವಾಗಿ ಯೋಗದ ದೃಷ್ಟಿ ಸಮಗ್ರವಾದುದು. ಅದರಲ್ಲಿ ಮಾನವ ಜೀವಿಯ ಸಮಗ್ರ ವ್ಯಕ್ತಿತ್ವ ವಿಕಾಸ ಹಾಗೂ ಸುಪ್ತವಾದ ಮಾನವೀಯ ಶಕ್ತಿಗಳನ್ನು ಜಾಗೃತಗೊಳಿಸಿ ವಿಕಾಸಗೊಳಿಸುವ ಗುರಿ ಅಡಕವಾಗಿವೆ

'ಯೋಗ' ಶಬ್ದವು 'ಯಜ್' ಎಂಬ ಸಂಸ್ಕೃತ ಧಾತುವಿನಿಂದ ಬಂದಿದೆ. ಜೋಡಿಸು(ಕುದುರೆ ಅಥವಾ ಎತ್ತುಗಳಂತೆ ನೊಗಕ್ಕೆ) ಹೂಡು ಎಂದು ಧಾತುವಿನ ಅರ್ಥ. 'ಯಜ್' ಧಾತುವಿಗೆ ಎರಡು ಅರ್ಥಗಳುಂಟು.

1) ವಿಶ್ವ ಚೆತನ್ಯದೊಡನೆ ಒಂದಾಗುವುದಕ್ಕಾಗಿ ಚಿತ್ತೈಕಾಗ್ರತೆ ಸಾಧಿಸು.

2) ಧ್ಯಾನಮಗ್ನನಾಗು.

ಇಂದು 'ಯೋಗ' ಶಬ್ದವು ತುಂಬಾ ಪರಿಚಿತವೂ, ಜನಪ್ರಿಯವೂ, ಆಗಿದೆ. ಅದು, ಹಠ, ರಾಜ, ಭಕ್ತಿ, ಜ್ಞಾನ, ಕರ್ಮ, ಲಯ ಇತ್ಯಾದಿ ಎಲ್ಲ ಯೋಗಗಳಿಗೂ ಸಾಮಾನ್ಯವಾಗಿದೆ. ಆಧ್ಯಾತ್ಮಿಕವಾದ ವಿಶಿಷ್ಟ ಅರ್ಥದಲ್ಲಿ ಯೋಗ ಶಬ್ದವು ಮೊದಲು ಕಠೋಪನಿಷತ್ತಿನಲ್ಲಿ ಕಂಡು ಬರುತ್ತದೆ. ಆ ಉಪನಿಷತ್ತು,

*"ಯದಾಪಂಚಾವತಿಷ್ಠಂತೇ*
*ಜ್ಞಾನಾನಿ ಮನಸಾಸಹ।*
*ಬುದ್ಧಿಶ್ಚ ನವಿಚೇಷ್ಟತಿ*
*ತಮಾಹುಃ ಪರಮಾಗತಿಃ।*

ಎಂದು ಹೇಳುತ್ತದೆ.

ಪಂಚ ಜ್ಞಾನೇಂದ್ರಿಯಗಳು- ಮನಸ್ಸೂ ಸಹಿತವಾಗಿ ಯಾವಾಗ ವಿಷಯಗಳಿಂದ ವಿಮುಖವಾಗುವವೋ, ಬುದ್ಧಿಯ ವಿಷಯಗಳತ್ತ ಪ್ರವೃತ್ತವಾಗುವುದಿಲ್ಲವೊ ಆಗ ಈ ಪ್ರತ್ಯಾಹಾರ ರೂಪಿ ವಿಷಯ ನಿವೃತ್ತಿಯೇ ಪರಮಜ್ಞಾನಸಾಧನವಾಗುತ್ತದೆ.

ಕಠೋಉಪನಿಷತ್ತು "ಯೋಗ ವಿಧಿ"ಯನ್ನು ಕುರಿತೂ ಹೇಳುತ್ತದೆ. ಈ ಉಪನಿಷತ್ತು ವರ್ಣಿಸುವ ಪರಮಾನಂದ ಸ್ಥಿತಿಯು ಮುಂದೆ (ಕ್ರಿ.ಪೂ.700) ಪಾತಂಜಲಿ ಯೋಗ ಸೂತ್ರಗಳಲ್ಲಿ ವರ್ಣಿತವಾದ ಯೋಗಸ್ವರೂಪವನ್ನೇ ಧ್ವನಿಸುತ್ತದೆ. ಪಾತಂಜಲ ಯೋಗಸೂತ್ರವು ಯೋಗವನ್ನು "ಚಿತ್ತ ವೃತ್ತಿ ನಿರೋಧ"ವೆಂದೂ ಅದರ ಪರಿಣಾಮವನ್ನು "ಸ್ವರೂಪೇ ಅವಸ್ಥಾನಮ್" ಅಥವಾ "ಕೈವಲ್ಯ"ವೆಂದೂ ವರ್ಣಿಸಿದೆ. ಶುದ್ಧ ಸ್ವಯಂಭೂಶಕ್ತಿಯನ್ನು "ಚಿತ್ತ"ವೆಂದು ಕರೆಯಲಾಗಿದೆ. ಸಂಸ್ಕೃತಿ ಬಲ್ಲವರಿಗೆ "ಚಿತ್ತ ಶಕ್ತಿ", "ಚಿದಾಕಾಶ", "ಚಿದ್ಘನ"- ಎಂಬ ಶಬ್ದಗಳು ಸುಪರಿಚಿತವಾಗಿವೆ. ಮಾನವನ ಮೆದುಳು ಜಡವಾಗಿದ್ದರೂ

ಅದ್ಭುತವಾಗಿ ವಿಕಸಿತವಾದ ಮಾನವನ ಗಣಕ ಯಂತ್ರವಾಗಿದೆ. ಅದನ್ನು ನಿಯಂತ್ರಿಸುವ ಮಹಾನ್ ಚೈತನ್ಯ ಶಕ್ತಿಯು ವಿಶ್ವವ್ಯಾಪಿಯಾದ ಸ್ವಯಂ ಭೂ ಶಕ್ತಿಯಾಗಿದೆ.

ಮಾನವ ಜೀವಿಯು ಭೌತಶಾಸ್ತ್ರ ಹಾಗೂ ರಸಾಯನ ಶಾಸ್ತ್ರಗಳ ನಿಯಮಗಳಿಗೆ ಬದ್ಧವಾದ ಜಡದೇಹ ಹಾಗೂ ಪ್ರಾಣ ಶಕ್ತಿಗಳ ಸಂಕೀರ್ಣವಾಗಿದ್ದಾನೆ. ಅವನಲ್ಲಿ ಚಿತ್‌ಶಕ್ತಿ ನೆಲೆಸಿದೆ. ದೇಹದಲ್ಲಿಯ ಮೆದುಳಿನ ಸಂಕೀರ್ಣ ವ್ಯಾಪಾರವನ್ನು ನಾನಾ ರೂಪಿಯಾದ ಚಿತ್ ಶಕ್ತಿಯೇ ನಿರ್ವಹಿಸುತ್ತದೆ. ನಿಜವಾಗಿ ಈ ಚಿತ್ ಶಕ್ತಿಯು ಸನ್ನಿಹಿತವಿಲ್ಲದಾಗ, ಅಥವಾ ಜಡ ದೇಹದೊಡನೆ ಸಂವೇದನ ಸಂಬಂಧ ಹೊಂದದಿರುವಾಗ ಮಾನವ ಶರೀರವೊಂದು ಕೇವಲ ಜೀವಂತ ಮುದ್ದೆ ಮಾತ್ರವಾಗಿರುವುದು. ಜೀವಂತವಾದ ಮಾನವ ಜೀವಿಯು "ಮಾನವ ಜೀವಿ" ಎನ್ನಿಸಿಕೊಳ್ಳಬೇಕಾದರೆ ಈ ಚಿತ್ ಶಕ್ತಿಯ ಗೃಹವಾಗಿರಬೇಕಾಗುತ್ತದೆ. ಈ ಚಿತ್ ಶಕ್ತಿ ಇರುವ ಪ್ರಮಾಣಕ್ಕನುಗುಣವಾಗಿ ಮಾನವ ಜೀವಿಯ ಜೀವಂತಿಕೆ ಇರುತ್ತದೆ. ಮನುಷ್ಯನ ಮೆದುಳು ನಿಷ್ಕ್ರಿಯವಾಗುವವರೆಗೆ ಆ ಮನುಷ್ಯನು ಪೂರ್ಣವಾಗಿ ಸತ್ತಿರುವನೆಂದು ಭಾವಿಸಬಾರದೆಂದು ಆಧುನಿಕ ವೈದ್ಯಕೀಯ ಶೋಧವು ನಿರ್ಣಯಿಸಿದೆ. ನಾಡಿಯ ಬಡಿತ ನಿಂತ ಮೇಲೆಯೂ ಏಳು ನಿಮಿಷಗಳವರೆಗೂ ಮೆದುಳಿನ ನಾಡಿ ಬಡಿತವಿರುತ್ತದೆಂದು ಕಂಡು ಹಿಡಿಯಲಾಗಿದೆ. ಇದು ಚಿತ್ತ ಅಥವಾ ಪ್ರಜ್ಞಾವಶೇಷದ ಸೂಚನೆಯಾಗಿದೆ.

ನಾನು ಇಲ್ಲಿ ಆಧುನಿಕ ಭೌತಿಕ ವಿಜ್ಞಾನ ಹೇಳುವ (ಜಡ) ವಸ್ತು ಹಾಗೂ ಚಿತ್ತಗಳಲ್ಲಿ ಯಾವುದು ಮೊದಲು ಇರುವದೆಂಬ ವಿಷಯವನ್ನು ಚರ್ಚಿಸುವುದಿಲ್ಲ. ಆದರೆ ಆಧುನಿಕ ವಿಜ್ಞಾನವೇ ಜಡಪದಾರ್ಥವೆಂಬುದೇ ಇಲ್ಲವೆಂದು ಶಕ್ತಿಯ ಒಂದು ರೂಪವೇ ಅದು ಎಂದೂ ನಿರ್ಣಯಕ್ಕೆ ಬಂದಿದೆ. ಆದರೆ ಚಿತ್ತದ ಕಾರ್ಯವಿಧಾನವನ್ನಾಗಲಿ ಜಡ ಮೆದುಳಿನೊಡನೆ ಅದಕ್ಕಿರುವ ಸಂಬಂಧವನ್ನಾಗಲಿ ಆಧುನಿಕ ವಿಜ್ಞಾನವು ಸಮರ್ಥವಾಗಿ ವಿವರಿಸು



ವುದಿಲ್ಲ. ಚಿತ್ತವು ಸ್ವತಃ ಶಕ್ತಿಯಾಗಿದ್ದು, ಜೈವಿಕ ವಿಕಾಸದೊಂದಿಗೆ ಅದೂ ವಿಕಾಸ ಹೊಂದುತ್ತಿದೆ ಎಂದು ಹೇಳಿದರೆ ನನ್ನ ಈ ಲೇಖನದ ಉದ್ದೇಶಕ್ಕೆ ಸಾಕಾಗುತ್ತದೆ.

ಮಾನವ ಜೀವಿಯಲ್ಲಿ ಈ ಚಿತ್ ಶಕ್ತಿಯು ಸ್ಪಷ್ಟವಾಗಿ ಗೋಚರವಾಗುತ್ತಿದ್ದು ಅದು ವಿಸ್ತಾರವಾಗುತ್ತಿದೆ. ಊರ್ಧ್ವಗಾಮಿಯಾಗಿಯೂ ವಿಕಾಸಹೊಂದುತ್ತದೆ. ಈ ಚಿತ್ತವು ಸ್ವಯಂಪ್ರಜ್ಞೆಯುಳ್ಳದ್ದಾಗಿರುವದಲ್ಲದೆ ಸದಸದ್ ವಿವೇಕವನ್ನು ಪಡೆದಿದೆ.

ಇದೆಲ್ಲದರ ಅರ್ಥ ಇಷ್ಟು: ಜ್ಞಾನ ಶಕ್ತಿಯಾಗಿದೆ. ಚೈತನ್ಯ ಅಥವಾ ಅರಿವು ಹಾಗೂ ಸಂವೇದನೆಗಳು ಚಿತ್ತದ ಲಕ್ಷಣಗಳು. ಜಡ ವಸ್ತುಗಳಲ್ಲಿಯೂ ಅರಿವಿನ ಮೂಲ ಪ್ರಾಥಮಿಕ ರೂಪಗಳು ಕಂಡುಬರುತ್ತವೆ. ಪ್ರಕೃತಿಯಲ್ಲಿರುವ ಜಲಜನಕ ಅಣು ಹಾಗೂ ಆಮ್ಲಜನಕ ಅಣುಗಳು ಒಂದು ಗೂಡಿದಾಗ ನೀರಿನ ರೂಪತಾಳುತ್ತವೆ. ಆ ಅಣುಗಳಲ್ಲಿ ಚೈತನ್ಯವಿಲ್ಲವಾಗಿದ್ದರೆ ಈ ರಾಸಾಯನಿಕ ಕ್ರಿಯೆ ಸಾಧ್ಯವಾಗುತ್ತಿರಲಿಲ್ಲ. ಒಂದು ವಿಶಿಷ್ಟ ಅಣುವಿನಲ್ಲಿರುವ ಚೇತನ ಶಕ್ತಿಯಿಂದಲೇ ರಾಸಾಯನಿಕ ಕ್ರಿಯೆಯು ಯಾಂತ್ರಿಕ ಮಿಶ್ರಣದಿಂದ ಭಿನ್ನವಾಗಿರುತ್ತದೆ.

ಈ ಚೇತನ ಶಕ್ತಿ-ಅರಿವು ಹಾಗೂ ಸಂವೇದನಾ ಶಕ್ತಿಗಳು ಮಾನವನಲ್ಲಿ ಸಾಗರದಷ್ಟು ವಿಶಾಲವಾಗಿ, ದಿಗ್ಭ್ರಮೆಗೊಳಿಸುವಷ್ಟು ಉನ್ನತವಾಗಿ ವಿಕಾಸ ಹೊಂದಿವೆ ಮತ್ತು ನಾನಾ ವರ್ಣದ ನಾನಾ ಪ್ರಕಾರದ ಪ್ರತಿಭಾಶಕ್ತಿಯಾಗಿ ಅರಳಿವೆ.

ವಾಸ್ತವವಾಗಿ ನಮಗೆ ತಿಳಿದ, ತರ್ಕಬದ್ಧ ವಾಸ್ತವ ಸಂಶೋಧನೆಯಿಂದ ದಾಖಲೆಗೊಂಡ ಮಾನವ ಜಾತಿಯ ಚರಿತ್ರೆಯು 50000 ವರ್ಷಗಳ ಹಿಂದೆ ಮಾನವನು ಕೆನ್ಯಾದಲ್ಲಿ ಗೃಹವಾಸಿಯಾಗಿದ್ದನು. ಇಂದು ಮಾನವ ಜನಸಂಖ್ಯೆ 50 ಕೋಟಿಯಾಗಿದ್ದು 159 ರಾಷ್ಟ್ರಗಳಲ್ಲಿ ಹಂಚಿ ಹೋಗಿದೆ. ಆತನ ಶಾರೀರಕ ರಚನೆಯು ವಿಕಾಸದಲ್ಲಿ ಎದ್ದು ಕಾಣುವ ಯಾವ ಬದಲಾವಣೆಯೂ ಆಗಿಲ್ಲ. ಆದರೂ ಆತನ ಬದುಕಿನ ರೀತಿನೀತಿಗಳಲ್ಲಿ ಅರ್ಥಪೂರ್ಣ ಪ್ರಗತಿಯಾಗಿದೆ. ಇಂದು ಆತನು ಚಂದ್ರಲೋಕದಲ್ಲಿ ವಸಾಹತು ಸ್ಥಾಪಿಸುವ ಮಹತ್ವಾಕಾಂಕ್ಷೆ ಹೊಂದಿದ್ದಾನೆ. ಇದೆಲ್ಲವೂ ಚಿತ್ ಶಕ್ತಿಯ ಕ್ರಿಯೆಗಳಲ್ಲಿಯೂ ವಿಕಾಸ, ಅಭಿವೃದ್ಧಿ ಹಾಗೂ ಪ್ರಗತಿಗಳಿಂದಲೇ ಸಾಧ್ಯವಾಗಿದೆ. ಇದೇನೂ ಮಾನವ ಜೀವಗಳಲ್ಲಿಯ ಈ ಶಕ್ತಿಯ ಪವಾಡವಲ್ಲ, ಆಕಸ್ಮಿಕ ಘಟನೆಯಲ್ಲ, ಅದೃಷ್ಟದ ಶಕ್ತಿಯೇನಲ್ಲ. ಚಿತ್ತದಲ್ಲಿಯೇ ಒಂದು ವಿಕಾಸ ಪ್ರೇರಣೆ ಇರುವಂತೆ ಕಾಣುತ್ತದೆ. ಕೆಲವು ಸಾವಿರ ವರುಷಗಳ ಹಿಂದೆ ಭಾರತದ ಕೆಲವು ಪ್ರಾಚೀನ ಋಷಿಗಳೂ ಈ ಚಿತ್ತ ಶಕ್ತಿಯ ಕ್ರಿಯಾವಿಧಾನ ಹಾಗೂ ನಿಯಮಗಳನ್ನು ಕುರಿತು ಅಧ್ಯಯನ ಮಾಡಲು ಪ್ರಾರಂಭಿಸಿರಬೇಕು. ಈ ಅಧ್ಯಯನದಿಂದ ಚಿತ್ತ ಶಕ್ತಿಯನ್ನು ನಿಯಂತ್ರಿಸಿ, ಸಂಗ್ರಹಿಸಿ, ಏಕಾಗ್ರಗೊಳಿಸಿ, ತಮಗೆ ಬೇಕಾದ ರೀತಿಯಲ್ಲಿ ಅದರ ವ್ಯವಹಾರವನ್ನು ನಿರ್ವಹಿಸಿ, ಪರಮ ಆನಂದವನ್ನೇ ತಮ್ಮ ಸಾಧನೆಯ ಪ್ರಾಥಮಿಕ ಗುರಿಯನ್ನಾಗಿರಿಸಿಕೊಂಡಿರಬೇಕು. ನಾನು ಉದ್ಧರಿಸಿದ ಕಠೋಪನಿಷತ್ತಿನ ವಾಕ್ಯಗಳು ರೂಪುಗೊಳ್ಳುವ ಪೂರ್ವದಲ್ಲಿಯೇ ಈ ಚಿತ್ತ ಶಕ್ತಿಯ ಕಾರ್ಯವಿಧಾನದ ಹಾಗೂ ನಿಯಮಗಳ ಅಧ್ಯಯನ ಮಾತ್ರವಲ್ಲದೆ ಅನುಷ್ಠಾನವೂ ಪ್ರಾರಂಭವಾಗಿರಬೇಕು. ಪಾತಂಜಲಿ ಯೋಗಸೂತ್ರಗಳು (ಕ್ರಿ.ಪೂ.700) ಶತಮಾನಗಳ ಪೂರ್ವದಲ್ಲಿಯೇ ಸಹಸ್ರಾರು ಜನರ ಅಧ್ಯಯನ ಹಾಗೂ ಅನುಷ್ಠಾನಗಳ ಪರಿಪಕ್ವ ಫಲಗಳಾಗಿವೆ.

ಮಾನವ ಜೀವಿಯು ಕೇವಲ ಚಿತ್ತ ರೂಪಿಯಲ್ಲ ತಮ್ಮದೇ ಆದ ನಿಯಮಗಳುಳ್ಳ ಜಡ ದೇಹ ಹಾಗೂ ಪ್ರಾಣಗಳ ಸಂಕೀರ್ಣ ಭಾರವನ್ನು ಈ ಚಿತ್ತವು ಹೊರಬೇಕಾಗಿದೆ. ಆದ್ದರಿಂದ ಯೋಗವು ಸಾಫಲ್ಯ ಸ್ವರೂಪಿಯಾದ ಪರಮಾನಂದ ಸ್ಥಿತಿಯನ್ನು ಹೊಂದಲು ಈ ಸಂಕೀರ್ಣ ಪರಿಸ್ಥಿತಿಯೊಂದಿಗೆ ಹೋರಾಡಬೇಕಾಗಿದೆ. ಅದೇನೂ ಸುಲಭವಾದ ಮುನ್ನಡೆಯಾಗಿರಲಿಲ್ಲ.

ಭಾರತೀಯ ನಾಗರಿಕತೆ ಹಾಗೂ ಸಂಸ್ಕೃತಿಗಳ ಇತಿಹಾಸವು ಈ ಜನತೆಯ ಎರಡು ಬಗೆಯ ಸಾಧನೆಯನ್ನು ತಿಳಿಸುತ್ತದೆ.

1. ಪ್ರಕೃತಿಯ ವರದಾನಗಳನ್ನು ಉಪಯೋಗ ಮಾಡಿಕೊಂಡು ಮಾನವ ಜೀವಿಗೆ ಸಹಜವಾದ

ಶಕ್ತಿ ವಿಶೇಷಗಳನ್ನು ಸಂಘಟಿಸಿ ಮನುಷ್ಯನ ಬಾಳನ್ನು ಶ್ರೀಮಂತಗೊಳಿಸುವುದು ಮೊದಲನೆಯ ಪ್ರಯತ್ನ.

2. ಆನಂದ ಪ್ರಾಪ್ತಿಗಾಗಿ ಚಿತ್ತವನ್ನು ದೇಹ ಪ್ರಾಣಗಳ ಬಂಧನದಿಂದ ಮುಕ್ತಗೊಳಿಸುವದು ಎರಡನೆಯ ಪ್ರಯತ್ನ.

ಆದ್ದರಿಂದ ಪ್ರಾಚೀನ ಭಾರತೀಯರು ಲೌಕಿಕ ಕ್ಷೇತ್ರಕ್ಕೆ ಸಂಬಂಧಿಸಿದ ನಾನಾ ವಿಷಯಗಳಲ್ಲಿ ಪ್ರಗತಿ ಸಾಧಿಸಿದವರಲ್ಲಿ ಪ್ರಥಮರಾಗಿದ್ದರಲ್ಲದೆ, ಚಿತ್ತವನ್ನು ಎಲ್ಲ ಭೌತಿಕ ಬಂಧನಗಳಿಂದಲೂ ಮುಕ್ತಗೊಳಿಸಿ ಅದಕ್ಕೆ ಸಹಜವಾದ ಆನಂದವನ್ನೂ ಪ್ರಾಪ್ತಮಾಡಿಕೊಳ್ಳುವುದರಲ್ಲಿಯೂ ಪ್ರಥಮರಾಗಿದ್ದರು. ಈ ಕಾರ್ಯ ಸಾಧನೆಗಾಗಿ ಅವರು ಚಿತ್ತವನ್ನು ಎಲ್ಲ ಬಗೆಯ ಆಸಕ್ತಿಗಳಿಂದ ಮುಕ್ತಮಾಡಿ, ದೇಹಾಭಿಮಾನಕ್ಕೆ ಕಾರಣವಾದ ಎಲ್ಲಬಗೆಯ ಅಹಂಕಾರವನ್ನೂ ಅಹಂಕಾರದ ದುಷ್ಪರಿಣಾಮಗಳನ್ನೂ ನಿರ್ಮೂಲ ಮಾಡಿಕೊಂಡರು. ಇಂಥ ಸಿದ್ಧಿಯನ್ನು ಯೋಗಿಗಳು ಜೀವಂತರಾಗಿರುವಾಗಲೇ ಸಾಧಿಸಿದರು ಅಂದರೆ ಕೈಯಲ್ಲಿರುವ ಕೋಲಿನಂತೆ ಶರೀರವು ಯಾಂತ್ರಿಕವಾಗಿ ಕಾರ್ಯನಿರ್ವಹಿಸಲು ಅವಕಾಶವಿತ್ತು ಸಾಧಿಸಿದರು. ಇದಕ್ಕಾಗಿಯೇ "ಯೋಗ" ಪದ್ಧತಿ ರೂಪುಗೊಂಡಿತು. ಅದೇ ಮುಂದೆ ನಾನಾ ಬಗೆಯ ಯೋಗ ಪ್ರಕಾರಗಳಾಗಿ ಬೆಳೆಯಿತು.

ಯೋಗವು ಚಿತ್‌ಶಕ್ತಿಯ ನಿಯಮಗಳನ್ನು ಅಧ್ಯಯನಮಾಡಿ ಅವುಗಳನ್ನು ಅನುಷ್ಠಾನಗೊಳಿಸುವ ಪದ್ಧತಿಯ ವಿಜ್ಞಾನವೂ ಹೌದು: ಕಲೆಯೂ ಹೌದು. ಮನುಷ್ಯನು ಬಯಸುವ ಎಲ್ಲ ಉದ್ದೇಶ ಸಾಧನೆಗಾಗಿ ಈ ಚಿತ್ ಶಕ್ತಿಯ ಸಾಧ್ಯತೆಗಳನ್ನೆಲ್ಲ ಬಳಸಿಕೊಳ್ಳಲು ಯೋಗವೇ ಇದನ್ನು ಹೇಗೆ ಸಾಧಿಸಲಾಗುವುದೆಂಬ ವಿವರವನ್ನಿಲ್ಲಿ ನೀಡಬೇಕಿಲ್ಲ. ಶಕ್ತಿಸಾಮರ್ಥ್ಯಗಳ ಪ್ರಭುತ್ವವೇ ಮುಖ್ಯವಾಗಿ ಪ್ರಸ್ತುತವಾಗಿದೆ. ಭಾರತದಲ್ಲಿ ಯೋಗಿಗಳು ಚಿತ್ ಶಕ್ತಿಯನ್ನು ಕೈವಲ್ಯ ಅಥವಾ ಮೋಕ್ಷಕ್ಕಾಗಿ ಬಳಸಿದರು; ದೇಹಭ್ರಾಂತಿಯಿಂದ ಈ ಶಕ್ತಿಯನ್ನು ಬಿಡುಗಡೆ ಮಾಡುವ "ಚಿತ್ತ ವೃತ್ತ ನಿರೋಧ"ವೆಂಬ ಯೋಗಸಾಧನೆಯನ್ನು ಅನುಸರಿಸಿದರು ಎಂಬುದನ್ನು ತಿಳಿದರೆ ಸಾಕು.

## -ಯೋಗ ವಿದ್ಯೆ-

'ಯೋಗ' ಸಂಸ್ಕೃತ ಪದದ ಸಾಮಾನ್ಯ ಅರ್ಥ 'ಶಿಸ್ತು-ನಿಯಮ' ಎಂದು. ಭಾರತೀಯರಿಗೆ ಕರ್ಮ, ಪುನರ್ಜನ್ಮಗಳ ಸಂಕಲೆಯಿಂದ ಮುಕ್ತವಾಗುವ ಒಂದು ಸಾಧನ ಯೋಗ. ಜ್ಞಾನ, ಕರ್ಮ ಮತ್ತು ಭಕ್ತಿ ಯೋಗಗಳೆಂಬ ಮೂರು ಮಾರ್ಗಗಳನ್ನು ಭಗವದ್ಗೀತೆ, ಮುಕ್ತಿಯ ಸಾಧನವೆಂದು ಬಣ್ಣಿಸಿದೆ.

ಸಾಮಾನ್ಯವಾಗಿ ನಾವೆಲ್ಲ 'ಯೋಗ' ಎಂದು ಕರೆಯುವುದು ಮಹರ್ಷಿ ಪತಂಜಲಿ ಸೂಚಿಸಿದ ರಾಜಯೋಗವನ್ನು. ಸುಮಾರು ಕ್ರಿ.ಶ. ಮುನ್ನೂರರ ಹೊತ್ತಿಗೆ ಈತ ಕ್ರೋಢೀಕರಿಸಿದ ಯೋಗ ಸೂತ್ರಗಳೇ ಈ ಶಾಸ್ತ್ರದ ಮೂಲಾಧಾರ.

ದೇಹ ಮನಸ್ಸಿನ ಚಟುವಟಿಕೆಗಳು ನಮಗೆ ತಿಳಿದು ನಡೆಯಬಹುದು. ತಿಳಿಯದೆಯೇ ನಡೆಯಬಹುದು. ಇದನ್ನೆಲ್ಲ ಹತೋಟಿಯಲ್ಲಿಟ್ಟು ಮನಸ್ಸು ಚಂಚಲವಾಗದೆ ನಿರ್ಮಲವಾಗಿದ್ದಾಗ, ದೇವರು ಮತ್ತು ಆತ್ಮದ ನಿಜ ಸ್ವರೂಪವನ್ನು ತಿಳಿಯಲು ಯೋಗವಿದ್ಯೆ ಸಹಾಯ ಮಾಡುತ್ತದೆ. ದೇವರನ್ನು ಸೇರಲು, ಆತ್ಮವನ್ನು ಅರಿಯಲು ನಮ್ಮ ದೇಹದ ಮೇಲೂ ಮನಸ್ಸಿನ ಮೇಲೂ ಹತೋಟಿ ಇರಬೇಕು. ಮನಸ್ಸನ್ನು ಅತ್ತಿತ್ತ ಹೋಗಗೊಡದೆ ಒಂದೇ ವಿಷಯ ಯೋಚಿಸುವಂತೆ ಮಾಡಬೇಕು ಎಂದು ನಮ್ಮ ಹಿರಿಯರು ಭಾವಿಸಿದ್ದರು. ಯೋಗವಿದ್ಯೆ ಇದಕ್ಕೆ ಸಹಕಾರಿ.

ಯೋಗ ವಿದ್ಯೆಯಿಂದ ದೇಹ, ಮನಸ್ಸು ಎರಡೂ ಸಮಸ್ಥಿತಿಗೆ, ಕುಶಲ ಸ್ಥಿತಿಗೆ ಬರುತ್ತವೆ. ಹೊರಗಿನ ಪ್ರಪಂಚದ ಒತ್ತಡ ನಮ್ಮ ಮೇಲೆ ಇರದೆ, ನಾವು ಸ್ವತಂತ್ರವಾಗಿ ವ್ಯವಹರಿಸಲು ಶಕ್ತರಾಗುತ್ತೇವೆ. ಎಂಥ ಕಷ್ಟದ ಸ್ಥಿತಿಯಲ್ಲೂ ಮನಸ್ಸು ಉದ್ವಿಗ್ನವಾಗದೇ ಶಾಂತವಾಗಿರುವುದೇ ಯೋಗ ವಿದ್ಯೆಯ ಮೊದಲ ಪ್ರಯೋಜನ; ಪರಮಾರ್ಥ ಮೊಂದಿಗೆ ಬೆರೆಯುವುದು ಅಂತಿಮ ಧ್ಯೇಯ. *

ಅಪ್ರಜ್ಞೆಯಿಂದ ಪ್ರಜ್ಞೆಯವರೆಗಿನ ವಿಕಾಸವನ್ನೆಲ್ಲಾ ಕುರಿತು ಇಲ್ಲಿ ನಾನು ಹೇಳಬೇಕಿಲ್ಲ. ಇಂದು ಮಾನವ ಜೀವಿಯು ಕೇವಲ ಪ್ರಜ್ಞಾವಂತ ಮಾತ್ರವಲ್ಲ, ಸ್ವಯಂ ಪ್ರಜ್ಞೆಯುಳ್ಳವನೂ ಆಗಿದ್ದಾನೆ. ಇದರಿಂದ ತನ್ನ ವಿಕಾಸವನ್ನು ಕೇವಲ ಪ್ರಕೃತಿಯ ಕೈಗೇ ಕೊಡದೆ ಪ್ರಜ್ಞಾಪೂರ್ಣ ವಿಕಾಸ ದ್ವಾರವನ್ನೇ ತೆರೆದಿದ್ದಾನೆ. ಇದಲ್ಲದೆ ಇರುವಿಕೆಯ ಇನ್ನೂ ಉನ್ನತ ಸ್ತರಗಳಿಗೆ ವಿಕಾಸ ಹೊಂದಲು ಯಾವುದು ಒಳ್ಳೆಯದೆಂದು ನಿರ್ಣಯಿಸುವ ವಿವೇಕ ಶಕ್ತಿಯೂ ಅಭಿವೃದ್ಧವಾಗಿದೆ. ಮಾನವನು ಮೂಲತಃ ವಿಕಾಸ ಹೊಂದುತ್ತಿರುವ ಪ್ರಜ್ಞೆಯೆಂದು ಹೇಳಬಹುದು. ದೇಹ ಪ್ರಾಣಗಳ ಸಂಕೀರ್ಣತೆಯು ಅಮುಖ್ಯ ವಿಷಯವಾಗಿದೆ.

ಮಾನವರು ತಾವಿಂದು ದೇಹ ಪ್ರಾಣಗಳ ಸಂಕೀರ್ಣತೆಯ ಮೇಲೆ ಪ್ರಭುತ್ವ ಪಡೆಯುವ ಹಾಗೂ ಸ್ವಾತಂತ್ರ್ಯ ಸಿದ್ಧಗತೆಳತ್ತ ಪ್ರಗತಿ ಹೊಂದುತ್ತಿರುವ ಪ್ರಜ್ಞಾಜೀವಿಗಳೆಂದು ತಿಳಿದರೆ, ತನ್ಮೂಲಕ ಇನ್ನೂ ಉನ್ನತ ಧ್ಯೇಯಗಳನ್ನು ಅನುಸರಿಸುಪರೆಂದು ಭಾವಿಸಿದರೆ ವಿಕಾಸ ಹೋರಾಟದ ಅರ್ಧಪಾಲು ವಿಜಯ ಸಾಧಿಸಿದಂತೆಯೇ ಎನ್ನಬಹುದು.

ಚಿತ್ತದಲ್ಲಿ ಸಹಜವಾಗಿದ್ದ ಸುಪ್ತಶಕ್ತಿಗಳ ಬೆಳವಣಿಗೆ ಹಾಗೂ ಶಿಕ್ಷಣದ ಪರಿಣಾಮಗಳನ್ನು ಅನ್ವಯಿಸುವದರ ಫಲವೇ ಇಂದಿನ ವಿಜ್ಞಾನ ಹಾಗೂ ತಂತ್ರಜ್ಞಾನಗಳಾಗಿವೆ. ಪಂಚ ಜ್ಞಾನೇಂದ್ರಿಯ ಮತ್ತು ಪಂಚ ಕರ್ಮೇಂದ್ರಿಯಗಳು ಈ ಚಿತ್ತ ಶಕ್ತಿಯ ಆಜ್ಞಾಧಾರಕ ಸೇವಕರಂತಿವೆ. ಚಿತ್ತದಲ್ಲಿ ಅರಿವು, ಸಂವೇದನೆ, ವಿಷಯಗ್ರಹಣ, ಅವನ್ನೆಲ್ಲ ಜ್ಞಾನವನ್ನಾಗಿ ಪರಿವರ್ತಿಸುವ ಸಂಘಟನಾ ಶಕ್ತಿ, ಭಾವನಾ ಹಾಗೂ ಕ್ರಿಯಾಶಕ್ತಿ, ಕಲ್ಪನಾ, ಊಹಾ, ಸ್ಫೂರ್ತಿ, ಅಂತಃಸ್ಫುರಣ, ಏಕಾಗ್ರತೆ, ಧ್ಯಾನ ಧಾರಣಾದಿ ಶಕ್ತಿಗಳೂ ಇವೆ. ಇವು ಹಾಗೂ ಇನ್ನೂ ಕೆಲವು ಚಿತ್ತದ ಮೂಲಭೂತ ಶಕ್ತಿಗಳಾಗಿದ್ದು ಉಳಿದವು ಅದರ ಸಾಧನೆ ಸಲಕರಣೆಗಳಾಗಿವೆ.

ಈಗಾಗಲೇ ಭಾರತವನ್ನೊಳಗೊಂಡು ಜಗತ್ತಿನ ಎಲ್ಲ ರಾಷ್ಟ್ರಗಳಲ್ಲಿ ಕವಿಗಳು, ತತ್ತ್ವಜ್ಞಾನಿಗಳು, ಸಂಶೋಧಕರು, ನಿರ್ಮಾಪಕರು, ಪ್ರತಿಭಾನ್ವಿತರು, ತಂತ್ರಜ್ಞಾನಿಗಳು ಉದಯಿಸಿದ್ದಾರೆ. ಮಾನವಕುಲದ ನಾಗರಿಕತೆ ಹಾಗೂ ಸಂಸ್ಕೃತಿಗಳಿಗೆ ಅವರ ಕಾಣಿಕೆ ಹಾಗೂ ಅವರ ಸಿದ್ಧಿಗಳು ಅನಂತವಾಗಿವೆ. ಆದರೆ ಅವರ ಕಾರ್ಯ ಹಾಗೂ ಯಶಸ್ಸುಗಳು ಅವರ ಚಿತ್ತಶಕ್ತಿಯ ಪರಿಣಾಮಗಳೇ ಆಗಿವೆಯಲ್ಲದೆ ಬೇರೆಯಲ್ಲ. ಉಳಿದ ಅಂಶಗಳೆಲ್ಲಾ ಆನುಷಂಗಿಕವಾದವು. ಯೋಗ ವಿಜ್ಞಾನ ಹಾಗೂ ಯೋಗ ಕಲೆಯ ನಿಯಮಿತ ಹಾಗೂ ಕ್ರಮಬದ್ಧ ಅನುಷ್ಠಾನದಿಂದ ಪಡೆಯುವದನ್ನೇ ಎಲ್ಲ ಬಗೆಯ ವಿಜ್ಞಾನಿಗಳೂ ತಂತ್ರಜ್ಞಾನಿಗಳೂ ಪಡೆದಿದ್ದಾರೆ. ಇಷ್ಟೆ, ಅವರ ಶಕ್ತಿ ಸಾಮರ್ಥ್ಯಗಳು ಪ್ರಜ್ಞಾಯುತ ಇಲ್ಲವೇ ಅಪ್ರಜ್ಞಾಯುತ, ತಿಳಿದೋತಿಳಿಯದೆಯೋ - ಕ್ರಮಬದ್ಧವಾಗಿಯೋ ಕ್ರಮರಹಿತವಾಗಿಯೋ ಪ್ರಾಪ್ತವಾಗಿರಬಹುದು. ಅದು ಬೇರೆ ವಿಷಯ.

ಅಷ್ಟಾಂಗ ಯೋಗದಲ್ಲಿ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿ ಎಂಬ ಅಷ್ಟಾಂಗಗಳಿವೆ. ಕೊನೆಯ ಮೂರನ್ನೂ ಒಟ್ಟಿಗೆ ಸೇರಿಸಿ "ಸಂಯಮ" ಎಂದು ಕರೆಯುತ್ತಾರೆ.

ಪಾತಂಜಲಿಯ ಯೋಗಸೂತ್ರಗಳ ವಿಭೂತಿಪಾದವು ಈ ಯೋಗಾನುಷ್ಠಾನದಿಂದ ಪ್ರಾಪ್ತವಾಗುವ ಸಿದ್ಧಿಗಳನ್ನು ವರ್ಣಿಸುತ್ತದೆ. ಆದರೆ ಈ ಯೋಗದ ಮುಖ್ಯ ಗುರಿ ಕೈವಲ್ಯವಾಗಿದೆ. ಹಾಗೆಂದರೆ ವ್ಯಕ್ತಿಯು ಸದಾ ಕೈವಲ್ಯವೊಂದನ್ನೇ ಕುರಿತು ಪ್ರಯತ್ನಿಸಬೇಕೆಂದು ಅರ್ಥವಲ್ಲ. ಚಿತ್ತಶಕ್ತಿಯ ಬೆಳವಣಿಗೆ ಹಾಗೂ ಸಿದ್ಧಿಗಳನ್ನು ಮಾನವ ಹಟಕ್ಕಾಗಿ ಬಳಸಬಹುದು. ಹಾಗೆ ಬಳಸಿದವರೂ ಇದ್ದಾರೆ. ಚಿತ್ತದಲ್ಲಿಯ ಸುಪ್ತ ಶಕ್ತಿಸಾಮರ್ಥ್ಯಗಳನ್ನು ಬೆಳಸಿ ಅರಳಿಸುವದೇ ಇಲ್ಲಿ ಮುಖ್ಯಾಂಶವಾಗಿದೆ. ಯೋಗದ ಸೃಜನಶೀಲವೂ ಅಸಾಮಾನ್ಯವೂ ಅನನ್ಯಯವೂ ಆದ ಕಾಣಿಕೆಯೆಂದರೆ ಚಿತ್ತವನ್ನೇ ವಿಶಿಷ್ಟ ಶಕ್ತಿ ಎಂದು ಅಧ್ಯಯನ ಮಾಡಿದ್ದು, ಅದನ್ನು ಕ್ರಮಬದ್ಧವಾಗಿ ಅನುಷ್ಠಾನ ಮಾಡಿದ್ದು ಹಾಗೂ ಅನ್ವಯಿಸಿದ್ದು ಎಂದು ಅರಿಯಬೇಕು. ಇಂದು ಯೋಗವನ್ನು ಮಾನಸಿಕ ಆರೋಗ್ಯಕ್ಕಾಗಿ ಅನೇಕ ಚಿಕಿತ್ಸಾರೂಪಗಳಲ್ಲಿ ಬಳಸಲಾಗುತ್ತಿದೆ.

ನಮ್ಮ ತರುಣರು ತಮ್ಮ ಶಕ್ತಿಗಳ ಒಡೆಯರಾಗಿ ಪೂರ್ಣವ್ಯಕ್ತಿತ್ವ ಬೆಳೆಸಿಕೊಳ್ಳುವದಕ್ಕೆ ಪೋಷಕವಾಗುವಂತೆ ಯೋಗತತ್ತ್ವಗಳನ್ನು ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಅಳವಡಿಸಬೇಕು.

ನಮ್ಮ ಸರಕಾರಗಳು ಪ್ರಾರಂಭದಿಂದ ಯೋಗವೆಂದರೆ ಕೇವಲ ದೈಹಿಕ ಸಂಸ್ಕೃತಿ ಎಂದು ಭಾವಿಸಿದ್ದು, ದುರ್ದೈವದ ಸಂಗತಿಯಾಗಿದೆ. ಇಡೀ ಜಗತ್ತು ಇಂದು ಯೋಗವಿಜ್ಞಾನದ ವ್ಯಾಪಕ ಸ್ವರೂಪದ ಬಗೆಗೆ ಎಚ್ಚರಗೊಂಡಿದೆ. ಈಗಲಾದರೂ ನಮ್ಮ ಈ ಸಂಪತ್ತನ್ನು ಆಳವಾಗಿ ಅಭ್ಯಾಸ ಮಾಡಿ ಅದರ ಯೋಗ್ಯವಾದ ವಿವಿಧ ಮಟ್ಟದ ಅಂಶಗಳನ್ನು ನಮ್ಮ ಶಿಕ್ಷಣ ಪದ್ಧತಿಯಲ್ಲಿ ಸೇರಿಸಬೇಕು.

14ನೆಯ ಶತಮಾನದಲ್ಲಿಯೇ ಯೋಗದ ವಿಷಯವಾಗಿ ತಮ್ಮ ಜೀವನ್ಮುಕ್ತಿವಿವೇಕದಲ್ಲಿ ಅಸಾಮಾನ್ಯವಾದ ಪ್ರಶಂಸಾ ಮಾತುಗಳನ್ನಾಡಿದ್ದಾರೆ. ಸಿದ್ಧಿ ಎಂದರೆ ವ್ಯಕ್ತಿಯ ಚಿತ್ತದಲ್ಲಿಯೇ ಸಾಧ್ಯವಾಗಬೇಕಾದದ್ದು. ಆದ್ದರಿಂದ ಪರಮ ಗುರಿಯನ್ನು ಸಾಧಿಸಬೇಕಾದರೆ ತಮ್ಮ ಸಿದ್ಧಾಂತ ಏನೇ ಇರಲಿ ಅಷ್ಟಾಂಗ ಯೋಗವನ್ನು ಅನುಸರಿಸಲೇಬೇಕೆಂದು ಅವರು ಹೇಳಿದ್ದಾರೆ.

ಅದೇ ರೀತಿ, ವಿಜ್ಞಾನಿಯ ಯಾವುದೇ ಸತ್ಯವನ್ನು, ಯಾವುದೇ ಕ್ಷೇತ್ರದಲ್ಲಿ ಶೋಧಿಸುತ್ತಿರಲಿ ಅಥವಾ ತಂತ್ರಜ್ಞಾನಿಯ ವೈಜ್ಞಾನಿಕ ಸೂತ್ರಗಳಿಗನುಸಾರವಾಗಿ ಯಾವುದೇ ವ್ಯಾವಹಾರಿಕ ಬಳಕೆಗಾಗಿ ಯಂತ್ರ ನಿರ್ಮಾಣ ಮಾಡುತ್ತಿರಲಿ, ಯಾವುದೇ ರೂಪ ನಿರ್ಮಿಸುತ್ತಿರಲಿ, ಮೊದಲು ಇವರು ಈ ಕಾರ್ಯ ಸಾಧಿಸಲು ಅಗತ್ಯವಾದ ಚಿತ್ತ ಶಕ್ತಿಯನ್ನು ತರಬೇತುಗೊಳಿಸಬೇಕಾಗುತ್ತದೆ. ಯೋಗವು ವೈಜ್ಞಾನಿಕ ಹಾಗೂ ಕಲಾತ್ಮಕ ರೀತಿಯಲ್ಲಿ ಆ ಚಿತ್ತ ಶಕ್ತಿಯನ್ನು ವಿಕಾಸಗೊಳಿಸುತ್ತದೆ. ಶ್ರೀ ಕರಂಬೆಳಕರ ಅವರು ಪಾತಂಜಲಿ ಯೋಗ ಸೂತ್ರಗಳನ್ನು ಕುರಿತ ವ್ಯಾಖ್ಯಾನ ಬರೆದಿದ್ದಾರೆ. ಅದರಲ್ಲಿ ಅವರು ಕೆಕುಲೆ (Kekule) ಎಂಬ ಜರ್ಮನ್ ವಿಜ್ಞಾನಿಯ ಸ್ವಪ್ನದಲ್ಲಿ ಒಂದು ವೈಜ್ಞಾನಿಕ ಸಮೀಕರಣವನ್ನು ಕಂಡರಂತೆ. ಶ್ರೀ ಕರಂಬೆಳಕರರು ಉದಾಹರಿಸಿದ ಈ ವಾಸ್ತವಿಕ ಸಂಗತಿಯು ನನ್ನ ಕಣ್ಣಿಗೆ ಆಕಸ್ಮಾತ್ತಾಗಿ ಕಂಡಿತು.

ಈ ದೃಷ್ಟಿಯಿಂದಲೆ, ಎಲ್ಲ ವಿಜ್ಞಾನ ಹಾಗೂ ತಂತ್ರಜ್ಞಾನಗಳಿಗೂ ಯೋಗವೇ ಮೂಲಾಧಾರವಾದ ವಿಜ್ಞಾನ ಹಾಗೂ ಕಲೆಯಾಗಿದೆ ಎಂದು ನಾನು ಧೈರ್ಯವಾಗಿ ಹೇಳುತ್ತೇನೆ. ಆದರಿಷ್ಟೆ, ಯೋಗ ಪದ್ಧತಿಯನ್ನು ಪರಿಪೂರ್ಣ ಮಾನವ ವ್ಯಕ್ತಿತ್ವದ ಸಾಧನವನ್ನಾಗಿ ಅನ್ವಯಿಸಬೇಕು. ●



## ★ ಆಕ್ಸಿಜನ್ ಬಾರ್ ★

ಆಕ್ಸಿಜನ್ ಅಥವಾ ಆಮ್ಲಜನಕವನ್ನು ಪ್ರಾಣವಾಯು ಎನ್ನುತ್ತಾರೆ. ಕೆಲವು ತಿಂಗಳ ಹಿಂದೆ ಜಪಾನಿನ ಪಾರ್ಲಿಮೆಂಟ್‌ನಲ್ಲಿ ಆಕ್ಸಿಜನ್ ಕೌಂಟರ್ ಒಂದನ್ನು ತೆರೆಯಲಾಗಿತ್ತು. ಪಾರ್ಲಿಮೆಂಟ್ ಸದಸ್ಯರು ಅಲ್ಲಿ ಆಕ್ಸಿಜನ್ ಸೇವಿಸಬಹುದಾದ ವಿಶೇಷ ವ್ಯವಸ್ಥೆ ಮಾಡಲಾಗಿತ್ತು.

ಕಳೆದ ಅಕ್ಟೋಬರ್‌ನಲ್ಲಿ ಟೋಕಿಯೋದ ಡಿಪಾರ್ಟ್‌ಮೆಂಟ್ ಸ್ಟೋರ್ ಒಂದರಲ್ಲಿ 'ಆಕ್ಸಿಜನ್ ಬಾರ್' ತೆರೆಯಲಾಗಿದೆ. ಬಾರ್‌ನ ಹೆಸರು "$O_2$".

ಗ್ರಾಹಕರು ಈ ಬಾರ್‌ನಲ್ಲಿ ಎತ್ತರದ ಸ್ಟೂಲ್‌ನಲ್ಲಿ ಕುಳಿತು ವೈನ್ ಗ್ಲಾಸ್ ಮಾದರಿಯ ಬಾಯಿ ಹಿಡಿಕೆಯಿಂದ ಆಕ್ಸಿಜನ್ ಸೇವಿಸಬಹುದು. ಈ ವಾಯು ಮಿಂಟ್, ಕಾಫಿ, ನಿಂಬೆ ಮತ್ತು ಸ್ಥಳೀಯ ಜನಪ್ರಿಯ ಅಣಬೆಯೊಂದರ ಸ್ವಾದಗಳಲ್ಲಿ ಈಗ ದೊರೆಯುತ್ತಿದೆ.

ಮೂರು ನಿಮಿಷ ಆಕ್ಸಿಜನ್ ಸೇವಿಸಲು ಎಂಬತ್ತು ಸೆಂಟ್‌ಗಳ ದರ ನಿಗದಿಗೊಳಿಸಲಾಗಿದೆ. ಎಂಟು ಡಾಲರ್ ಮೌಲ್ಯದ ಜನಪ್ರಿಯ ಮದ್ಯ 'ಮಾರ್ಟಿನಿ' ಸೇವಿಸುವುದಕ್ಕಿಂತ ಹೆಚ್ಚಿನ ಉಲ್ಲಾಸ, ಆರೋಗ್ಯ ಇದರಿಂದ ದೊರೆಯುವುದಂತೆ. *

ಮರಾಠಿ ಕಥೆ

# ಕಥಾ-ಕಥನ



ಮೂಲ : ಗಿರಿಜಾ ಕೀರ್
ಅನುವಾದ: ಶ್ಯಾಮಸುಂದರ ದೇಶಪಾಂಡೆ

**ಕ**ಥಾಕಥನ ಮುಗಿಸಿದೆ. ಶ್ರೋತೃಗಳು ಗುಂಪು ಗುಂಪಾಗಿ ನನ್ನ ಸುತ್ತ ನೆರೆದರು. ನಗು ಮೊಗಗಳು. ಮೊದಲೆರಡು ಕತೆಗಳು ಗಂಭೀರ ವಸ್ತುವನ್ನು ಹೊಂದಿದ್ದರಿಂದ ವಾತಾವರಣವೂ ಗಂಭೀರವಾಗಿತ್ತು. ಅಂತೆಯೇ ಮನಸ್ಸಿಗೆ ಮುದ ನೀಡುವ ವಸ್ತುವುಳ್ಳ ಮೂರನೆಯ ಕಥೆಯನ್ನು ನಾನು ಆರಿಸಿದ್ದು. ಮೊದಲೆರಡು ಕಥೆ ಕೇಳಿ ಪುರುಷರ ಮುಖಗಳು ಗಂಭೀರವಾಗಿದ್ದರೆ ಸ್ತ್ರೀಯ ಕಣ್ಣುಗಳು ಅಶ್ರುಗಳಿಂದ ತುಂಬಿದ್ದವು. ಮೂರನೆಯ ಕಥೆಯಂತೂ ಅಪೇಕ್ಷಿತ ಪ್ರತಿಕ್ರಿಯೆಯನ್ನೇ ತಂದಿತು. ಶ್ರೋತೃಗಳೆಲ್ಲ ಒಟ್ಟಿನಲ್ಲಿ ಖುಶಿಗೊಂಡರು. ತರುಣರಂತೂ ಬೆಂಚುಗಳನ್ನು ಕುಟ್ಟಿ ತಮ್ಮ ಸಂತಸ ವ್ಯಕ್ತಪಡಿಸಿದರು. 'ನಗಲು ಇನ್ನೇನಿದೆ?' ಎಂದು ಸಂಶಯ ವ್ಯಕ್ತಪಡಿಸುತ್ತಿದ್ದವರು ಸಹ ನಗುಮೊಗ ತೋರಿದರು. ಅದರಿಂದ ಅನೇಕರಿಗೆ ನನ್ನ ಜೊತೆ ಮಾತನಾಡುವುದಿತ್ತು.

"ಮೊದಲು ಚಹಾಪಾನ ಮುಗಿಸೋಣ. ನಂತರ ಶ್ರೋತೃಗಳೊಂದಿಗೆ ಮಾತುಕತೆಯಾಗಲಿ" ಸಂಯೋಜಕರು ಸೂಚಿಸಿದರು. ಸರಿ, ಚಹಾಪಾನಕ್ಕೆ ಹೋದೆ. ನಿಮಂತ್ರಿತರು ತಮ್ಮ ಮೆಚ್ಚುಗೆ ಸೂಚಿಸಿದರು. ಕೆಲವು ಒಳ್ಳೆಯ ಪ್ರಶ್ನೆಗಳೂ ಬಂದವು. ಚಹಾಪಾನ ಮುಗಿಸಿ ಕೋಣೆಯಿಂದ ಹೊರಬಂದೆ. ಕಾಲೇಜ್ ಗುಂಪಿನಲ್ಲಿನವರಾರೊ. "ಉಶ್ ಉಶ್" ಎಂದರು. ನಾನು ನಿಂತು ಓಂತಿರುಗಿ ನೋಡಿದೆ. ಅಪೇಕ್ಷಿತ ಪ್ರತಿಕ್ರಿಯೆಗೆ ವಿದ್ಯಾರ್ಥಿಗಳು ಖುಶಿಯಿಂದ ಜೋರಾಗಿ ಚಪ್ಪಾಳೆ ತಟ್ಟಿದರು.

ನನ್ನ ಕತೆಯಲ್ಲಿಯ ತರುಣ ನಾಯಕ ನಾಯಕಿಗೆ "ಉಶ್ ಉಶ್" ಎಂದು ಕರೆಯುವ ಪ್ರಸಂಗವಿತ್ತು. ಕತೆ ಹಾಸ್ಯಪ್ರಜ್ಞೆಯಿಂದ ಕೂಡಿದ್ದು ಕಿಂಚಿತ್ ತುಂಟತನವೂ ಅದರಲ್ಲಿದ್ದುದರಿಂದ ವಿದ್ಯಾರ್ಥಿಗಳು ಅದರ ಪ್ರಯೋಗವನ್ನು ನನ್ನ ಮೇಲೇ ಮಾಡಿದ್ದರು. ಸಂಯೋಜಕರು ನಾನೆಲ್ಲಿ ಬೇಸರಗೊಳ್ಳುವೆನೋ ಎಂದು ಚಿಂತಿತರಾದರು. ನಾನು ಹೇಗೂ ಇನ್ನೂ ಜಾಗ ಬಿಟ್ಟಿರಲಿಲ್ಲ "ಉಶ್ ಉಶ್" ಶಬ್ದ ಬಂದೆಡೆ ದೃಷ್ಟಿ ಹರಿಸಿದೆ. ಚಿಗುರು ಮೀಸೆಯ ಯುವಕರ ಗುಂಪು ಕಣ್ಣಿಗೆ ಬಿತ್ತು. ಬುದ್ಧಿ ಶಕ್ತಿಯ ತೀವ್ರತೆಯನ್ನು ಗಮನಿಸಿ ತಟ್ಟನೆ ಮುಗಳ್ನಕ್ಕು ನುಡಿದೆ, "ಸ್ಸಾರಿ. ಯು ಆರ್ ಟೂ ಲೇಟ್" ಮತ್ತೊಮ್ಮೆ 'ಹೋ' ಎಂದು ನಗು ಚಿಮ್ಮಿತು.

"ಬಹುತ್ ಖೂಬ್. ಮಾಶಲ್ಲಾ ಬಾಬಾ" ವಿದ್ಯಾರ್ಥಿಗಳು ಮೆಚ್ಚುಗೆ ಸೂಚಿಸುತ್ತಿದಂತೆ ಬಹುಮಾನ ವಿತರಣಾ ಕಾರ್ಯಕ್ರಮಕ್ಕಾಗಿ ವ್ಯಾಸಪೀಠವೇರಿದೆ. ಚಪ್ಪಾಳೆಗಳ ಅಬ್ಬರದ ಸುರಿಮಳೆಯಾಯಿತು.

ಇದೇ ವೇಗದಲ್ಲಿ ಕಾರ್ಯಕ್ರಮ ಮುಗಿದೂ ಹೋಯಿತು. ಶ್ರೋತೃವೃಂದ ಕರಗತೊಡಗಿತು. ಸಂಯೋಜಕರು ಟ್ಯಾಕ್ಸಿಗಾಗಿ ಕರೆ ಕಳುಹಿಸಿದರು. ಅಷ್ಟರಲ್ಲಿ ಪಕ್ಕದಲ್ಲಿ ಸದೃಢಕಾಯದವ. "ರೀ ಟ್ಯಾಕ್ಸಿ ಯಾಕೆ? ನಮ್ಮ ಕಾರು ಇದೆಯಲ್ಲ. ಅದರಲ್ಲಿ ಬಿಟ್ಟು ಬರುವಾ" ಎಂದು ಖಾಸಾ ವಿದರ್ಭ ಸ್ಟೈಲಿನಲ್ಲಿ ಹೇಳಿ "ಮೇಡಂ ನಿಮ್ಮ ಕೊನೆಯ ಕತೆ ನಮಗೆ ಬಹಳ ಹಿಡಿಸಿತು. ಯಾವುದಾದರೂ ಮಾಸಿಕದಲ್ಲಿ ಪ್ರಕಟವಾಗಿದೆಯೆ?" ಎನ್ನುತ್ತ ಮುಂದೆ ಬಂದ.

"ಇಲ್ಲ, ಇನ್ನೂವರೆಗೆ ಪ್ರಕಟಗೊಂಡಿಲ್ಲ".

"ಅರೆರೆ, ಹಾಗಾದರೆ ಇದು ನಿಮಗೆ ಹೊಳೆದದ್ದಾದರೂ ಹೇಗೆ? ಪ್ರೇಕ್ಷಕರನ್ನು ಕಂಡು ಸ್ಫೂರ್ತಿ ಬರಲಿಲ್ಲವಷ್ಟೆ?" ಎಂದು ಮತ್ತೆ ಪ್ರಶ್ನಿಸಿದ.

ಸಂಚಾಲಕರ ಜೊತೆ ಹಾಲಿನ ಬಾಗಿಲವರೆಗೆ ಬಂದಿದ್ದೆ. ಒಂದು ಕ್ಷಣ ಅಲ್ಲೇ ನಿಂತೆ. ಪ್ರಶ್ನಿಸುವಾತನನ್ನು ಆಶ್ಚರ್ಯದಿಂದ ವೀಕ್ಷಿಸಿದೆ. ಆತ ಶ್ರೀಮಂತಿಕೆ ತೋರುವ ಸಫಾರಿ ಧರಿಸಿದ್ದ. ಐವತ್ತರ ಪ್ರೌಢ ಕಳೆ ಮುಖದ ಮೇಲೆ ಅಧಿಕಾರದ ಒರಟುತನ ಎದ್ದು ಕಾಣುತ್ತಿತ್ತು.

"ಕತೆಗೆ ಸ್ಫೂರ್ತಿ ಕೊಡುವಂಥವರಾರೂ ಪ್ರೇಕ್ಷಕರಲ್ಲಿರಲಿಲ್ಲ. ಇದು ಬಹಳ ಹಳೆಯ ಕಥೆ ನನ್ನ ತಾರುಣ್ಯದಲ್ಲಿನದು" ನಾನು ದೃಷ್ಟಿಯನ್ನು ಆಚೆ ತೆಗೆಯುತ್ತ ನುಡಿದೆ.

ಅಷ್ಟರಲ್ಲಿ ಓರಬದಿಯಿಂದ ಇಬ್ಬರು

ಮುಂದೆ ಬಂದರು. ಅವರೂ ದೊಡ್ಡ ಆಸಾಮಿಗಳಂತೇ ಕಾಣುತ್ತಿದ್ದರು. ಅವರಲ್ಲೊಬ್ಬ ನುಡಿದ. "ಭಾಯಿ ಸಾಬ್, ನಿಮಗೇಕೆ ಸುಮ್ಮನೆ ತೊಂದರೆ? ನಮ್ಮದು ಹೇಗೂ ದೊಡ್ಡ ಕಾರಿದೆ. ಜೊತೆಗೆ ಮೇಡಂ ಅವರ ಪರಿಚಯವೂ ಆದೀತು. ಮೇಡಂ, ನೀವು ನಿಜಕ್ಕೂ 'ಕಮಾಲ್' ಮಾಡಿದಿರಿ" ಎಂದರು. ಈಗ ಅವರ ಬೆನ್ನು ಸಫಾರಿಯುವನ ಕಡೆಗಿತ್ತು. ಸಫಾರಿಯುವ ಅವರಿಗೆ ನಮಸ್ಕರಿಸಿ ಹೊರಟು ಹೋದ. ಓಹೋ ಇವರಿಬ್ಬರೂ ಅವನ ಮೇಲಿನವರಿರ ಬೇಕು ಎಂದು ನಾನು ಮನದಲ್ಲೇ ಲೆಕ್ಕ ಹಾಕಿದೆ.

ಇಲ್ಲಿಯವರೆಗೆ ನಾವು ರಸ್ತೆಗೆ ಬಂದು ತಲುಪಿದೆವು. ಎರಡು ಬದಿಗೂ ಎರಡು ಹೊಸ ಅಂಬಾಸಿಡರ್ ಕಾರುಗಳು ನಿಂತಿದ್ದವು. ಯಾವ ಕಾರಿನಲ್ಲಿ ಕುಳಿತುಕೊಳ್ಳಬೇಕೆಂಬುದರ ಬಗ್ಗೆ ನನಗೆ ಸಂಧಿಗ್ಧತೆಯುಂಟಾಯಿತು. ಅಲ್ಲಿಯವರೆಗೆ ಅವರಿಬ್ಬರೂ ಒಬ್ಬರನ್ನೊಬ್ಬರು ನೋಡಿದರು. ಅಷ್ಟರಲ್ಲಿ ಅವರಲ್ಲೊಬ್ಬಾತ ಜೇಬಿನಿಂದ ನಾಣ್ಯವೊಂದನ್ನು ತೆಗೆದು 'ಟಾಸ್' ಎಂದ.

"ಆಫ್‌ಕೋರ್ಸ್, ಬೇರೆ ಉಪಾಯವಿಲ್ಲ". ಈಗ ಅವರಿಬ್ಬರೂ ನನ್ನ ಕತೆಯಲ್ಲಿನ ನಾಯಕನ ವಯಸ್ಸಿಗೆ ತಮ್ಮನ್ನು ಕಲ್ಪಿಸಿಕೊಂಡಿದ್ದರು. ಆದರೆ ನನಗೆ ದಿನದ ಇಪ್ಪತ್ನಾಲ್ಕೂ ಗಂಟೆ ಕತೆಯ ಲೋಕದಲ್ಲೇ ಇರುವುದು ಸಾಧ್ಯವಿರಲಿಲ್ಲ. ನನಗೆ ವಾಸ್ತವದ ಅರಿವಿತ್ತು. ಆಗ ನಾನೇ ನುಡಿದೆ, "ನಾವೆಲ್ಲ ಒಟ್ಟಿಗೆ ಒಂದೇ ಕಾರಿನಲ್ಲಿ ಹೋಗೋಣ. ನನ್ನನ್ನು ಪ್ರವಾಸಿ ಬಂಗಲೆಗೆ ಬಿಡಿ. ಮತ್ತೆ..."

ನನ್ನ ಮಾತುಗಳ ಕಡೆ ಅವರ ಗಮನವೇ ಇರಲಿಲ್ಲ. ತಲೆಗೂದಲು ಬೆಳ್ಳಗಾಗುತ್ತಿರುವುದನ್ನೂ ಅವರು ಮರೆತಿದ್ದಂತೆ ತೋರಿತು. ಕೊನೆಗೆ ಏನಾಯಿತೊ ಗೊತ್ತಾಗಲಿಲ್ಲ. ಅವರಲ್ಲೊಬ್ಬಾತ ಹೊರಟು ಹೋದ. ನಾನು, ಸಂಯೋಜಕರು ಹಾಗೂ 'ಸಾಹೇಬರು' ಒಂದು ಕಾರಿನಲ್ಲಿ ಕುಳಿತೆವು.

ಕಾರು ಹೊರಟಿತು. ಸಾಹೇಬರು ಖುಶಿಯಲ್ಲಿದ್ದರು. ನೇವಿ ಬ್ಲೂ ಬಣ್ಣದ ಇಸ್ತ್ರೀಮಾಡಿದ ಫುಲ್ ಸೂಟ್ ಧರಿಸಿದ್ದರು. ಗೊಗ್ಗರು ಗಂಡು ಧ್ವನಿ, ಕೈಯಲ್ಲಿ ಸಿಗರೇಟು ಹಿಡಿದು ಸೌಜನ್ಯದ ದನಿಯಲ್ಲಿ

"ವಿತ್ ಯುವರ್ ಕೈಂಡ್ ಪರ್‌ಮಿಶನ್" ಎಂದರು.

"ನನ್ನದೇನೂ ಅಭ್ಯಂತರವಿಲ್ಲ" ಎಂದೆ. ನನ್ನ ಧ್ವನಿ ಏಕೊ ನಿರ್ಲಿಪ್ತವಾಗಿತ್ತು.

"ಥ್ಯಾಂಕ್ಯೂ ಮೇಡಂ. ಕಾರ್ಯಕ್ರಮ ಬಹಳ ಪ್ರಭಾವಿಯಾಗಿತ್ತು. ನಾನಂತೂ ಒಮ್ಮೆಲೇ ಯಂಗ್ ಆದಂತೆ ಅನಿಸಿತು".

"ಯು ಆರ್ ಯಂಗ್" ಎಂದು ನಾನು ನಕ್ಕೆ.

"ಓ ಥ್ಯಾಂಕ್ಯೂ ಥ್ಯಾಂಕ್ಯೂ" ನಿಸ್ಸಂಕೋಚವಾಗಿ ಸಾಹೇಬರು ನಕ್ಕರು. "ನೀವು ಪ್ರಸಂಗಗಳ ವರ್ಣನೆಯನ್ನು ತುಂಬ ಚೆನ್ನಾಗಿ ಮಾಡುತ್ತೀರಾ. ಆ ಯುವಕ, ಆ ಚೆಂಗುಲಾಬಿ ಮುಡುಗಿ, ಎಲ್ಲವೂ ಕಣ್ಮುಂದೆ ನಿಂತಂತೆನಿಸಿತು. ನಿಮಗೆ ಇದೆಲ್ಲ ಹೇಗೆ ಹೊಳೆಯುತ್ತೆ? ಐ ವಾಜ್ ರಿಯಲಿ ಮೂವ್ಡ್" ಸಾಹೇಬರು ಸೀಟಿಗೆ ಬೆನ್ನು ತಾಗಿಸಿ ಸಣ್ಣದಾಗಿ ಸಿಳ್ಳು ಹಾಕತೊಡಗಿದರು. ನಾನು ಮಾತ್ರ ದಂಗು ಬಡಿದು ಹೋದೆ. ಅಂದರೆ... ಆಗ ಭೆಟ್ಟಿಯಾದ ಅವರಿಬ್ಬರೂ ಹಾಗೂ ಈತ ಇನ್ನೂ ಕಥೆಯ ಸ್ವಪ್ನಲೋಕದಲ್ಲೇ ವಿಹರಿಸುತ್ತಿದ್ದಾರೆ. ಇವರುಗಳು ತಮ್ಮನ್ನು ನಾಯಕನ ಸ್ಥಾನದಲ್ಲಿ ಕಲ್ಪಿಸಿಕೊಳ್ಳುತ್ತಿಲ್ಲವಷ್ಟೆ? ಕಠಿಣವಪ್ಪಾ.

ಕತೆಯಲ್ಲಿ ನಾನು ವರ್ಣಿಸಿದ ಪ್ರಸಂಗಗಳು ನನಗೆ ಮತ್ತೆ ನೆನಪಾಗತೊಡಗಿದವು.

ಅವಳು ಕಣ್ಣಂಚಿನಲ್ಲಿ ಅವನನ್ನು ನೋಡಿದಳು. ಆತ ನೋಡಲು ಚೆನ್ನಾಗಿದ್ದ. ಭಾವುಕ ಕಂಗಳು, ವಿಶಾಲವಾದ ಹಣೆ ಗಾಳಿಗೆ ತೂಗಾಡುವ ಹಣೆಯ ಮೇಲಣ ಕೇಶಗಳು, ತುಟಿಯಂಚಿನಲ್ಲಿ ಸೂಸುವ ಸುಂದರ ನಗೆ. ಇವೆಲ್ಲ ಆತನ ಪೌರುಷವನ್ನು ಸೂಚಿಸುತ್ತಿದ್ದವು.

ಆ ನಾಯಕನ ವರ್ಣನೆಯನ್ನು ಕಾಲೇಜಿನ ವಿದ್ಯಾರ್ಥಿನಿಯರು ಅತ್ಯಂತ ಆಸಕ್ತಿಯಿಂದ ಕೇಳುತ್ತಾರೆ. ಮಾನಸಿಕವಾಗಿ ಆ ಜಗತ್ತಿನಲ್ಲೇ ಸಂಚರಿಸುತ್ತಾರೆ. ಅವರ ಕಣ್ಣುಗಳನ್ನು ವೀಕ್ಷಿಸುತ್ತ ನಾನು ಕತೆಯನ್ನು ಜೀವಂತಗೊಳಿಸುತ್ತೇನೆ. ಆದರೆ ಇಂದು ಅದರ ವಿಪರೀತ ಪರಿಣಾಮವಾಗಿತ್ತು. ಐವತ್ತರ ಗಡಿದಾಟಿದ ಈ ಮೂವರು ಇಪ್ಪತ್ತೈದರ ತಾರುಣ್ಯವನ್ನು ಪೊಕ್ಕಿ

ದ್ದರು. ಅಷ್ಟೇ ಅಲ್ಲ, ಅಲ್ಲಿಂದ ಹೊರಬರಲೂ ಸಿದ್ಧರಿರಲಿಲ್ಲ. ಮೊಮ್ಮಕ್ಕಳೊಂದಿಗೆ ಆಡುವ ಈ ವಯಸ್ಸಿನಲ್ಲಿರುವ ಅವರಿಗೆ ಈ ಕತೆಯನ್ನು ನಾನು ತಮ್ಮನ್ನು ಕಂಡೇ ಬರೆದೆ ಎಂದು ತಿಳಿದು ಕೊಂಡಿದ್ದರು.

ಕತೆಯ ಬಗ್ಗೆ ಪ್ರಶಂಸೆ ವ್ಯಕ್ತವಾದಾಗ ಲೇಖಕನಿಗೆ ಒಂದಿಷ್ಟು ಹೆಮ್ಮೆ ಮೂಡುತ್ತದೆ. ಕತೆಗೆ ಸಿಕ್ಕುವ ಸ್ವಯಂಪ್ರೇರಿತ ಪ್ರತಿಕ್ರಿಯೆಯಿಂದ ನನ್ನ ಕತೆ ಮತ್ತಷ್ಟು ಜೀವಂತವಾಗುತ್ತದೆ. ಆಕಾರ ಪಡೆಯುತ್ತದೆ. ಕಥಾ ಕಥನದ ನಂತರ ನಾನು ನಾನಾಗಿದ್ದೆ—ಒಬ್ಬ ಲೇಖಕಿ. ನನ್ನಲ್ಲಿಯ ಪ್ರೌಢಿಮೆಯನ್ನು ದೂರ ಸರಿಸುವುದು ಸಾಧ್ಯವಿರಲಿಲ್ಲ. ಹಾಗೆಂದು ಸ್ವಚ್ಛಂದ ಪ್ರವೃತ್ತಿಯವಳೂ ನಾನಲ್ಲ. ಹೀಗಾಗಿ ನಾನು ಅಸ್ವಸ್ಥಳಾಗಿದ್ದೆ.

ನಾನು ಇಂದು ಈ ಕತೆ ಹೇಳಬಾರದಾಗಿತ್ತೆ? ಹೇಳಿದರೂ ಇಷ್ಟೊಂದು ಸಮರಸವಾಗಬಾರದಿತ್ತೆ? ಲೇಖಕಿಯಾಗಿ ನನಗೇನೂ ಸ್ವಾತಂತ್ರ್ಯವಿಲ್ಲವೇ? ಅಥವಾ ಲೇಖಕಿಗಿಂತ ನನ್ನಲ್ಲಿಯ ಸ್ತ್ರೀತ್ವ ಮುಖ್ಯವಾದುದೆ? ಅದೂ ಈ ವಯಸ್ಸಿನಲ್ಲಿ?

"ತಾವೇನಾದರೂ ಅಂದಿರಾ?" ನಾನು ಒಮ್ಮೆಲೇ ಪ್ರಶ್ನಿಸಿದೆ. "ಹೌದು, ಆದರೆ ನೀವು ನಿಮ್ಮ ಮೂಡ್‌ನಲ್ಲೇ ಇದ್ದಿರಿ. ಅದು ಸಹಜವೂ ಹೌದು. ಕಥಾಕಥನ ಈಜ್ ಯುವರ್ ಅಚೀವ್‌ಮೆಂಟ್". ನನಗೇನು ಉತ್ತರಿಸಬೇಕೆಂದೇ ಹೊಳೆಯಲಿಲ್ಲ. ಅಷ್ಟರಲ್ಲಿ ಕಾರು ಯಾವುದೋ ಬಿಲ್ಡಿಂಗ್ ಎದುರು ನಿಂತಿತು.

"ಅಪ್ಪಾ ಸಾಹೇಬ, ನೀವು ಇಲ್ಲೇ ಇರುತ್ತೀರಲ್ಲವೆ?" ಸಾಹೇಬರು ಪ್ರಶ್ನಿಸಿದರು.

"ಹೌದು ಸರ್. ಇಲ್ಲೇ ಇರುತ್ತೇನೆ. ನಾಳೆ ಬೆಳಿಗ್ಗೆ ಅವರನ್ನು ಸ್ಟೇಷನ್ನಿಗೆ ಬಿಡುವೆ."

"ನಮಸ್ಕಾರ ಮೇಡಂ" ಎಂದು ನುಡಿದು ಸಂಯೋಜಕರು ಕಾರಿನಿಂದ ಇಳಿದು ಹೋದರು. ನನಗೆ ಅವರ ಮೇಲೆ ಬಹಳ ಕೋಪ ಬಂತು. ನನ್ನನ್ನು ಪ್ರವಾಸಿ ಬಂಗಲೆಯವರೆಗೆ ತಲುಪಿಸುವುದು ಅವರ ಕರ್ತವ್ಯವಾಗಿರಲಿಲ್ಲವೆ? ಏನನ್ನೂ ಯೋಚಿಸದೆ ನನ್ನೊಬ್ಬಳನ್ನೇ ಈ ಸಾಹೇಬರೊಂದಿಗೆ ಬಿಟ್ಟು ಹೊರಟು ಹೋದರಲ್ಲ?

ಪ್ರವಾಸಿ ಬಂಗಲೆ ಬಂತು. ಕಾರು ನನ್ನ ರೂಮ್ ಎದುರು ನಿಂತಿತು. ಸಾಹೇಬರು ಕಾರಿನ ಬಾಗಿಲನ್ನು ಬಹಳ ಹೆಮ್ಮೆಯಿಂದ ತೆರೆದರು. ಸಾಹೇಬರ ಕಾರನ್ನು ನೋಡುತ್ತಿದ್ದಂತೆ ಬಾಗಿಲಲ್ಲಿದ್ದ ನೌಕರರು ಸಕ್ರಿಯರಾದರು. ದರವಾನ ಬಂದು ಸೆಲ್ಯೂಟ್ ಮಾಡಿದ. ಸಾಹೇಬರ ವರ್ಚಸ್ಸಿನ ಅಂದಾಜು ನನಗೆ ಬಂತು.

ನಾನು ಕೋಣೆಯ ಬಾಗಿಲು ತೆರೆದು ದೀಪ ಹಚ್ಚಿದೆ. ಸಾಹೇಬರು ಒಳಗೆ ಬಂದು ಅತ್ಯಂತ ವಿರಾಮ ಸ್ಥಿತಿಯಲ್ಲಿ ಕುರ್ಚಿಯಲ್ಲಿ ಕುಳಿತರು, ಮನೆಯಲ್ಲಿ ಕುಳಿತುಕೊಳ್ಳುವಂತೆ. ಸೇವಕ ಬಾಗಿಲಲ್ಲಿ ನಿಂತಿದ್ದ. ಆತನ ಕಡೆ ನೋಡದೆ.



"ದರವಾನ ಸಾಬ್, ಹಮೆ ಜರಾ ಪಾನಿ ಪಿಲಾನಾ" ಎಂದರು.

"ಜೀ ಸಾಬ್" ಎಂದು ದರವಾನ ಹೊರಟು ಹೋದ.

"ತಮ್ಮ ವ್ಯವಸ್ಥೆ ಎಲ್ಲಾ ಸರಿಯಾಗಿದೆ ತಾನೆ?" ಕೋಣೆಯಲ್ಲಿ ಕಣ್ಣಾಡಿಸುತ್ತಾ ಸಾಹೇಬರು ಪ್ರಶ್ನಿಸಿದರು.

"ಹೌದು, ಇಲ್ಲಿಯ ಜನ ಬಹಳ ಒಳ್ಳೆಯವರು". ನಾವು ಮಾತನಾಡುತ್ತಿರುವಾಗಲೇ ನೀರಿನ ಗ್ಲಾಸ್‌ಗಳು ಬಂದವು. ಅವುಗಳ ಹಿಂದೆ ಬೊಅಿರಾ ಹಾಜರಾದ.

"ತಾವು ಏನು ತೆಗೆದುಕೊಳ್ಳಲು ಇಷ್ಟಪಡುತ್ತೀರಾ?" ಸಾಹೇಬರು ನನ್ನ ಕೋಣೆಯಲ್ಲಿ ನನಗೇ ಆತಿಥ್ಯ ಮಾಡತೊಡಗಿದರು.

"ಕಾಫಿ ಪರವಾಗಿಲ್ಲ."

"ಕಾಫಿ? ಆಲ್‌ರೈಟ್. ಬೊಅಿರಾ ದೋ ಕಾಫಿ ಲಾನಾ. ಹಾಂ ಬಾಗಿಲು ಹಾಗೇ ಇರಲಿ" ಬೊಅಿರಾ ಹಾಗೂ ಗುರಬಾ ದೂರ ಹೋದುದು ನನ್ನ ಗಮನಕ್ಕೆ ಬಂತು.

"ನಿಮ್ಮ ಲೈಫ್ ತುಂಬ ಸುಂದರವಾಗಿರುತ್ತದೆ ಅಲ್ಲವೇ? ತರತರದ ಜನ ಸಿಕ್ಕುತ್ತಾರೆ. ಜಗತ್ತು ನೋಡಲು ಸಿಕ್ಕುತ್ತದೆ: ಮತ್ತೆ ಲೇಖಕರುಗಳಿಗೆ ಸಿಗುವ ರೆಸ್ಪೆಕ್ಟ್ ಬೇರಾರಿಗೂ ಸಿಕ್ಕುವುದಿಲ್ಲ. ನಮ್ಮ ಅಧಿಕಾರ ಇರುವಲ್ಲಿ ನಮಗೆ ಗೌರವ ಸಿಕ್ಕುತ್ತದೆ. ಇಲ್ಲದಿದ್ದರೆ ಯಾರು ಕೇಳುತ್ತಾರೆ? ನಿಮ್ಮನ್ನು ಮಾತ್ರ ಜಗತ್ತೇ ಗೌರವಿಸುತ್ತದೆ."

"ನಮಗೆ ಅಷ್ಟೆ ಆನಂದ ಸಿಕ್ಕುತ್ತದೆ ಜಗತ್ತಿನಲ್ಲಿ" ನಾನು ನುಡಿದೆ.

"ನೀವು ಸಾಮಾನ್ಯವಾಗಿ ಪ್ರವಾಸದಲ್ಲೇ ಇರುತ್ತೀರಾ?"

"ಹೌದು, ಆಮಂತ್ರಣ ಬಂದಾಗ ಹೋಗಲೇ ಬೇಕಾಗುತ್ತದೆ."

"ನಿಮ್ಮ ಫ್ಯಾಮಿಲಿ ಲೈಫ್ ತುಂಬ ಸಫರ್ ಆಗುತ್ತಿರಬೇಕಲ್ಲವೇ? ಮತ್ತೆ ನಿಮ್ಮ ಯಜಮಾನರು ಇದನ್ನು ಅಲೌ ಮಾಡುತ್ತಾರೆಯೇ?"

"ಅಲೌ ಮಾಡುವ ಪ್ರಶ್ನೆ ಎಲ್ಲಿದೆ? ಇದು ನನ್ನ ಕರಿಯರ್".

"ವೆರಿ ಬೋಲ್ಡ್ ಸ್ಟೇಟ್‌ಮೆಂಟ್. ನನಗೆ ಬಹಳ ಹಿಡಿಸಿತು. ಆದರೆ ನಮ್ಮ ದೇಶದ ಸ್ತ್ರೀಯರು ಇಷ್ಟು ಬೋಲ್ಡ್ ಇರೋದಿಲ್ಲ. ಆದರಲ್ಲೂ ನಮ್ಮ ಪ್ರಾಂತ್ಯದವರು. ನಿಮಗೆ ಅನೇಕ ಸಿಹಿಕಹಿ ಅನುಭವಗಳು ಆಗಿರಬೇಕಲ್ಲ?"

"ಸಾಮಾನ್ಯವಾಗಿ ಒಳ್ಳೆಯ ಅನುಭವಗಳೇ ಬರುವುದು ಹೆಚ್ಚು. ನನಗೆ ಒಳ್ಳೆಯ ಕಲ್ಚರ್ಡ್ ಜನಗಳೇ ಸಿಕ್ಕುತ್ತಾರೆ" ನಾನು ಸಂಭಾಷಿಸುತ್ತಿದ್ದರೂ ಅಂತರ್ಯದಲ್ಲಿ ಯಾಕೋ ಏನೋ ಭಯ ಆವರಿಸಿತ್ತು.

"ಒಳ್ಳೆಯವರೆಂದರೆ? ನೀವು ನಿಶ್ಚಿತವಾಗಿ ಯಾರನ್ನು ಒಳ್ಳೆಯವರೆನ್ನುತ್ತೀರಾ? ನಾನೂ ಒಳ್ಳೆಯವನಿದ್ದೇನೆ. ಉನ್ನತ ಹುದ್ದೆಯಲ್ಲಿದ್ದೇನೆ. ಐ ಲವ್ ಮಾಯ್ ವೈಫ್ ಎಂಡ್ ಚಿಲ್ಡ್ರನ್. ಸ್ಟಿಲ್ ಒಂದೊಂದು ದಿನ ಬೇರೆ ಘಟನೆಗಳು ನಡೆಯುತ್ತವೆ. ಐ ಫೀಲ್ ಫಾರ್ ಯು."

ನನ್ನ ಭಯ ಒಮ್ಮೆಂದೊಮ್ಮೆಲೆ ದೂರವಾಯ್ತು. "ಸಾಹೇಬರೆ, ನೀವು ಕಥಾಕಥನವನ್ನು ಇಂದು ಪ್ರಥಮ ಬಾರಿಗೆ ಕೇಳಿರಬಹುದು. ಇದು ನನಗೆ ಬಂದಿರುವ ಸಾಮಾನ್ಯ ಅನುಭವ. ಕಥಾಕಥನ ಮುಗಿದರೂ ಕೆಲವರು 'ಆ' ಕಥೆಯ ಜಗತ್ತಿನಲ್ಲೇ ಇರುತ್ತಾರೆ. ಅವರಿಗೆ ಕತೆಯ ಬಗ್ಗೆ, ನನ್ನ ಬಗ್ಗೆ ಫೀಲ್ ಆಗುತ್ತಿರುತ್ತದೆ. ಅದು ಕಥೆಗಾರಿಕೆಯ ಶೈಲಿಯ ಪ್ರಭಾವ. ಕಾರ್ಯಕ್ರಮದ ಮುಕ್ತಾಯದೊಂದಿಗೆ ನಾನು ಮಾತ್ರ ಅಲಿಪ್ತಳಾಗುತ್ತೇನೆ."

"ಅಂದರೆ ಉಳಿದವರೂ ಆಗುತ್ತಾರೆಂದೇನೂ ಅಲ್ಲ."

"ಕರೆಕ್ಟ್. ಹೀಗೆ ಪ್ರವಾಹದ ಜೊತೆ ತೇಲಿ ಹೋಗುವ ಜನ ಆ ಸಮಯದಲ್ಲಿ ಮಾತ್ರ ತೇಲಿ ಹೋಗುತ್ತಾರೆ. ರೂಟಿನ್ನಿಗಿಂತ ಬೇರೇನೋ ಕಂಡ ತಕ್ಷಣ ಅವರಿಗೆ ಆಕರ್ಷಣೆ ಉಂಟಾಗುತ್ತದೆ. ಪ್ರತಿಭೆಯ ಹಾಗೂ ಕಲ್ಪನೆಯ ಜಗತ್ತು ವಾಸ್ತವಕ್ಕಿಂತ ಬೇರೆಯೆ ಇರುತ್ತದೆ. ಎಂಬುದು ಅವರಿಗೆ ತಿಳಿಯದಿದ್ದರೂ ನನಗೆ ತಿಳಿದಿರುತ್ತದೆ. ನನ್ನ ಜೀವನದ ದಾರಿ ನನಗೆ ಗೊತ್ತು. ನನಗೆ ನನ್ನ ಮೇಲೆ ನಂಬಿಕೆ ಇದೆ. ಅಂತೆಯೇ ನಾನು ಈ ಹಂತಕ್ಕೆ ಮುಟ್ಟಿರುವುದು."

"ರೀಯಲಿ ಯು ಆರ್ ಎ ಬ್ರೇವ್ ಗರ್ಲ್" ಸಾಹೇಬರು ನನ್ನನ್ನು 'ಗರ್ಲ್' ಎಂದು

ಸಂಬೋಧಿಸಿದಾಗಲೇ ಅವರು ಇನ್ನೂ ಕಥೆಯ ಗುಂಗಿನಿಂದ ಹೊರಬಂದಿಲ್ಲ ಎಂಬುದರ ಅರಿವಾಯಿತು.

ಏನಾದರೂ ಬೇಕೆ ಎಂದು ಪ್ರಶ್ನಿಸಲು ಬೊಅರಾ ಇಣುಕಿದಾಗ ಏನೂ ಬೇಡವೆಂದು ಸಾಹೇಬರು ಕೈಯಿಂದಲೇ ಸೂಚಿಸಿದರು.

ಹನ್ನೆರಡು ಗಂಟೆಯ ಸದ್ದು ಕೇಳಿಸಿತು. ಹೊರಗಡೆ ಸ್ಮಶಾನ ಮೌನ. ಗಿಡಗಳ ಸದ್ದು ಹೊರಗಿನ ಅಂಧಃಕಾರ ಹೆಚ್ಚಿಸುವಂಥ ಬೆಳಕು ಬೀರುತ್ತಿರುವ ಕೋಣೆಯಲ್ಲಿಯ ದೀಪ. "ನೀವು ಸುಮ್ಮನಾದಿರಲ್ಲ? ನಿದ್ದೆ ಬಂತೆ?" ಸಾಹೇಬರು ಪ್ರಶ್ನಿಸಿದರು.

"ಹೌದು. ನಾಳೆ ಮತ್ತೆ ಪ್ರವಾಸವಿದೆ. ರಾತ್ರಿ ಜಾಗರಣೆ. ಮತ್ತೆ ಪ್ರವಾಸ.... ಅಬ್ಬಾ! ಹನ್ನೆರಡೂವರೆ ಆಗಿಹೋಯ್ತಲ್ಲವೆ? ನಿಮಗೂ ಬಹಳ ತಡವಾಯ್ತು. ಮನೆಯಲ್ಲಿ ಹೆಂಡತಿ ಮಕ್ಕಳು ದಾರಿ ಕಾಯುತ್ತಿರಬಹುದು" ಎಂದೆ.

"ಅದು ಇದ್ದೇ ಇದೆ. ನೀವು ಮತ್ತೆ ಯಾವಾಗ ಸಿಕ್ತೀರಾ ಹೇಳಿ."

"ಮತ್ತೆ ಆಮಂತ್ರಣ ಬಂದರೆ ಶ್ರೋತೃಗಳು ಜ್ಞಾಪಿಸಿಕೊಂಡರಾಯ್ತು. ನಾವು ಹಾಜರಾಗುತ್ತೇವೆ."

ಸಾಹೇಬರು ಇದ್ದಕ್ಕಿದ್ದಂತೆ ಗಂಭೀರರಾದರು. "ಇವತ್ತು ನಾನು ಇಲ್ಲೇ ಉಳಿದರೆ ಅಭ್ಯಂತರ ಏನಿಲ್ಲವಷ್ಟೇ?" ಅವರ ಧ್ವನಿಯಲ್ಲಿ ಗಮನಾರ್ಹ ಬದಲಾವಣೆಯಾಗಿತ್ತು.

"ಇಲ್ಲಿ?! ಇಲ್ಲೇನಿದೆ? ಇಲ್ಲಿದ್ದು ನಿಮಗೆ ಪ್ರಯೋಜನವಾದರೂ ಏನು? ತಾವಿನ್ನು ಹೊರಡುವುದು ಒಳ್ಳೆಯದು."

"ಮತ್ತೆ ನಾನು ಹೋಗದಿದ್ದರೆ?"

"ಹೋಗದಿದ್ದರೆ ನಿಮ್ಮ ಅಧಿಕಾರವಿರುವ ಈ ಊರಲ್ಲಿ ನಾನೇನು ಮಾಡಲು ಸಾಧ್ಯ? ಎಂಬುದಲ್ಲವೇ ನಿಮ್ಮ ಪ್ರಶ್ನೆ? ನೀವು 'ಆನಂದ' ಪಡೆಯಲು ತಾನೇ ಇರಲು ಯೋಚಿಸುತ್ತಿರುವುದು? ನನ್ನ ಆನಂದ ಸಾಹಿತ್ಯದೊಂದಿಗೆ ನಿಗದಿತವಾಗಿದೆ. ಮತ್ತೆ ಸ್ವಂತದ ಐಡೆಂಟಿಟಿ ಮರೆತು ಹೀಗೆ ಭಾವನಾವಶರಾಗುವ ಜನ ನನ್ನನ್ನೆಂದೂ ಆಕರ್ಷಿಸಿಲ್ಲ.

"ಜೀವನವಿಡಿ ನಾನು ಒಂದೇ ದಾರಿಯಲ್ಲಿ ನಡೆದಿರುವೆ. ಲೇಖನಿ ಹಾಗೂ ವಾಣಿ ಇವು



"ನೀನು ಕಲಿತು ದೊಡ್ಡವನಾದ ಮೇಲೆ ಏನು ಮಾಡಬೇಕೂಂತ ಇದ್ದೀ ತಾತಾ...?"

ಗಳೆರಡರ ಮೇಲೇ ನಾನು ಬದುಕಿರುವುದು. ಬೇರೇನನ್ನೂ ನಾನು ಜಗತ್ತಿನಲ್ಲಿ ಗುರುತಿಸುವುದಿಲ್ಲ. ನೀವು ಅಪೇಕ್ಷಿಸಿದಂಥ ಸ್ತ್ರೀ ನಾನಲ್ಲ. ಕ್ಷಮಿಸಿ. ನಮ್ಮಿಬ್ಬರ ಮಾರ್ಗಗಳು ಬೇರೆ ಬೇರೆ. ನಾನು ಇಂದು ಹೇಳುತ್ತಿರುವ ಮಾತುಗಳ ಅರ್ಥ ನಾಳೆ ಸೂರ್ಯೋದಯದ ನಂತರ ನಿಮಗಾದೀತು. ಒಂದೊಂದು ರಾತ್ರಿ ನಿಮ್ಮಂಥವರ ದಾರಿ ತಪ್ಪಿಸುವಂಥದಿರುತ್ತದೆ. ಈ 'ನಿಶೆ' ಅಳಿಯುತ್ತಿದ್ದಂತೆ ನಿಮಗೂ ನಿಮ್ಮ ತಪ್ಪಿನ ಅರಿವಾದೀತು. ತಾವು ನನ್ನನ್ನು ಇಲ್ಲಿಯವರೆಗೆ ಬಿಡಲು ಬಂದಿರಿ ಸಂತೋಷ. ಥ್ಯಾಂಕ್ಸ್ ಅಂಡ್ ಗುಡ್‌ನೈಟ್".

ಸಾಹೇಬರು ಶಾಂತರಾಗಿ ಹೊರಟು ಹೋದರು. ಗೇಟಿನಿಂದ ಅವರ ಕಾರು ಹೊರಹೋದ ಹಾಗೂ ಗೇಟು ಹಾಕಿದ ಶಬ್ದ ಕೇಳಿಸಿತು. ಆದರೆ ಈಗ ಇದ್ದಕ್ಕಿದ್ದಂತೆ ನನಗೆ ಕೈಕಾಲು ಸೋತು ಹೋದಂತೆ ಅನಿಸತೊಡಗಿತು. ರಾತ್ರಿಯಿಡೀ ದೀಪಗಳು ಉರಿಯುತ್ತಿದ್ದವು. ನನ್ನ ಕಣ್ಣುಗಳು ತೆರೆದೇ ಇದ್ದವು.

ಬೆಳಿಗ್ಗೆ ಬಾಗಿಲ ಮೇಲೆ 'ಟಕ್ ಟಕ್' ಶಬ್ದ ಕೇಳಿಸಿತು. ನಾನು ಗಡಿಬಿಡಿಯಿಂದ ಬಾಗಿಲು ತೆರೆದು ನೋಡಿದೆ. ಬೋಅರಾ!

ಮುಖ ತೊಳೆದುಕೊಂಡೆ. ಕಾಫಿ ಬಂತು. ಜೊತೆಗೆ ಬೋಅರಾನ ಹೆಂಡತಿ ಹಾಗೂ ಚಿಳ್ಳೆ ಪಿಳ್ಳೆ ಮಕ್ಕಳು. ಎಲ್ಲರೂ ನನ್ನ ಪಾದಗಳ ಮೇಲೆ ತಲೆಯಿಟ್ಟು ನಮಸ್ಕರಿಸಿದರು. ನಾನು ಸಂಭ್ರಮಿತಳಾದೆ. ಇದು 'ಟಿಪ್ಸ್'ಗಾಗಿ ಇರಲಿಕ್ಕಿಲ್ಲವಷ್ಟೆ?

"ಅರೆ ಇದೇನು ಮಾಡ್ತಿದ್ದೀರಿ?"

"ತಾಯಿ, ನೀವು ದೇವತೆಯೇ ಸೈ. ಇವತ್ತಿನವರೆಗೂ ಹೀಗೆಂದೂ ಆಗಿರಲಿಲ್ಲ. ಆ ಸಾಹೇಬರು ಬಂದಾಗೆಲ್ಲಾ ಇಲ್ಲಿಯೇ ರಾತ್ರಿ ಕಳೆಯುತ್ತಾರೆ. ನಿನ್ನೆ ಮೊದಲ ಬಾರಿಗೆ ಅವರು ಹಾಗೆ ಮರಳಿ ಹೋದದ್ದು. ತಾಯಿ ಇಂಥದ್ದನ್ನೆಂದೂ ಕೇಳಿರಲಿಲ್ಲ ನಾನು" ಎಂದ ಬೋಅರಾ.

"ಏನು ಕೇಳಿದ?"

"ನಾನಿಲ್ಲೇ ಬಾಗಿಲ ಪಕ್ಕಕ್ಕೆ ನಿಂತಿದ್ದೆ ತಾಯಿ. ಏನಾದರೂ ಆದರೆ ಎಂಬ ಸಂಶಯದಿಂದ. ಈಕೆ ನನ್ನ ಬೀವಿ. ಇವು ನಮ್ಮ ಮಕ್ಕಳು. ಇವರಿಗೆ ನಿಮ್ಮ ಆಶೀರ್ವಾದ ಇರಲಿ ತಾಯಿ."

ನಾನು ತಿಂಡಿಗಾಗಿ ಮಕ್ಕಳ ಕೈಲಿ ಹಣವನ್ನಿಟ್ಟೆ.

ಬೆಳಗಾಗುತ್ತಿರುವಂತೆಯೇ ಟ್ಯಾಕ್ಸಿ ಬಂತು. ನನಗೆ ವಿದಾಯ ಹೇಳಲು ಸಂಯೋಜಕರ ಪೈಕಿ ಯಾರೂ ಬರಲಿಲ್ಲ. ಆದರೆ ರಾತ್ರಿ ನನ್ನ ರಕ್ಷಣೆಗಾಗಿ ನಿದ್ದೆಗೆಟ್ಟ ಬೋಅರಾ ವಿದಾಯ ಹೇಳಲು ಅಂಗಳದಲ್ಲಿ ನಿಂತಿದ್ದ. ಜೊತೆಗೆ ಅರೆಬಟ್ಟೆಯ ಆತನ ಮಕ್ಕಳು, ಬುರಖಾ ಧರಿಸಿದ ಆತನ ಬೀವಿ.

"ಹುಶಾರಾಗಿ ಹೋಗಿ ಬನ್ನಿ ತಾಯಿ" ಎಂದು ಕೈ ಆಡಿಸಿದರು.

ನಾನು ಸುರಕ್ಷಿತಳಾಗಿದ್ದೆ, ಸುರಕ್ಷಿತಳಾಗಿ ಹೊರಟಿದೆ. ಆದರೂ ವಿದಾಯ ಹೇಳ ಬಂದ ಆ 'ನನ್ನ' ಜನಗಳಿಗಾಗಿ ಕಣ್ಣುಗಳು ತುಂಬಿ ಬಂದವು. *



**ಒಂ**ದು ದಿನ ಹಿಟ್ಲರನನ್ನು ಯಾರೋ ಕೇಳಿದರಂತೆ– ಅವನಿಗೆ ಪ್ರಿಯವಾದ ಹೂವು ಯಾವುದೆಂದು. ಹಿಟ್ಲರ್ ಆ ವಿಚಾರವಾಗಿ ಬಹುಶಃ ಎಂದೂ ಯೋಚಿಸಿರಲಿಲ್ಲ. ಅದಕ್ಕೆ ಅವಕಾಶವಾಗಲಿ ಅಗತ್ಯವಾಗಲಿ ಇರಲಿಲ್ಲವೇನೋ. ಆದರೂ ಅಂಥ ಪ್ರಶ್ನೆ ಎದುರಾದಾಗ ಜರ್ಮನಿಯ ಸರ್ವಾಧಿಕಾರಿಯಾದ, ಸರ್ವಶಕ್ತನಾದ ಅವನು ಸುಮ್ಮನಿರುವುದು ತರವೇ? 'ಎಡಲ್‌ವೇಸ್' ಎಂದು ಅವನು ಥಟ್ಟನೆ ಉತ್ತರಕೊಟ್ಟ.

ಜರ್ಮನಿಯಲ್ಲಿ ಎಡಲ್‌ವೇಸ್ ಬಲು ಸಾಮಾನ್ಯವಾದ ಹೂವಂತೆ. ಸೌಂದರ್ಯವಾಗಲಿ ಸುವಾಸನೆಯಾಗಲಿ ಇಲ್ಲದ ಆ ಹೂವನ್ನು ಮೂಸಿ ನೋಡುವುದಿರಲಿ, ಅದರತ್ತ ಕತ್ತೆತ್ತಿಯೂ ಯಾರೂ ನೋಡುತ್ತಿರಲಿಲ್ಲ. ಹಿಟ್ಲರನಲ್ಲದೆ ಬೇರೆ ಯಾರಾದರೂ ಆ ಹೂವು ತನಗೆ ಇಷ್ಟವೆಂದು ಹೇಳಿದ್ದಿದ್ದರೆ ಆ ಮಾತನ್ನು ಕೇಳಿದವರು ನಕ್ಕುಬಿಡುತ್ತಿದ್ದರು. ಅವನು ದಡ್ಡ, ಅರಸಿಕ, ಸೌಂದರ್ಯ ಪ್ರಜ್ಞೆ ಇಲ್ಲದವ ಎಂದು ಹೀಗಳೆಯುತ್ತಿದ್ದರು. ಆದರೆ ಆ ಹೂವು ಹಿಟ್ಲರನಿಗೆ ಇಷ್ಟವೆಂದ ಮೇಲೆ ಕೇಳಬೇಕೆ?

ಅನೇಕರು ಆ ಹೂವನ್ನು ಕೊಂಡಾಡಿ ಲೇಖನ ಬರೆದರು. ಸಾರ್ವಜನಿಕ ಉದ್ಯಾನಗಳಲ್ಲಿ ಆ ಹೂಗಿಡ ಬೆಳೆಸಿದರು. ಮನೆ ಮನೆಗಳಲ್ಲೂ ಕೈತೋಟಗಳಲ್ಲಿ ಅದನ್ನು ಬೆಳೆಸಲಾರಂಭಿಸಿದರು. ಸಾರ್ವಜನಿಕ ಸಮಾರಂಭಗಳಲ್ಲಿ, ಸಂತೋಷ ಕೂಟಗಳಲ್ಲಿ, ಪ್ರಿಯರ ಸಮಾಗಮಗಳಲ್ಲಿ ಒಬ್ಬರಿಗೊಬ್ಬರು ಆ ಹೂವಿನ ಗುಚ್ಛಗಳನ್ನು, ಗೊಂಚಲುಗಳನ್ನು ಕೊಟ್ಟುಕೊಳ್ಳುತ್ತಿದ್ದರು. ಹೀಗಾಗಿ ಎಲ್ಲೆಲ್ಲೂ ಎಡಲ್‌ವೇಸ್! ಕೇವಲ ಒಂದು ಸಾಮಾನ್ಯ ಹೂವಿಗೆ ರಾಜ ವೈಭವ. ಹಿಟ್ಲರ್ ಬಿದ್ದ. ಅವನೊಂದಿಗೆ ಆ ಮಾಯಾ ತೆರೆಯೂ ಕಳಚಿತು. ಎಡಲ್‌ವೇಸ್ ಯಾರೂ ಕೇಳದ ಹಾದಿ ಹೂವಾಯಿತು!

('ಮಿತ್ರಶ್ರೀ'ಯವರ ಸುರಹೊನ್ನೆ ಸಂಗ್ರಹದಿಂದ)

# ಭಲೆ ಧನಂಜಯ!

***ಆತ ಬ್ಲೇಡು, ಟ್ಯೂಬ್‌ಲೈಟ್‌ಗಳನ್ನು ಹಪ್ಪಳದಂತೆ ಜಗಿದು ತಿನ್ನಬಲ್ಲ! 184 ಕಪ್ ಚಹವನ್ನು ತೊಂಬತ್ತೇ ನಿಮಿಷಗಳಲ್ಲಿ ಕುಡಿಯಬಲ್ಲ!! 65 ನಿದ್ರೆಯ ಗುಳಿಗೆಗಳನ್ನು ಏಕಕಾಲಕ್ಕೇ ನುಂಗಬಲ್ಲ!!! ಪುಣೆಯಿಂದ ಘಟ್ಟದ ಇಳಿವಿನ ಅಂಕುಡೊಂಕು ರಸ್ತೆಯಲ್ಲಿ ಹಿಮ್ಮೊಗನಾಗಿ (backward) A;Oq;rh;Utjgj ಓಡಬಲ್ಲ!!!! ಈಗಾಗಲೇ 'ಗಿನ್ನೆಸ್ ಪುಸ್ತಕ'ದಲ್ಲಿ ದಾಖಲಾಗಿರುವ ಮುಂಬಯಿಯ ಧನಂಜಯ ಕುಲಕರ್ಣಿ ಈ 'ಪವಾಡ ಪುರುಷ.'***

*ಕಾಲೇಜಿನಲ್ಲಿದ್ದಾಗ 'ಬ್ಯೂಟಿ ಕ್ವೀನ್' ಎಂದು ಹೆಸರಾಗಿದ್ದ ಹುಡುಗಿಯೊಬ್ಬಳೆಸೆದ ವಿಚಿತ್ರ ಸವಾಲಿಗೆ ಉತ್ತರವಾಗಿ ಕುಲಕರ್ಣಿ ಒಂದೂವರೆ ತಿಂಗಳ ಕಾಲ 'ಹುಡುಗಿಯಾಗಿ' ತರಗತಿಗೆ ಬರುತ್ತಿದ್ದ.*

*ವ.ಪು. ಕಾಳೆಯವರ 'ಕೈಫ್' ಎಂಬ ಕಥೆಯನ್ನೋದಿ, ಅವರ ನಾಯಕನಂತೆಯೆ, 1980ರಲ್ಲಿ ಡೋಂಬಿವ್ಲಿ ಸ್ಟೇಶನ್ನಿನಲ್ಲಿ ಚಲಿಸುತ್ತಿದ್ದ 'ಡೆಕ್ಕನ್ ಕ್ವೀನ್'ನಿಂದ ಹೊರಗೆ ನೆಗೆದು ಕೈಮುರಿದುಕೊಂಡ ಕುಲಕರ್ಣಿ 'ಆತ್ಮಹತ್ಯಾ ಯತ್ನ'ದ ಅಪರಾಧಕ್ಕಾಗಿ ಪೊಲೀಸ್ ಆತಿಥ್ಯ ಪಡೆದ. ಈತನ ಈ ಸಾಹಸವನ್ನು ಮೆಚ್ಚಿ ರವಿಬಾಲಾ (ಆತನನ್ನು ಬಂಧಿಸಿದ ಪೊಲೀಸ್ ಅಧಿಕಾರಿಯ ಮಗಳು) ಹಾಗೂ ವರ್ಷಾ ಪರಾಡ್ಕರ್ (ಈ ಮೊಕದ್ದಮೆಯನ್ನು ಆಲಿಸಿದ ನ್ಯಾಯಾಧೀಶರ ಮಗಳು) ಎಂಬ ತರುಣಿಯರು ಕುಲಕರ್ಣಿಯ ಪ್ರೇಮಪಾಶದಲ್ಲಿ ಸಿಲುಕಿದರು.*

*1978ರಲ್ಲಿ ಗಾಜಿನ ಚೂರುಗಳನ್ನು ತಿನ್ನುವುದರಲ್ಲಿ ನಿಷ್ಣಾತನೆನಿಸಿದ ಜಾರ್ಜ್ ಹರ್ಟ್‌ನ ಪರಿಚಯವಾಗಿ ಕುಲಕರ್ಣಿ ಆ ಸಾಹಸಕ್ಕೆ ಕೈಹಾಕಿ 1983ರಲ್ಲಿ ಇಂಗ್ಲೆಂಡಿನಲ್ಲಿ ಗಿನ್ನೆಸ್ ಪುಸ್ತಕದ ತೀರ್ಪುಗಾರರೆದುರು ಮುಖಾಮುಖಿ ಸ್ಪರ್ಧೆಯಲ್ಲಿ ಗುರುವನ್ನೇ ಸೋಲಿಸಿದ. ಹರ್ಟ್ 10 ತಾಸುಗಳಲ್ಲಿ ಎರಡು ಕೇಜಿ ಗಾಜು ನುಂಗಿದರೆ ಕುಲಕರ್ಣಿ ನುಂಗಿದ್ದು ಎರಡೂವರೆ ಕೇಜಿ!*

*ನಾಗಪುರದಲ್ಲಿ 54 ಅಡಿ ಎತ್ತರದ ಕಟ್ಟಡದಿಂದ ಜಿಗಿದು ಆಯತಪ್ಪಿ ಬಿದ್ದು ಬೆನ್ನು ಮೂಳೆ ಮುರಿದುಕೊಂಡದ್ದರಿಂದ ಕುಲಕರ್ಣಿಯ ಬೆನ್ನಿಗೆ ಉಕ್ಕಿನ ಸರಳನ್ನು ಜೋಡಿಸಬೇಕಾಯಿತು. ಹಲವಾರು ವರ್ಷಗಳ ಗ್ಲಾಸ್ ಜಗಿತದಿಂದಾಗಿ ಆತನ ಬಾಯಲ್ಲೀಗ ಹದಿನಾರೇ ಹಲ್ಲುಗಳು ಉಳಿದುಕೊಂಡಿವೆ.*

*ಕುಲಕರ್ಣಿ (29 ವರ್ಷ) ಈ ವರ್ಷ ಆಗಸ್ಟ್ 15ರಂದು ನಯಾಗರ ಜಲಪಾತದ ಮೇಲಿಂದ ಧುಮುಕಲಿದ್ದಾರೆ. ಈ ಅಪಾಯಕಾರಿ ಸಾಹಸಕ್ಕೆ ಯತ್ನಿಸಿದ 262ರ ಪೈಕಿ ಬದುಕುಳಿದವಳೆಂದರೆ -ಅದೂ ಶಾಶ್ವತ ಅಂಗವಿಕಲೆಯಾಗಿ- ಎಡ್ಸನ್ ಟೇಲರ್.*

*ನಯಾಗರ ಸಾಹಸದ ಬಳಿಕ ಕುಲಕರ್ಣಿ 105 ಕನ್ಯೆಯರನ್ನು ಏಕಕಾಲಕ್ಕೆ ಮದುವೆಯಾಗಬೇಕೆಂದಿದ್ದಾರಂತೆ (ಸಾಲ್ಟ್ ಲೇಕ್‌ನ ನಿವಾಸಿಯೊಬ್ಬ 104 ಹುಡುಗಿಯರನ್ನು ವರಿಸಿರುವುದು ಸದ್ಯದ ದಾಖಲೆ.) ಹುಷಾರ್!* *

# ಇದುವೇ ಜೀವ ಇದು ಜೀವನ

ಅಂದು ಭಾನುವಾರ. ಮಿತ್ರನನ್ನು ನೋಡಲು ಅವರ ಮನೆಗೆ ಹೋಗಿದ್ದೆ. ಮನೆಯ ಮುಂಬಾಗಿಲಿನಲ್ಲಿ ನಿಂತಿದ್ದ ನನ್ನ ಮಿತ್ರರು ವಯಸ್ಸಾದ ಯಜಮಾನನೊಂದಿಗೆ ಕಟ್ಟಿಗೆ ಒಡೆಯುವ ಕೂಲಿಯ ಸಲುವಾಗಿ ತಕರಾರು ನಡೆಸಿದ್ದರು. "ನಾನು ಕೊಡುವುದು ಇಷ್ಟು. ಬೇಕಾದರೆ ಒಡೆಯಬಹುದು" ಎಂದು ಮಿತ್ರರು ಅಂತಿಮವಾಗಿ ನಿಷ್ಠುರವಾಗಿ ಹೇಳಿಬಿಟ್ಟರು. 'ಎಂತಹ ಜಿಗುಟು ಮನುಷ್ಯನಪ್ಪ ಈತ' ಎಂದು ಮನಸ್ಸಿನಲ್ಲೇ ಅಂದುಕೊಂಡೆ. ಆ ಮುದುಕಪ್ಪ ಕಟ್ಟಿಗೆ ಒಡೆಯಲು ಪ್ರಾರಂಭಿಸಿದ.

ನಾನು ನನ್ನ ಮಿತ್ರರು ಕಾಫಿ ಕುಡಿಯುತ್ತಾ ಒಳಗಡೆ ಕುಳಿತಿರುವಾಗ ಕಟ್ಟಿಗೆ ಒಡೆಯುತ್ತಿದ್ದ ಮುದುಕಪ್ಪ ಬಂದು "ಸ್ವಲ್ಪ ಬಟ್ಟೆ ಕೊಡ್ರಿ, ಕಟ್ಟಿಗೆ ಬಡಿದಿದೆ ಕಟ್ಟಿಕೊಳ್ತೀನಿ" ಎಂದ. ನೋಡಿದರೆ ಅವನ ಹಣೆಗೆ ಗಾಯವಾಗಿ ರಕ್ತ ಸುರಿಯುತ್ತಿದೆ. ನನ್ನ ಮಿತ್ರರು ಕೂಡಲೇ ಅವನನ್ನು ಎದುರಿಗಿರುವ ದವಾಖಾನೆಗೆ ಕರೆದೊಯ್ದು ಚಿಕಿತ್ಸೆ ಮಾಡಿಸಿ ಹಣಕೊಟ್ಟು ಬಂದರು.

'ಚಿಕಿತ್ಸೆಗೆ ಕೊಟ್ಟ ಹಣವನ್ನು ಕಟ್ಟಿಗೆ ಒಡೆದ ಕೂಲಿ ಹಣದಲ್ಲಿ ಹಿಡಿದು ಕೊಡುವೆಯಾ' ಎಂದು ನಾನು ಕೇಳಿದೆ. 'ಅವನೆಲ್ಲಿ ದವಾಖಾನೆಗೆ ಹೋಗುತ್ತಿದ್ದ ಕರೆದೊಯ್ದದ್ದು ನಾನು. ಏಕೆಂದರೆ ಕಟ್ಟಿಗೆ ಒಡೆಯಲು ಹಚ್ಚಿದವನು ನಾನು. ಹಿಡಿಮುಕೊಳ್ಳುವುದು ಎಲ್ಲಿಂದ?" ಎಂದರವರು.

ನನ್ನ ಮಿತ್ರರ ಮೊದಲಿನ ವರ್ತನೆಯಿಂದ 'ಜಿಗುಟ' ಎಂದು ತಿಳಿದಿದ್ದ ನನಗೆ ನನ್ನ ತಪ್ಪಿನ ಅರಿವಾಯಿತು. ಅವನ ಈ ಎರಡು ಗುಣಗಳು ಚತುರ್ಥ ಪುರುಷಾರ್ಥಗಳಲ್ಲಿನ ಎರಡು ಗುಣಗಳನ್ನು ತೋರಿಸಿಕೊಟ್ಟವು. ಮೊದಲನೆಯದು 'ಅರ್ಥ' ಎರಡನೆಯದು 'ಧರ್ಮ' *

**ಎಂ.ಬಿ. ಸೋಮನಾಳ**

ನಮ್ಮ ಪರಿಚಯದವರ ಮಗಳಿಗೆ ಮದುವೆ ಗೊತ್ತಾಗಿತ್ತು. ಹುಡುಗ ಬೆಂಗಳೂರಿನವನು. ಮದುವೆಗೆಂದು ಸಿದ್ಧತೆಗಳೂ ನಡೆದಿದ್ದವು. ಲಗ್ನ ಪತ್ರಿಕೆ ಮುದ್ರಣಕ್ಕೆ ಕೊಡುವ ಹವಣಿಕೆಯಲ್ಲಿದ್ದಾಗ, ಗಂಡಿನ ಕಡೆಯವರಿಂದ ಪತ್ರ ಬಂತು. "ಹುಡುಗಿ ಕೆಲಸದಲ್ಲಿಲ್ಲ. ನಮಗೆ ಈ ಮದುವೆ ಇಷ್ಟವಿಲ್ಲ" ಇದು ಪತ್ರದ ಸಾರಾಂಶ.

ಹುಡುಗಿಗಂತೂ ಅನಿರೀಕ್ಷಿತ ಆಘಾತ. ಇನ್ನು ತನಗೆ ಯಾವ ಮದುವೆಯೂ ಬೇಡ ಎಂದೇ ಅವಳ ಹಟ. ಅಂತೂ ಇಂತೂ ತಂದೆ-ತಾಯಿಗಳು ಅವಳನ್ನೊಪ್ಪಿಸಿ ಮತ್ತೆ ವರಾನ್ವೇಷಣೆಗೆ ತೊಡಗಿದರು. ಕೆಲವು ತಿಂಗಳ ಹಿಂದೆ ವಧು ನೋಡಲೆಂದು ಹುಡುಗನೊಬ್ಬ ಬಂದಿದ್ದ. ಊರಿಗೆ ಹೋಗಿ ಕಾಗದ ಬರೆಯುತ್ತೇವೆ ಎಂದ. ಇನ್ನಾದರೂ ಉತ್ತರ ಬಂದಿಲ್ಲ.

ಹುಡುಗ ಹುಡುಗಿಯನ್ನು ನೋಡಿದಾಗಲೇ ಇಷ್ಟವಿದೆ ಅಥವಾ ಇಲ್ಲ ಎಂದು ಹೇಳಬಾರದೇಕೆ? ವಧು ಪರೀಕ್ಷೆಯ ಜತೆಗೆ ಉತ್ತರ ನಿರೀಕ್ಷಿಸುವ ಹಿಂಸೆಯೂ ಹೆಣ್ಣಿಗಾಗಬೇಕೆ? *

**ಸುಮಾ.ಎಸ್.**

ಸ್ನೇಹಿತರ ಮನೆಗೆ ಹೋಗಿದ್ದೆ. ಸುಮಾರು ನಾಲ್ಕು ವರ್ಷದ ಅವರ ಮಗಳು ನನ್ನ ಗಮನ ಸೆಳೆದಳು. ಅರಳು ಹುರಿದಂತೆ ಮಾತನಾಡು ತ್ತಿದ್ದ ಹುಡುಗಿ ತುಂಬಾ ಚೂಟಿ. ಸಂತೋಷ ವಾಯಿತು. ಮಾತಿಗೆಳೆದೆ.

"ಮಗೂ ನಮ್ಮ ಮನೆಗೆ ಬರ್ತೀಯಾ" ಎಂದೆ

"ಓ....ಬರುತ್ತೇನೆ" ಎಂದಳು.

"ನಿನ್ನ ಹೆಸರೇನಮ್ಮ?"

ಹುಡುಗಿ ಮಾತನಾಡಲಿಲ್ಲ. ನಗುತ್ತಿರುವ ಮುಖ ಗಂಟಿಕ್ಕಿತು. ನನಗೆ ಕಸಿವಿಸಿಯಾಯಿತು. ಬಹಳ ಸೌಮ್ಯವಾಗಿ ಕೇಳಿದೆ.

"ಯಾಕಮ್ಮಾ, ನಿನ್ನ ಹೆಸರು ಹೇಳಲ್ವಾ"

"....................."

"ಜಾಣಮರಿ ಹೇಳಮ್ಮ"

"....................."

ನನಗೆ ಆಶ್ಚರ್ಯವಾಯಿತು. ಅಷ್ಟು ಚೆನ್ನಾಗಿ ಮಾತನಾಡುತ್ತಿದ್ದ ಮಗು ಇದ್ದಕ್ಕಿದ್ದಂತೆ ಹೀಗೆ? ನನ್ನ ಸ್ನೇಹಿತರು ಆಶ್ಚರ್ಯಚಕಿತರಾದರು. ನಾನು ಕೋಪ ಬಂದವನಂತೆ ನಟಿಸಿ, "ಹೆಸರು ಹೇಳ್ಲಿದ್ರೆ ಪೊಲೀಸರಿಗೆ ಹಿಡಿದು ಕೊಡ್ತೀನಿ" ಬೆದರಿಸಿದೆ.

"What is your name? ಅಂತ ಕೇಳಿದರೇ ಹೇಳೋದು ಅಂಕಲ್. ಅಂಗಂತ ನಮ್ಮ ಮಿಸ್ ಹೇಳವ್ರೆ. ಕನ್ನಡದಲ್ಲಿ ಕೇಳಿದ್ರೆ ಹೇಳಲ್ಲಾ ಗೊತ್ತಾ?"

ನಾನು ದಂಗಾದೆ. ಕನ್ನಡದ ಕಲಿಗಳು ಈ ಹೊತ್ತಿನಲ್ಲಿ ಇಲ್ಲಿದ್ದಿದ್ದರೆ ಏನು ಹೇಳುತ್ತಿದ್ದರೋ? ಎಂದು ಯೋಚಿಸತೊಡಗಿದೆ. *

ಕುರುಬರಹಳ್ಳಿ ಕೆ. ಹೊನ್ನಪ್ಪ

ಇದು 1960ರಲ್ಲಿ ನಡೆದ ಘಟನೆ. ಬಹಳ ಕೃಶಾಂಗರಾಗಿದ್ದ ನನ್ನ ಆತ್ಮೀಯ ಸ್ನೇಹಿತ ರೊಬ್ಬರು ಆರೋಗ್ಯ ಸುಧಾರಿಸಲು, ವೈದ್ಯರ ಸಲಹೆ ಮೇರೆಗೆ ಬೀರ್ ಕುಡಿಯಲು ನಿರ್ಧರಿಸಿ ದರು. ದುರದೃಷ್ಟವಶಾತ್ ಅವರು ಹೀಗೆ ನಿರ್ಧರಿಸಿದ ಮಾರನೇ ದಿನದಿಂದಲೇ ಪಾನ ನಿರೋಧ ಜಾರಿಗೆ ಬರುವುದಿತ್ತು. ನನ್ನ ಗೆಳೆಯ ತನ್ನ ಹಳ್ಳಿಯಿಂದ ಸುಮಾರು 30 ಮೈಲಿ ದೂರವಿದ್ದ ಮೈಸೂರಿನಿಂದ 24 ಬಾಟಲು ಬೀರ್ ಕೊಂಡು ತರಿಸಿದರು. ಅದರ ಮರುದಿನ ಶುಭಮುಹೂರ್ತದಲ್ಲಿ ಪಾನ ಪ್ರಾರಂಭೋತ್ಸವ ಮಾಡುವುದೆಂದು ತೀರ್ಮಾನಿಸಿದರು. ಸಾತ್ವಿಕರಾದ ಆ ನನ್ನ ಗೆಳೆಯ ಈ ದುರಭ್ಯಾಸ ಮಾಡಬಾರದೆಂದೋ ಏನೋ ಅದೇ ದಿನ ರಾತ್ರಿ ಅವರ ಮನೆಯಲ್ಲಿ ಕಳ್ಳತನವಾಯ್ತು. ಮರುದಿನ ಬೆಳಿಗ್ಗೆ ಪೊಲೀಸರು ಮಹಜರಿಗಾಗಿ ಸ್ಥಳಕ್ಕೆ ಬಂದಾಗ ಬೀರ್ ಬಾಟಲ್‌ಗಳನ್ನು ನೀರಿನ ತೊಟ್ಟಿಯಲ್ಲಿ ಮುಳುಗಿಸಿಡಲಾಗಿತ್ತು. ಕಾರಣ ಆ ದಿನದಿಂದಲೇ ಪಾನನಿರೋಧ ಜಾರಿಗೆ ಬಂದಿತ್ತು.

ಪೊಲೀಸರ ನಿರ್ಗಮನದ ನಂತರ ನನ್ನ ಗೆಳೆಯ ಇನ್ನು ತಡಮಾಡಬಾರದೆಂದು ಕುಡಿಯಲು ಕುಳಿತರು. ಯಾವ ದುರಭ್ಯಾಸವೂ ಇಲ್ಲದಿದ್ದ ಆತನ ಬಳಿ ಬೀರ್ ಬಾಟಲು ಒಡೆಯುವ ಓಪನರ್ ಸಹ ಇರಲಿಲ್ಲ. ಕುಡಿಯುವಾಗ ವ್ಯಂಜನಗಳಿರಬೇಕೆಂದೂ ಆತನಿಗೆ ತಿಳಿದಿರಲಿಲ್ಲ. ಹೇಗೋ ಕಷ್ಟ ಪಟ್ಟು ಒಂದೆರಡು ಗುಟುಕು ಕುಡಿದರು. ನಂತರ ಖಾಸಗಿ ಕಂಪೆನಿಯಲ್ಲಿ ಕೆಲಸ ಮಾಡುತ್ತಿದ್ದ ಆತ ತನ್ನ ಆಫೀಸಿಗೆ ಹೋಗಿ ಕುಳಿತರು. ಇಷ್ಟು ಹೊತ್ತಿಗೆ ಬೀರ್ ತನ್ನ ಪ್ರಭಾವವನ್ನು ಬೀರತೊಡಗಿತ್ತು. ಮ್ಯಾನೇಜರು ಎರಡು ಸಲ ಕರೆ ಕಳುಹಿಸಿದಾಗ ಹೋಗಿ, ಮಾತನಾಡಲು ವಿಫಲರಾಗಿ, ತನ್ನ ಜಾಗದಲ್ಲಿ ಬಂದು ಕುಳಿತರು.

ಈ ವೇಳೆಗೆ ಸಹೋದ್ಯೋಗಿಗಳಿಗೆಲ್ಲಾ ವಿಷಯ ತಿಳಿದು ಒಬ್ಬೊಬ್ಬನೂ ಒಂದೊಂದು ಟೀಕೆ ಮಾಡತೊಡಗಿದನು. ಒಬ್ಬ ಹಿಂದೂ ಸಹೋದ್ಯೋಗಿ ಈತನಿಗೆ "ಅಭ್ಯಾಸವಿಲ್ಲದ ಅಯ್ಯ ಔಪಾಸನೆ ಮಾಡಲು ಹೋಗಿ ಗಡ್ಡ ಸುಟ್ಟು ಕೊಂಡ ಹಾಗೆ" ಎಂದನು. ಮತ್ತೊಬ್ಬ ಮುಸ್ಲಿಂ ಸಹೋದ್ಯೋಗಿ "ಏನ್ರೀ, ಘಾಮುಡ್ ಗಾಂಜಾ ಪೀಯೆತೊ ಹಂಡಿಮೆ ಖಾನಾ ಛಟ್ ಅಂತ ನಿಮಗ್ಯಾಕೆ ಬೇಕಿತ್ರಿ ಈ ಕುಡಿತ" ಎಂದ. ಮೊದಲೇ ನಿಷ್ಕ್ರಿಯನಾಗಿದ್ದ ನನ್ನ ಗೆಳೆಯ ಈ ಟೀಕೆಗಳನ್ನೆಲ್ಲಾ ಎದುರಿಸಲಾರದೆ ಮನೆಗೆ ಬರುವಷ್ಟರಲ್ಲಿ ಛಳಿಜ್ವರವೂ ಪ್ರಾರಂಭವಾಗಿತ್ತು. ಅಯ್ಯೋ ದೇವರೆ! ದುಡ್ಡು ಕೊಟ್ಟು ದೆವ್ವ ಬಿಡಿಸಲು ಹೋಗಿ ದೆವ್ವ ಮೆಟ್ಟಿಸಿಕೊಂಡಂತಾಯಿತಲ್ಲ ಎಂದು ಪೇಚಾಡಿಕೊಂಡು ಬೀರ್ ಕುಡಿಯಲು ಸಲಹೆ ಮಾಡಿದ ವೈದ್ಯರ ಬಳಿಗೇ ಹೋಗಿ ಇಂಜೆಕ್ಷನ್ ತೆಗೆದುಕೊಂಡು ಬಂದು ಮಲಗಿದರು.

ಆರ್. ಸೂರ್ಯನಾರಾಯಣ.

# ಗಗನನೌಕೆ ಗೆಲಿಲಿಯೋ

● ಬಿ.ಆರ್. ಗುರುಪ್ರಸಾದ್ ●

ಖಗೋಲ ಶಾಸ್ತ್ರ ಇತಿಹಾಸದಲ್ಲಿ ಇಟಲಿಯ ವಿಜ್ಞಾನಿ ಗೆಲಿಲಿಯೋ ಗ್ಯಾಲಲೈಗೆ ಮಹತ್ತರ ಸ್ಥಾನವಿದೆ. 1610ರಲ್ಲಿ ದೂರದ ಆಕಾಶಕಾಯಗಳನ್ನು ವೀಕ್ಷಿಸಲು ಆತ ರಚಿಸಿದ ದೂರದರ್ಶಕ ಒಂದು ಪರ್ವವನ್ನೇ ಆರಂಭಿಸಿತು. ಗುರುಗ್ರಹದ ಸುತ್ತ ನಾಲ್ಕು ಉಪಗ್ರಹಗಳು ಸುತ್ತುವುವೆಂದು ಮೊದಲು ದಾಖಲಿಸಿದವನೇ ಗೆಲಿಲಿಯೋ.

ಆ ಘಟನೆಯಾಗಿ 380 ವರ್ಷ ಕಳೆದಿದೆ. ಈಗ 'ಗೆಲಿಲಿಯೋ' ಹೆಸರಿನ ಸ್ವಯಂಚಾಲಿತ ಗಗನ ನೌಕೆಯೊಂದು ಗುರುಗ್ರಹದತ್ತ ತನ್ನ ದೀರ್ಘ ಪ್ರಯಾಣ ಆರಂಭಿಸಲಿದೆ. 1989ರಲ್ಲಿ ಅಮೆರಿಕದಿಂದ ಉಡ್ಡಯಣ ಆರಂಭಿಸಲಿರುವ 'ಗೆಲಿಲಿಯೋ' ಶುಕ್ರಗ್ರಹ, ಚಂದ್ರ ಹಾಗೂ ಎರಡು ಕ್ಷುದ್ರ ಗ್ರಹಗಳನ್ನೂ (ಆಸ್ಟಿರಾಯ್ಡ್) ಅನ್ವೇಷಿಸುತ್ತದೆ. ಆ ಗಗನ ನೌಕೆ ಬಳಸುವ ವಿಶಿಷ್ಟ ಪಥದಿಂದಾಗಿ ಇದೆಲ್ಲಾ ಸಾಧ್ಯವಾಗಲಿದೆ.

ಇದುವರೆಗೆ ಹಲವಾರು ಸ್ವಯಂಚಾಲಿತ ಗಗನ ನೌಕೆಗಳು ಸೌರವ್ಯೂಹದ ಅನೇಕ ಗ್ರಹ, ಉಪಗ್ರಹಗಳನ್ನು ವಿಶ್ಲೇಷಿಸಲು ನೆರವಾಗಿವೆ. ಇವನ್ನು ರೋಬೋ ನೌಕೆಗಳು ಎಂದೂ ಕರೆಯುತ್ತಾರೆ. ಗೆಲಿಲಿಯೋ, ಇದುವರೆಗೆ ನಿರ್ಮಾಣವಾದ ಎಲ್ಲ ರೋಬೋ ನೌಕೆಗಳಿಗಿಂತ ಸಂಕೀರ್ಣ ರಚನೆಯದು. ಅದು ನಿರ್ವಹಿಸಬೇಕಾದ ಕಾರ್ಯ ವಿಶಿಷ್ಟವಾದುದು. ಆದ್ದರಿಂದಲೇ ಇಂಥ ಎಚ್ಚರ ವಹಿಸಲಾಗಿದೆ. ಮುಂಚಿನ ಯೋಜನೆಯಂತೆ, 1982ರಲ್ಲಿ ಅಂತರಿಕ್ಷ ಶಟಲ್‌ನಲ್ಲಿ ಭೂಕಕ್ಷೆಗೆ ಉಡಾಯಿಸಬೇಕಿತ್ತು. ಅಲ್ಲಿಂದ 'ಸೆಂಟಾರ್' ಎಂಬ ಮತ್ತೊಂದು ರಾಕೆಟ್ ನೆರವಿನಿಂದ ಅದನ್ನು ಗುರುಗ್ರಹದತ್ತ ಕಳಿಸುವ ಏರ್ಪಾಡಾಗಿತ್ತು. ಒಂದಲ್ಲ ಒಂದು ತಾಂತ್ರಿಕ ತೊಂದರೆಯಿಂದಾಗಿ ಈ ಯಾನವನ್ನು ಮುಂದೂಡುತ್ತಾ ಬರಲಾಯಿತು. ಅಮೆರಿಕದ ಅಂತರಿಕ್ಷ ಶಟಲ್ 'ಚಾಲೆಂಜರ್' 1986ರ ಜನವರಿ 28ರಂದು

ಉಡಾವಣೆಯ ಸಮಯದಲ್ಲೇ ಸ್ಫೋಟಗೊಂಡ ಮೇಲೆ. ಗೆಲಿಲಿಯೋ ಉಡಾವಣೆಗೆ ಹಲವಾರು ಅಡ್ಡಿಗಳು ಬಂದೊದಗಿದವು. ಈ ನೌಕೆಯನ್ನು ಗುರುಗ್ರಹದತ್ತ ಉಡಾಯಿಸುವ 'ಸೆಂಟಾರ್' ರಾಕೆಟನ್ನು ಅಂತರಿಕ್ಷ ಶಟಲ್‌ನಲ್ಲಿ ಕೊಂಡೊಯ್ಯಲು ಅಮೆರಿಕದ ತಂತ್ರಜ್ಞರು ನಿರಾಕರಿಸಿದರು. ಸುರಕ್ಷಿತವಲ್ಲ ಎನ್ನುವುದು ಅವರೊಡ್ಡಿದ ನೆಪ.

ಅಂತರಿಕ್ಷ ಶಟಲ್ ಬಿಟ್ಟರೆ ಬೇರಾವ ರಾಕೆಟ್ಟೂ ಗೆಲಿಲಿಯೋ ನೌಕೆಯನ್ನು ಭೂಕಕ್ಷೆಗೆ ಕೊಂಡೊಯ್ಯಲಾರದು. ಸಮಸ್ಯೆ ಗಂಭೀರ. ವಿಜ್ಞಾನಿಗಳಿಗೆ ಬಹುದೊಡ್ಡ ಸವಾಲು. ಅವರು ಪರ್ಯಾಯ ಯೋಜನೆಯನ್ನು ರೂಪಿಸಿದರು.

ಹೊಸ ಯೋಜನೆಯಂತೆ ಗೆಲಿಲಿಯೋ ನೇರವಾಗಿ ಗುರುಗ್ರಹದತ್ತ ಹಾರುವುದಿಲ್ಲ. 1989ರ ಅಕ್ಟೋಬರ್-ನವೆಂಬರ್ ತಿಂಗಳಲ್ಲಿ ಸಾಮಾನ್ಯ ರಾಕೆಟ್ ಒಂದರ ಮೂಲಕ ಅದನ್ನು ಭೂಕಕ್ಷೆಗೆ ಹಾರಿಸಲಾಗುವುದು. ಅಲ್ಲಿ ಮತ್ತೊಂದು ರಾಕೆಟ್ ನೆರವಿನಿಂದ ಸೌರವ್ಯೂಹದ ಒಳಮಂಡಲದ ಶುಕ್ರಗ್ರಹದತ್ತ ಹಾರಿಸಲಾಗುವುದು. ಹದಿನೈದು ಸಾವಿರ ಕಿಲೋಮೀಟರ್ ಎತ್ತರದಿಂದ ಶುಕ್ರಗ್ರಹವನ್ನು ಪ್ರದಕ್ಷಿಣೆ ಹಾಕುತ್ತಾ 1990ರ ಡಿಸೆಂಬರ್‌ನಲ್ಲಿ ನೌಕೆಯು ಭೂಮಿಯ ಸಮೀಪ ಬರುವುದು. 1991ರ ಅಕ್ಟೋಬರ್‌ನಲ್ಲಿ 'ಗ್ಯಾಸ್ಪ್ರಾ' ಎಂಬ ಕ್ಷುದ್ರ ಗ್ರಹಕ್ಕೆ ಸಮೀಪವಾಗುವುದು. 1992ರಲ್ಲಿ ಎರಡನೆಯ ಬಾರಿ ಭೂಮಿಗೆ ಸಮೀಪವಾಗುವುದು. ಅದು ಕೇವಲ ಮುನ್ನೂರು ಕಿಲೋಮೀಟರ್‌ಗಳಷ್ಟು ಹತ್ತಿರ. ಈ ಸಮಯದಲ್ಲಿ ಭೂಮಿ ಮತ್ತು ಶುಕ್ರಗ್ರಹಗಳ ಇಬ್ಬಗೆ ಸೆಳೆತದಿಂದಾಗಿ ಗೆಲಿಲಿಯೋ ನೌಕೆ ಗುರುಗ್ರಹದತ್ತ ತಳ್ಳಲ್ಪಡುವುದು. ಎರಡು ಗ್ರಹಗಳ ಸಂಚಯಿತ ಶಕ್ತಿಯನ್ನೇ ಬಳಸಿಕೊಂಡು ಗುರುಗ್ರಹದತ್ತ ನಡೆಯುವ ಪ್ರಯಾಣ ಅದ್ಭುತ ಕಲ್ಪನೆಯ ಸಾಕಾರವಾಗಿರುತ್ತದೆ.

ಗೆಲಿಲಿಯೋ ನೇರವಾಗಿ ಗುರುಗ್ರಹದತ್ತ



ಕಲಾವಿದನೊಬ್ಬನ ಕಲ್ಪನೆಯಲ್ಲಿ ಗುರುಗ್ರಹದ ಮುಂದಿರುವ 'ಗೆಲಿಲಿಯೋ' ನೌಕೆ.
ಚಿತ್ರಕೃಪೆ: 'ಏರೋಸ್ಪೇಸ್'

ಹಾರಿಸಿದ್ದರೆ ಪ್ರಯಾಣದ ಅವಧಿ ಎರಡು ವರ್ಷಗಳಾಗುತ್ತಿತ್ತು. ಈಗ ಅದರ ಪ್ರಯಾಣಾವಧಿ ಆರು ವರ್ಷ ಕಾಲಕ್ಕೆ ಹಿಗ್ಗಿದೆ. ಆದರೆ ಇದು ವ್ಯರ್ಥ ಕಾಲಯಾಪನೆ ಆಗಲಾರದು. ಏಕೆಂದರೆ ಈ ಅವಧಿಯಲ್ಲಿ ಬೇರೆಬೇರೆ ಗ್ರಹಗಳ ಅಧ್ಯಯನಕ್ಕೆ ಮಾಹಿತಿಯನ್ನು ಗೆಲಿಲಿಯೋ ಒದಗಿಸುವುದು. ಮೊದಲ ಶುಕ್ರಗ್ರಹವನ್ನು ಅನ್ವೇಷಿಸುವ ಈ ನೌಕೆ ಗ್ಯಾಸ್ಪರಾ ಕ್ಷುದ್ರಗ್ರಹದ ವಿವರ ಒದಗಿಸುವುದು. ಗುರುಗ್ರಹದತ್ತ ಪಯಣಿಸುವ ಹಾದಿಯಲ್ಲಿ 'ಇಡಾ' ಎಂಬ ಮತ್ತೊಂದು ಕ್ಷುದ್ರಗ್ರಹವನ್ನು ಅದು ಅನ್ವೇಷಿಸಲಿದೆ.

ಗೆಲಿಲಿಯೋದ ಅತಿಮುಖ್ಯ ಗುರಿ ಗುರುಗ್ರಹ ಮತ್ತು ಅದರ ಉಪಗ್ರಹಗಳನ್ನು ಅನ್ವೇಷಿಸಲಿದೆ ಈ ಮುಂಚಿನ 'ಪಯನೀರ್' ಮತ್ತು 'ವಾಯೇಜರ್' ಸರಣಿಯ ಸ್ವಯಂಚಲಿತ ಗಗನ ನೌಕೆಗಳು ಗುರುಗ್ರಹದ ಅನ್ವೇಷಣೆ ನಡೆಸಿವೆ. ಕೋಟ್ಯಂತರ ಮೈಲಿ ದೂರದಿಂದ ರೇಡಿಯೋ ತರಂಗಗಳ ರೂಪದಲ್ಲಿ ಗುರುಗ್ರಹದ ವರ್ಣಚಿತ್ರಗಳನ್ನು ಅವು ಭೂಮಿಗೆ ರವಾನಿಸಿವೆ. ಆದರೆ ಈ ಎರಡೂ ನೌಕೆಗಳು ಗುರುಗ್ರಹದ ಸಮೀಪ ಹಾಯ್ದುಹೋಗುವಾಗ ಕೆಲಕಾಲ ಮಾತ್ರ ಗ್ರಹದ ಅನ್ವೇಷಣೆ ನಡೆಸಿದವು. ಗುರುಗ್ರಹದ ಉಪಗ್ರಹಗಳಂತೆ ಸುತ್ತಿ ಮಾಹಿತಿ ಸಂಗ್ರಹಿಸಲಿಲ್ಲ. ಆದ್ದರಿಂದಲೇ ಈಗ ಗೆಲಿಲಿಯೋ ನೌಕೆಯನ್ನು ಹಾರಿಬಿಡಲಾಗುತ್ತಿದೆ.

ಗುರುಗ್ರಹದ ದಟ್ಟ ವಾತಾವರಣವನ್ನು ಅಭ್ಯಸಿಸುವುದು ಈ ಗಗನ ನೌಕೆಯ ಮುಖ್ಯ ಉದ್ದೇಶ. ಕೆಲವು ಸೂಕ್ಷ್ಮ ಜೀವಿಗಳು ಅಲ್ಲಿ ಜೀವಿಸಿರಬಹುದೆನ್ನುವ ಖಗೋಲ ಶಾಸ್ತ್ರಜ್ಞರ ಊಹೆಯ ಬಗ್ಗೆ ನಿಖರ ಮಾಹಿತಿ ಇದರಿಂದ ತಿಳಿಯುತ್ತದೆ. ವಾತಾವರಣ ಅಧ್ಯಯನಕ್ಕೆಂದು ವಿಶೇಷ ಕೋಶ ಒಂದನ್ನು ಗೆಲಿಲಿಯೋದಲ್ಲಿ ಇರಿಸಲಾಗಿದೆ. ಗಗನ ನೌಕೆಯು ಗುರುಗ್ರಹದ ಕಕ್ಷೆ ಸೇರುವ ಐದು ತಿಂಗಳ ಮೊದಲು ಇದು ಕಾರ್ಯಾರಂಭ ಮಾಡುತ್ತದೆ. ನೌಕೆಯಿಂದ

ಬೇರ್ಪಟ್ಟ ಕೋಶವು ಗಾಳಿಕೊಡೆಗಳ ಸಹಾಯದಿಂದ ವಾತಾವರಣದತ್ತ ಧಾವಿಸಿದ ಒಂದೂ ಕಾಲು ಗಂಟೆಯ ಅವಧಿಯಲ್ಲಿ ನಾಶವಾಗುತ್ತದೆ. ನಾಶವಾಗುವ ಮುನ್ನ ವಾತಾವರಣದ ಮಾಹಿತಿಯನ್ನು ತನ್ನ ಮಾತೃ ನೌಕೆಗೆ ರವಾನಿಸುತ್ತದೆ. ಅಲ್ಲಿಂದ ಅದು ಭೂಮಿಯನ್ನು ತಲುಪುತ್ತದೆ.

ಗೆಲಿಲಿಯೋ ನೌಕೆ ಗುರುಗ್ರಹದ ಉಪಗ್ರಹದಂತೆ ಎರಡು ವರ್ಷ ಪ್ರದಕ್ಷಿಣೆ ಹಾಕುತ್ತದೆ. ಈ ಅವಧಿಯಲ್ಲಿ ಗುರುವಿನ ನಾಲ್ಕು ಉಪಗ್ರಹಗಳಾದ ಗೆಲಿಲಿಯನ್, ಗ್ಯಾನ್‌ಮೀಡ್, ಇಯೋ ಹಾಗೂ ಕೆಲಿಸ್ಟೋಗಳನ್ನು ವಿವರವಾಗಿ ಅನ್ವೇಷಿಸುತ್ತದೆ. ಹಿಂದಿನ ನೌಕೆಗಳು ರವಾನಿಸಿದ ಚಿತ್ರಗಳಿಗಿಂತ ಐವತ್ತು ಪಟ್ಟು ಉತ್ತಮ ಚಿತ್ರಗಳನ್ನು ಗೆಲಿಲಿಯೋ ರವಾನಿಸಬಲ್ಲುದು. ಈ ವಿವರ ಮಾಹಿತಿಗಳಿಂದ ನಿಗೂಢವಾದ ಗುರುಗ್ರಹ ತನ್ನೆಲ್ಲಾ ಸ್ವರೂಪವನ್ನು ನಮಗೆ ತೆರೆದಿಡಲಿದೆ.

ಮುನ್ನೂರೆಂಭತ್ತು ವರ್ಷಗಳ ಹಿಂದೆ ಗೆಲಿಲಿಯೋ ಖಗೋಲ ಶಾಸ್ತ್ರದ ಅಧ್ಯಯನದಲ್ಲಿ ಕ್ರಾಂತಿಕಾರಕ ಹೆಜ್ಜೆ ಇರಿಸಿದ. ಇಂದು ಈ 'ಗೆಲಿಲಿಯೋ' ಮತ್ತೊಂದು ಕ್ರಾಂತಿಕಾರಕ ಹೆಜ್ಜೆ ಇಡಲಿದೆ. *

## *ಗೆಲಿಲಿಯೋ (1564-1642)*

*ಗೆಲಿಲಿಯೋ ಬದುಕು ವಿಸಂಗತಿಗಳ ಮಾಲೆ.*

*ಹದಿನೇಳನೇ ವಯಸ್ಸಿನಲ್ಲಿ ವೈದ್ಯಕೀಯ ಕಲಿಯಲು ಪೀಸಾ ವಿಶ್ವವಿದ್ಯಾನಿಲಯ ಸೇರಿದ. ಆತನ ಆಸಕ್ತಿ ತೀವ್ರವಾದ್ದು ಗಣಿತದಲ್ಲಿ. ಕಾಲೇಜು ಬಿಟ್ಟು ಫ್ಲಾರೆನ್ಸ್‌ನಲ್ಲಿ ಖಾಸಗಿಯಾಗಿ ಪಾಠ ಹೇಳತೊಡಗಿದ. ಅವನನ್ನು ಪೀಸಾ ವಿಶ್ವವಿದ್ಯಾನಿಲಯದ ಗಣಿತ ಪ್ರಾಧ್ಯಾಪಕನಾಗಿ ನೇಮಕ ಮಾಡಿದರು.*

*ಗಣಿತದ ಆಧಾರದಿಂದ ಚಲನೆಯ ತತ್ವಗಳನ್ನು ಅಭ್ಯಸಿಸಿದ. ಮೇಲಿಂದ ಬೀಳುವ ವಸ್ತುಗಳ ತೂಕಕ್ಕೆ ಅದರ ಕುಸಿತದ ವೇಗ ಅನುಗುಣ ಆಗಿರುವುದಿಲ್ಲ ಎಂದು ನಿರೂಪಿಸಿದ.*

*ಇಪ್ಪತ್ತೆರಡನೆಯ ವಯಸ್ಸಿಗೆ ಪಡುವಾ ವಿಶ್ವವಿದ್ಯಾನಿಲಯದ ಗಣಿತ ಪ್ರಾಧ್ಯಾಪಕನಾದ. ಗ್ರಹಗಳ, ಸೌರವಸ್ತುಗಳ ಚಲನೆ ಅವನ ಸಂಶೋಧನೆಯ ವಸ್ತುವಾದವು. ಯಂತ್ರಗಳು ಶಕ್ತಿಯನ್ನು ಉತ್ಪಾದಿಸುವುದಿಲ್ಲ, ವರ್ಗಾಯಿಸುತ್ತವೆ ಎಂಬ ತತ್ವ ನಿರೂಪಿಸಿದ.*

*ನಲವತ್ತೈದನೆಯ ವಯಸ್ಸಿಗೆ ದೂರದರ್ಶಕದಿಂದ ಚಂದ್ರನ ಮೈಮೇಲಿನ ಬೆಟ್ಟಗುಡ್ಡಗಳನ್ನು ಕಂಡುಕೊಂಡ. ಮರುವರ್ಷ ಅವನನ್ನು ಫ್ಲಾರೆನ್ಸಿನ ಆಸ್ಥಾನ ವಿದ್ವಾಂಸನಾಗಿ ನೇಮಕ ಮಾಡಲಾಯಿತು. ಸಂಶೋಧನೆಗೆ ಅನುವು ಮಾಡಿಕೊಡುವುದು ಉದ್ದೇಶ.*

*1632ರಲ್ಲಿ ಗೆಲಿಲಿಯೋ ರಚಿಸಿದ 'ಡಯಲಾಗ್' ಕೃತಿಯ ವಸ್ತು ಗ್ರಹಗಳ ಚಲನೆ. ಆತನ ಬಾಲ್ಯದ ಸ್ನೇಹಿತ ಮಾಫೆಯೋ ಬಾರ್ಬ್‌ರೆನಿ ಈ ಹೊತ್ತಿಗೆ ರೋಮನ್ ಚರ್ಚ್‌ನ ಪೋಪ್ ಆಗಿದ್ದ. ಗೆಲಿಲಿಯೋ ವಿಚಾರಗಳು ಧರ್ಮಬಾಹಿರವೆಂದು ರೋಮನ್ ಚರ್ಚ್ ಸಾರಿತು. ಭೂಮಿ ಸೂರ್ಯನ ಸುತ್ತ ಸುತ್ತುತ್ತದೆ, ಅದು ಚಪ್ಪಟೆ ಅಲ್ಲ, ಗುಂಡಾಗಿದೆ ಎನ್ನುವ ನಿಲುವು ಬೈಬಲ್ ವಿರುದ್ಧವೆಂದು ತೀರ್ಮಾನಿಸಿ ಗೆಲಿಲಿಯೋನನ್ನು ಸೆರೆಗೆ ಹಾಕಲಾಯಿತು. 'ಡಯಲಾಗ್' ಕೃತಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಯಿತು. ಯಾರೂ ಅದನ್ನು ಪ್ರಕಟಿಸಬಾರದೆಂದು ಶಾಸನವಾಯಿತು.*

*ಆದರೆ ಇಟಲಿಯ ಹೊರಗಿನ ಎಲ್ಲ ಯೂರೋಪಿಯನ್ ವಿದ್ವಾಂಸರು 'ಡಯಲಾಗ್' ಕೃತಿಯನ್ನು ತಮ್ಮ ತಮ್ಮ ಭಾಷೆಗಳಲ್ಲಿ ಹೊರತಂದರು.*

*ಬಹುಬೇಗ ಗೆಲಿಲಿಯೋನ ಸೆರೆವಾಸ ಬದಲಾಗಿ, ಆತ ಗೃಹಬಂಧಿಯಾಗಿ ಇರಬೇಕಾಯಿತು. ಆತನ ಮೂಲ ಚಿಂತನೆಗಳಿಂದ ಆಧುನಿಕ ಭೌತಶಾಸ್ತ್ರದ ರೆಂಬೆ ಕೊಂಬೆಗಳು ಚಿಗಿತವು.* *

# 'ಶಬ್ದಂ' ಶರಣಂ ಗಚ್ಛಾಮಿ



• ಸಿದ್ದೇಶ್ವರ ಕಟಕೋಳ್ •

'ಶಬ್ದ' ಎರಡಕ್ಷರದ ಜೋಡಿಯಾಗಿರಬಹುದು. ಆದರೆ 'ಶಬ್ದ'ದ ಮಹಿಮೆ ವ್ಯಕ್ತಿಯ ಹಾಗೆ. ಹಲವು ಅರ್ಥಗಳನ್ನು ಎರಕ ಹೊಯ್ಯಬಹುದು. ಶಬ್ದ ಬಾಂಬಿನ ಹಾಗೆ ಸಿಡಿಯಬಹುದು. ಹಾವಿನ ಹಾಗೆ ಬುಸುಗುಟ್ಟಬಹುದು. ಗಾಂಧೀಜಿಯ 'ಸತ್ಯಾಗ್ರಹ, ಅಹಿಂಸೆ, ಅಸಹಕಾರ' ಶಬ್ದಗಳೇ ಬ್ರಿಟಿಷರನ್ನು ನಡುಗಿಸಿಬಿಟ್ಟವು. ವಿವೇಕಾನಂದರ 'ಏಳಿ, ಎದ್ದೇಳಿ' ರೋಮಾಂಚನವನ್ನುಂಟುಮಾಡಿತು.

ಮನುಷ್ಯನಿಗೆ ನಿತ್ಯ ವ್ಯವಹಾರಕ್ಕೆ ಎರಡು ಸಾವಿರ ಶಬ್ದಗಳು ಸಾಕಂತೆ. ಆದರೆ ಪ್ರಯತ್ನಪಟ್ಟರೆ ಅವನು ಅದರ ಐವತ್ತರಷ್ಟು, ಅಂದರೆ ಒಂದು ಲಕ್ಷ ಶಬ್ದಗಳನ್ನು ಕಲಿಯಬಲ್ಲ. ತರಬೇತಿ ಕೊಟ್ಟರೆ, ಒಂದು ಮಂಗವೂ ಎರಡು ಸಾವಿರ ಶಬ್ದಗಳನ್ನು ಕಲಿಯಬಲ್ಲದು. ಪ್ರಾಣಿವರ್ಗದಲ್ಲಿ ಮಾತು ಮಾನವನಿಗೆ ದೊರೆತ ವಿಶೇಷ ಕೊಡುಗೆ. ನಮ್ಮ ಮಿದುಳಿನಲ್ಲಿ ಶಬ್ದಗಳನ್ನು ಸ್ವೀಕರಿಸುವ ಅಭಿವ್ಯಕ್ತಿಸುವ ಕ್ರಿಯಾತ್ಮಕ ಕೇಂದ್ರಗಳಿವೆ. ವಿಜ್ಞಾನಿಗಳು ಹೇಳುವ ಹಾಗೆ ನಾವು ಸೌರಶಕ್ತಿಯಂತೆ ಮಿದುಳಿನ ಶಕ್ತಿಯ ಸ್ವಲ್ಪವೇ ಭಾಗವನ್ನು ಉಪಯೋಗಿಸಿಕೊಳ್ಳುತ್ತೇವಂತೆ. ಆದ್ದರಿಂದ ನಮ್ಮ ಶಬ್ದಕೋಶದ ವಿಸ್ತಾರ ನಾವು ಮಿದುಳಿಗೆಷ್ಟು ಕೆಲಸ ಕೊಡುತ್ತೇವೆಂಬುದನ್ನು ತಿಳಿಸುತ್ತದೆ.

ಉನ್ನತ ಸ್ಥಾನದಲ್ಲಿರುವ ವ್ಯಕ್ತಿಗಳ ಯಶಸ್ಸಿನಲ್ಲಿ ಒಂದು ಮುಖ್ಯ ಗುಟ್ಟಿದೆ. ಅದೇ ಅವರ ಪದಶಕ್ತಿ ಅಥವಾ ಶಬ್ದಕೋಶ! ಒಬ್ಬ ರ್‍ಯಾಂಕ್ ವಿಜೇತ, ಐ.ಎ.ಎಸ್. ಅಧಿಕಾರಿ, ಖ್ಯಾತ ಉದ್ಯಮಿ, ಉನ್ನತ ಬ್ಯಾಂಕ್ ಅಧಿಕಾರಿ, ಶ್ರೇಷ್ಠ ಬರಹಗಾರ– ವ್ಯಕ್ತಿಯ ಕ್ಷೇತ್ರ ಯಾವುದೇ ಇರಲಿ, ಅವರನ್ನು ಸಾಧನೆಯ ಶಿಖರಕ್ಕೇರಿಸುವುದರಲ್ಲಿ ಶಬ್ದಶಕ್ತಿ ವಹಿಸುವ ಪಾತ್ರ ಅವರಿಗೇ ತಿಳಿದಿರಲಿಕ್ಕಿಲ್ಲ. ಬಾಲ್ಯದಲ್ಲಿ ನಮ್ಮ ಶಬ್ದ ಕಲಿಕೆಯ ವೇಗ ವರ್ಷಕ್ಕೆ 5000 ಆಗಿದ್ದರೆ 20ನೇ ವಯಸ್ಸಿನ ನಂತರ ಅದೇ ವೇಗ ಕೇವಲ 50! ಆದ್ದರಿಂದ ಪ್ರತಿಯೊರ್ವ ವ್ಯಕ್ತಿಯು ಎರಡನೇ ದಶಕಕ್ಕೆ ಕಾಲಿಟ್ಟಾಗಿನಿಂದ 'ಶಬ್ದಗಳ' ಬಗ್ಗೆ ತೀವ್ರವಾಗಿ ಯೋಚಿಸಬೇಕು. ಶಬ್ದಕೋಶದ ನಿಲ್ಲದ ಬೆಳವಣಿಗೆಗೆ ಮತ್ತು ಆ ಮೂಲಕ ಸ್ವಾಭಿವೃದ್ಧಿಗಾಗಿ ವಿಶೇಷ ಹಾಗೂ ಶಾಸ್ತ್ರೀಯ ಯೋಜನೆಗಳನ್ನು ಹಾಕಿಕೊಳ್ಳಬೇಕು.

ಅಭಿವ್ಯಕ್ತಿ ಸ್ವಾತಂತ್ರ್ಯ ನಮಗೆ ಸಂವಿಧಾನ ಕೊಟ್ಟ ಹಕ್ಕು. ಅದು ಭಾಷೆ ಅಥವಾ ಬರಹದ ಮೂಲಕ. ಶಬ್ದಗಳು ಅವೆರಡಕ್ಕೂ ಮೂಲಮಾನ. ಶಬ್ದಗಳಿಂದ ನೀವು ಏನೆಲ್ಲ ಮಾಡಬಲ್ಲಿರಿ? ಶಬ್ದಗಳು ಸಂಪರ್ಕ ವ್ಯವಹಾರದ ಮಾಧ್ಯಮಗಳು. ಶಬ್ದಗಳಿಂದ ನೀವು ಅನಿಸಿಕೆ, ಭಾವನೆ, ವಿಚಾರಗಳನ್ನು ಜನರಿಗೆ ತಲುಪಿಸುತ್ತೀರಿ; ಪಡೆದುಕೊಳ್ಳುತ್ತೀರಿ, ಪ್ರಚೋದಿಸುತ್ತೀರಿ, ಪ್ರಭಾವಿಸುತ್ತೀರಿ. ಶಬ್ದಗಳು ನಿಮ್ಮ ವ್ಯಕ್ತಿತ್ವದ ಅಭಿವ್ಯಕ್ತಿ. ನಿಮ್ಮ ಶಬ್ದಕೋಶ ಎಂದರೆ ನೀವೇ! YOUR VOCABULARY IS YOU.

ಶಬ್ದಗಳು ನಿಮ್ಮ ತಿಳುವಳಿಕೆ, ವಿಚಾರಗಳ ಸಂಕೇತಗಳು, ಸಲಕರಣೆಗಳು ಸಹ. ನಿಮ್ಮ ಶಬ್ದಕೋಶ ದೊಡ್ಡದಿದ್ದಷ್ಟೂ, ನೀವು ಹೆಚ್ಚು ಪ್ರಜ್ಞಾವಂತರು, ವಿಚಾರವಾದಿಗಳು. ಅದಕ್ಕೇ ನಿಮ್ಮ IQ (ಬುದ್ಧಿ ಮಟ್ಟ) ನಿಮ್ಮ ಶಬ್ದಶಕ್ತಿಯ ಮೇಲೂ ಅವಲಂಬಿಸಿದೆ.

ಶಬ್ದಗಳನ್ನು ಕಲಿಯುವುದು ಎಂದರೆ ನಿಮ್ಮ ಜ್ಞಾನೇಂದ್ರಿಯಗಳನ್ನು ಚುರುಕಾಗಿಟ್ಟಂತೆ, ಕ್ಷಣ-ಕ್ಷಣಕ್ಕೂ ವಾತಾವರಣಕ್ಕೆ ಮೈ-ಮನಗಳಲ್ಲಿ ಕಣ್ಣು ಕಿವಿಯಾಗಿಸಿದ ಹಾಗೆ. ಶಬ್ದಗಳ ಕಲಿಕೆ ಎಂದರೆ ನಿರಂತರ ಸ್ವತಂತ್ರ ಶಿಕ್ಷಣ.

ಶಬ್ದಗಳು ಮತ್ತು ಭಾಷೆಯ ಪರಿಣಾಮ, ಅರ್ಥ ವಿಚಾರ, ಮನೋವೈಜ್ಞಾನಿಕ ಕಾರಣಗಳನ್ನು ಅಭ್ಯಸಿಸಲು ಒಂದು ವಿಶೇಷ ಶಾಸ್ತ್ರವೇ ಇದೆ. ಇದನ್ನು SEMATICS ಎನ್ನುತ್ತಾರೆ. ಕನ್ನಡದಲ್ಲಿ 'ಶಬ್ದ ಮನೋವಿಜ್ಞಾನ' ಎನ್ನಬಹುದು.

ಶಬ್ದ ಎಂದರೆ ಒಂದು ನಿರ್ದಿಷ್ಟ ಅರ್ಥವಿರುವ ಅಕ್ಷರಗಳ ಕ್ರಮ ವಿನ್ಯಾಸ. ಆದರೆ ಶಬ್ದಗಳೇನು ನಿರ್ಜೀವ ವಸ್ತುಗಳಲ್ಲ. ಶಬ್ದಗಳು ಹುಟ್ಟುತ್ತವೆ, ಬೆಳೆಯುತ್ತವೆ, ಸಾಯುತ್ತವೆ. ಕೆಲವೊಮ್ಮೆ ಪುನರ್ಜನ್ಮ ಪಡೆದು ಬಂದ ಉದಾಹರಣೆಗಳೂ ಇವೆ. 'ಹೂಬಳ್ಳಿ' ಬೆಳೆದು ಪ್ರಾಯಕ್ಕೆ ಬಂದು ದನಿಯೊಡೆದು 'ಹುಬ್ಬಳ್ಳಿ' ಯಾಯಿತು. ಶಬ್ದಗಳು ಹಸಿರಿನಿಂದ ಥಳಥಳಿಸುವ ಗಿಡಗಳು. ಶಬ್ದಗಳಿಗೆ ಬೇರುಗಳಿವೆ, ರೆಂಬೆಕೊಂಬೆಗಳಿವೆ, ಎಲೆಗಳೂ ಇವೆ.

ಶಬ್ದಗಳ ಬೇರುಗಳ (ROOTS) ಅಂದರೆ ಅವುಗಳ ಮೂಲಗಳ ಅಭ್ಯಾಸಕ್ಕೆ ಇಂಗ್ಲೀಷ್‌ನಲ್ಲಿ 'ETYMOLOGY' ಎನ್ನುತ್ತಾರೆ. (ಗ್ರೀಕ್‌ನ ETYMON ಎಂದರೆ 'ನಿಜವಾದ ಅರ್ಥ' ಅಥವ 'ಮೂಲ' ಎಂದು) ಕನ್ನಡದಲ್ಲಿ ಇದನ್ನು ಶಬ್ದ ನಿಷ್ಪತ್ತಿ ಅಥವಾ ವ್ಯುತ್ಪತ್ತಿ ಶಾಸ್ತ್ರ ಎನ್ನುತ್ತಾರೆ.

ಇಂಗ್ಲೀಷಿನ 'CALCULATE' ಎಂಬ ಪದದ ಹುಟ್ಟಿನ ಬಗೆಗೆ ಒಂದು ಆಸಕ್ತಪೂರ್ಣ ಹಿನ್ನೆಲೆಯಿದೆ. ರೋಮನ್ನರು ಪ್ರಯಾಣದ ರಥದ ಗಾಲಿಗೆ ಒಂದು ಬೆಣಚುಕಲ್ಲಿನ ಪೆಟ್ಟಿಗೆಯನ್ನು ಜೋಡಿಸಿರುತ್ತಿದ್ದರು. ರಥದ ಗಾಲಿ ಪ್ರತಿಸಲ ತಿರುಗಿದಾಗ ಒಂದೊಂದು ಕಲ್ಲು ಕೆಳಗಿನ ಮತ್ತೊಂದು ಪೆಟ್ಟಿಗೆಯಲ್ಲಿ ಬೀಳುತ್ತಿತ್ತು. ಪ್ರಯಾಣದ ನಂತರ ಅವರು ಕೆಳಗಿನ ಪೆಟ್ಟಿಗೆಯಲ್ಲಿಯ ಬೆಣಚುಕಲ್ಲುಗಳನ್ನು ಎಣಿಸಿ ರಥದಲ್ಲಿ ಕುಳಿತ ಗಿರಾಕಿಗಳ ಬಿಲ್ ಹೇಳುತ್ತಿದ್ದರು. ಬೆಣಚುಕಲ್ಲಿಗೆ ಲ್ಯಾಟಿನ್ ಪದ CALCULUS (RENAL CALCULUS, BILIARY CALCULUS ಮತ್ತು ಹಿಮ್ಮಡಿ ಮೂಳೆ CALCANEAM ಪದಗಳ ಮೂಲವೂ ಇದೆ.) ಬೆಣಚುಕಲ್ಲುಗಳನ್ನು ಎಣಿಸುವುದಕ್ಕೆ ಅವರು 'CALCULATE' ಎಂದದ್ದು ಇಂಗ್ಲೀಷಿನಲ್ಲಿ ಸೇರಿಹೋಯಿತು.

ಕನ್ನಡದಲ್ಲಿ ಇಂತಹ ಸಾಕಷ್ಟು ಉದಾಹರಣೆಗಳಿವೆ.

ಶಬ್ದಗಳ ಜಗತ್ತು ಎಷ್ಟೊಂದು ಸುಂದರ. ಶಬ್ದಗಳ ಅಕ್ಷರಗಳನ್ನು ಕುತೂಹಲದಿಂದ ನೋಡಿ. ಅವುಗಳ ಉಚ್ಚಾರಗಳನ್ನು ಸಂಗೀತದಂತೆ ಕೇಳಿ. ಶಬ್ದ ಸುಂದರಿಯ ಹೆಸರನ್ನು ಗುಣುಗುಣಿಸಿ ನೆನಪಿಟ್ಟುಕೊಳ್ಳಿ. ಅವಳ ಸ್ನೇಹ ಮಾಡಿ. ನಂತರ ನೀವಾಗಿಯೇ ಅವಳ ಪ್ರೇಮ ಜಾಲದಲ್ಲಿ ಸಿಲುಕಿಕೊಳ್ಳುತ್ತೀರಿ.

ಸಾವಿರ ಶಬ್ದಗಳನ್ನು ಕಲಿತ ನಂತರ ನೀವು ನೀವೇ ಆಗಿರುವುದಿಲ್ಲ. ವೈಚಾರಿಕ ವಾತಾವರಣದಲ್ಲಿ ವಿಹರಿಸುತ್ತೀರಿ. ಅದನ್ನು ನೀವೇ ಕಂಡುಕೊಳ್ಳುವಿರಿ ಕೂಡ. ನಿಜವಾಗಿಯೂ ಸಾವಿರ ಮೆಟ್ಟಿಲುಗಳನ್ನು ನಿಮ್ಮ ಜೀವನದಲ್ಲಿ ಏರಿರುತ್ತೀರಿ!

ಇತಿಹಾಸದ ದಿಶೆಯನ್ನು ಬದಲಾಯಿಸಿದ ಶಬ್ದಗಳು ನಿಮ್ಮ ಜೀವನದ ದಿಕ್ಕನ್ನು ಬದಲಾಯಿಸಲಾರವೆ? ನೆನಪಿಡಿ, ಶಬ್ದಗಳ ಚೀಲ ಹಣದ ಚೀಲಕ್ಕಿಂತಲೂ ದೊಡ್ಡದು FIRST MAKE 'WORDS' YOUR SLAVES. THEN YOU CAN MAKE 'WORLD' YOUR SLAVE!

ಶಬ್ದಕೋಶವನ್ನು ಹೇಗೆ ಬಳಸಿಕೊಳ್ಳಬೇಕು? ಶಬ್ದಗಳ ತಜ್ಞ ಕೆಲವೇ ಸರಳ ವೈಜ್ಞಾನಿಕ ವಿಧಾನಗಳನ್ನು ಹೇಳುತ್ತಾರೆ. ಶಬ್ದಗಳನ್ನು ಕಲಿಯುವುದು ನಿಜಕ್ಕೂ ಸುಲಭ.

ಬಾಲ್ಯದಲ್ಲಿ ನಿಮಗೆ ಯಾವ ಕಲಿಯುವಿಕೆಯ 'ಅದಮ್ಯ ಹಸಿವು' ಇತ್ತೋ ಆ ಹಸಿವನ್ನು ಬೆಳೆಸಿಕೊಳ್ಳಿ. ಒಂದು ರೀತಿಯಲ್ಲಿ 'ನಾಚಿಕೆ ಬಿಡಿ.' ಮಗುವಿನಂತೆ 'ಪ್ರಶ್ನೆ ಪೆಟ್ಟಿಗೆ'ಯಾಗಿ. ಅಂದರೆ ಮಾತ್ರ ವೇಗವಾಗಿ ಕಲಿಯಬಲ್ಲಿರಿ. ನಿಮ್ಮ ಓದಿನಲ್ಲಾಗಲೀ, ಸಂಭಾಷಣೆಯಲ್ಲಾಗಲೀ ಹೊಸ

ಅಪರಿಚಿತ ಪದ ಸಿಕ್ಕರೆ ಮೊದಲಿನಂತೆ ಹಾರಿಸಿ ಓದಬೇಡಿರಿ (ನೀವು ಹಾಗೆ ಮಾಡುತ್ತಿದ್ದಿರಲ್ಲವೆ?) ಅಪರಿಚಿತನನ್ನು ನಿಮ್ಮ 'ಹೊಸ ಗೆಳೆಯ' ಎಂದುಕೊಂಡು ಕೆಲಕ್ಷಣ ನಿಂತುಕೊಂಡು ಗುರುತಿಸಿಕೊಳ್ಳಿ. ಪೆನ್ಸಿಲಿನಿಂದಲ್ಲ! (ಬಹಳಷ್ಟು ಜನ ಪೆನ್ಸಿಲ್ ಅಥವಾ ಪೆನ್ನಿನಿಂದ ಅಡ್ಡಗೀಟು ಹಾಕಿ ಗುರುತಿಸುತ್ತಾರೆ. ನಂತರ ಕೆಲವರು ಶಬ್ದಕೋಶ ತೆಗೆದು ಹುಡುಕಿ ಅರ್ಥಗಳನ್ನು ವಿಶೇಷ ಪುಸ್ತಕಗಳಲ್ಲಿ ಬರೆದಿಡುತ್ತಾರೆ) ಇದು ಅವೈಜ್ಞಾನಿಕ ಮತ್ತು ತ್ರಾಸದಾಯಕ. ಓದುತ್ತಿರುವ ವಿಷಯವೇ ಇಷ್ಟರಲ್ಲಿ ನಿಮಗೆ ಮರೆತು ಹೋಗುತ್ತದೆ. ಗೆಳೆಯನನ್ನು ಹೀಗೆ ಹೆದರಿಸಿ ಹಿಂಸಿಸಿದರೆ ಓಡಿ ಹೋಗುತ್ತಾನೆ! ಇದರರ್ಥ ಶಬ್ದಕೋಶ ಉಪಯೋಗಿಸಬಾರದು ಎಂದೇನಲ್ಲ. ಇತ್ತೀಚೆಗಿನ ಒಳ್ಳೆಯ ಶಬ್ದಕೋಶಗಳನ್ನು ನೋಡಿ ಅವುಗಳನ್ನು ಸರಿಯಾಗಿ ಉಪಯೋಗಿಸುವುದನ್ನು ಕಲಿಯಿರಿ. ಅವಶ್ಯವಾದಾಗ ಮಾತ್ರ ಶಬ್ದಕೋಶ ಬಳಸಿ.

ಸರಿ ಶಬ್ದಗಳನ್ನು 'ಮಾನಸಿಕ ಲೇಖನಿ'ಯಿಂದ ಗುರುತಿಸಿ. ಮೊದಲ ಭೇಟಿಯಲ್ಲಿಯೇ ಪೂರ್ತಿ ಅರ್ಥವಾಗಲಿಕ್ಕಿಲ್ಲ, ಪರವಾಗಿಲ್ಲ. ನಂತರ ಆ ಪದ ಒಂದು 'ಅಮೂಲ್ಯ ನಾಣ್ಯ'ವೆಂದುಕೊಂಡು ಅತ್ತಿತ್ತ ಹೊರಳಿಸಿ, ಅಕ್ಷರಕ್ಷರ ಪರೀಕ್ಷಿಸಿ ನೋಡಿ. ಮತ್ತೆ ಆ ಪದವನ್ನು 'ಸುಂದರಿ' ಎಂದುಕೊಂಡು ಅವಳ ಹೆಸರನ್ನು ಗುಣುಗುಣಿಸಿ ಉಚ್ಚಾರ ನೆನಪಿಟ್ಟುಕೊಳ್ಳಿ. ಗುಣುಗುಣಿಸುವುದನ್ನು ಮರೆಯಬೇಡಿ. THE NAME OF A PERSON TO HIM IS THE MOST IMPORTANT AND SWEETEST SOUND IN ANY LANGUAGE -DALE CARNEIGE. ಶಬ್ದ ಕೂಡ ಒಂದು ವ್ಯಕ್ತಿ, ಮತ್ತೆ ಅದೇ ಶಬ್ದ ಬೇರೆ ಬೇರೆ ಸಂದರ್ಭಗಳಲ್ಲಿ ಬಂದಾಗ ನೀವು 'ಹಳೆಯ ಗೆಳೆಯ'ನನ್ನು 'ಹೊಸ ಸ್ಥಾನ'ದಲ್ಲಿ ಭೇಟಿಯಾಗುತ್ತೀರಿ ಅಷ್ಟೆ! ನಾಲ್ಕಾರು ಬಾರಿ ಭೇಟಿಯಾದ ಮೇಲೆ, ನಿಮ್ಮ ಗೆಳೆಯ ನಾಲ್ಕಾರು ಮುಖಗಳಿಂದ ಅರ್ಥವಾಗಿ, ಪರಿಚಿತನಾಗಿ ನಿಮ್ಮ 'ಕ್ರಿಯಾತ್ಮಕ ಶಬ್ದಕೋಶ'ದಲ್ಲಿ ಸೇರಿ ಹೋಗುತ್ತದೆ. ನಿಮಗರಿವಿಲ್ಲದಂತೆ ಆತನು ನಿಮ್ಮ ಮಾತಿನಲ್ಲೋ ಬರಹದಲ್ಲೋ ಹಾರಿ ಬರಬಹುದು. ಆದರೆ ನೆನಪಿಡಿ. ಶಬ್ದಗಳಿಗೆ ನೀವು ಶಕ್ತಿಯುತ ಗ್ರಾಹಕರಾಗಬೇಕು, ಸ್ಪಂದಿಸಬೇಕು. ಶಬ್ದಗಳು ನಿಮ್ಮನ್ನು ಹುಡುಕಿಕೊಂಡು ಸ್ನೇಹ ಮಾಡಲು ಬರುವುದಿಲ್ಲ.

ಹೊಸ ಗೆಳೆಯ ಸಿಕ್ಕಾಗ ನೀವು ಅವನ ಹುಟ್ಟೂರು, ಕುಟುಂಬ ಇತ್ಯಾದಿ ವಿಚಾರಿಸುತ್ತೀರಲ್ಲವೆ? ಹಾಗೆಯೆ, ಹೊಸಶಬ್ದದ ಬೇರು, ರೆಂಬೆ-ಕೊಂಬೆಗಳನ್ನು ತಿಳಿದುಕೊಳ್ಳಲು ಯತ್ನಿಸಿ. ಕೆಲಸಲ ಆತ ನಿಮಗೆ ಹೇಗೋ 'ಸಂಬಂಧಿಕ'ನಾಗಿರಬಹುದು. ಶಬ್ದ ವ್ಯುತ್ಪತ್ತಿ ಶಾಸ್ತ್ರದಿಂದ ನೀವು ಶಬ್ದಗಳನ್ನು ವೇಗವಾಗಿ ಕಲಿಯಬಹುದು.

ಹೆಚ್ಚು ಹೆಚ್ಚು ಓದಿ. ಲೇಖನ ಕಥೆ, ನಗೆ ಲೇಖನ ಎಲ್ಲ ಓದಲೆತ್ನಿಸಿ. ವಿಜ್ಞಾನ, ಕಲೆ, ಸಾಹಿತ್ಯ, ಮನೋವಿಜ್ಞಾನ, ರಾಜಕೀಯ, ಅರ್ಥಶಾಸ್ತ್ರ ಹಲವಾರು ವಿಷಯಗಳ ಬಗ್ಗೆ ತಿಳಿದುಕೊಳ್ಳಲು ಯತ್ನಿಸಿ. ವಾರಕ್ಕೆ ಕನಿಷ್ಠ ಮೂರ್‍ನಾಕು ಬರಹಗಳನ್ನಾದರೂ ಓದಿ.

ಇನ್ನೂ ಕೆಲವು ನವೀನ ಪರಿಣಾಮಕಾರಿ ವಿಧಾನಗಳಿವೆ.

ದಿನಪತ್ರಿಕೆ, ವಾರಪತ್ರಿಕೆಗಳಲ್ಲಿ ಬರುವ 'ಪದಬಂಧ' 'ಶಬ್ದ ವಿನೋದ' ಮುಂತಾದುವುಗಳಲ್ಲಿ ಭಾಗವಹಿಸಿ. ಮೊದ-ಮೊದಲು ಕಷ್ಟವೆನಿಸಿದರೂ ಮುಂದೆ ಮನೋರಂಜಕ ಎನಿಸುವುದು. ನಿಮ್ಮ ಜಾಣತನದ ಪರೀಕ್ಷೆಯೂ ಆಗುವುದು. ಈ ಹವ್ಯಾಸದಿಂದ ಪರಿಚಯ ಶಬ್ದಕೋಶದ ಹಲವಾರು ಶಬ್ದಗಳು 'ಕ್ರಿಯಾತ್ಮಕ ಶಬ್ದಕೋಶ'ಕ್ಕೆ ವರ್ಗಾವಣೆ ಆಗುವುದು. ಅಲ್ಲದೇ ಯಥೇಚ್ಛವಾಗಿ ಶಬ್ದಗಳನ್ನು ಕಲಿಯಬಹುದು. *

(ಸ್ವಾತಿ ಸಿಂಡಿಕೇಟ್ಸ್)

ಮಹಾನ್ ಕಾರ್ಯಗಳನ್ನು ಮಾಡುವಷ್ಟು ನಾವು ದೊಡ್ಡವರಲ್ಲದಿರಬಹುದು. ಆದರೆ ಸಣ್ಣ ಕಾರ್ಯಗಳನ್ನೇ ಮಹತ್ವಪೂರ್ಣವಾಗಿ ಮಾಡಲು ಅಡ್ಡಿಯೇನಿದೆ!

● ನೆಪೋಲಿಯನ್ ಹಿಲ್

## ಜೀವನ ದರ್ಶನ-4 ★ ಕೆ.ಟಿ. ಪಾಂಡುರಂಗಿ

# ಜನಪ್ರಿಯತೆ

**ಜೀ**ವನದಲ್ಲಿ ಜನಪ್ರಿಯತೆಯು ತುಂಬ ಅಗತ್ಯ ಮತ್ತು ಉಪಯುಕ್ತ. ಎಂಥ ಸಾಮಾನ್ಯ ವ್ಯಕ್ತಿಯಾದರೂ ತನ್ನ ಸುತ್ತ ಮುತ್ತಲಿನ ಕೆಲವು ಜನರ ಪ್ರೀತಿಯನ್ನು ಸಂಪಾದಿಸಬೇಕಾಗುತ್ತದೆ. ಜನಪ್ರಿಯತೆಯು 2 ಕಾರಣಗಳಿಗಾಗಿ ಅಗತ್ಯವಿದೆ. ಒಂದು ನಮ್ಮ ವಿಷಯದಲ್ಲಿ ನಮಗೇ ಆದರಬುದ್ಧಿಯಿರ ಬೇಕಾದರೆ ನಾವು ಕೆಲವರಿಗಾದರೂ ಪ್ರಿಯರಾಗಿದ್ದೇವೆ ಎಂಬ ಅರಿವು ಅಗತ್ಯ. ಇನ್ನೊಂದು ಅಗತ್ಯ ಬಿದ್ದಾಗ ನೆರವಾಗಲು ಕೆಲವರಿರುವರು ಎಂಬ ವಿಶ್ವಾಸಕ್ಕಾಗಿಯೂ ಜನಪ್ರಿಯತೆ ಅಗತ್ಯ.

ಜನಪ್ರಿಯತೆಯನ್ನು ಸಂಪಾದಿಸಲು ಎರಡು ಉಪಾಯಗಳು ಮುಖ್ಯ. ಒಂದು ನಮ್ಮಲ್ಲಿ ಯಾವುದಾದರೂ ಒಂದು ಉತ್ತಮ ಗುಣಶಕ್ತಿ ಸಾಹಸ ಬೆಳೆಸಿಕೊಂಡು ಅದನ್ನು ಮೆಚ್ಚುವ ಜನರಿಂದ ಪ್ರೀತಿಯನ್ನು ಸಂಪಾದಿಸುವುದು. ಇನ್ನೊಂದು ನಮ್ಮ ಸಂಪರ್ಕ ಬರುವ ಜನರಿಗೆ ಯಾವುದಾದರೊಂದು ರೀತಿಯಿಂದ ಉಪಯೋಗಬಿದ್ದು ಉಪಕಾರ ಮಾಡಿ ಜನಪ್ರಿಯತೆಯನ್ನು ಸಂಪಾದಿಸುವದು.

ಸಾಮಾನ್ಯರು ಹೀಗೆ ಜನಪ್ರಿಯತೆಯನ್ನು ಸಂಪಾದಿಸಿಕೊಂಡರೆ ಮುಖಂಡತ್ವದ ಹವ್ಯಾಸವಿರುವವರು ಇನ್ನೊಂದು ರೀತಿಯಿಂದ ಜಪ್ರಿಯತೆಯನ್ನು ಸಂಪಾದಿಸಿಕೊಳ್ಳುತ್ತಾರೆ. ಅವರ ಸಾಧನಗಳಲ್ಲಿ ಪ್ರಚಾರವೂ ಒಂದು ಮುಖ್ಯ ಸಾಧನ. ತಮ್ಮ ಕಾರ್ಯಶಕ್ತಿ. ಸಾಹಸ ಮತ್ತು ಬಹು ಜನರ ಕಾರ್ಯ ಮಾಡುವ ಉದ್ದೇಶ ಇವುಗಳ ಪ್ರಚಾರ ಮಾಡುತ್ತಾರೆ. ಕೆಲವನ್ನು ಮಾಡಿಯೂ ತೋರಿಸುತ್ತಾರೆ. ಹೀಗೆ ಮಾಡುವಾಗ ಜನರಿಗೆ ಆಕರ್ಷಕವಾದುವುಗಳನ್ನೂ, ಬಹು ಜನರಿಗೆ ಮುಟ್ಟುವಂಥವನ್ನೂ ಮೊದಲು ಮಾಡುತ್ತಾರೆ. ನಮ್ಮ ದೇಶದ ಓರ್ವ ಮುಖಂಡರು ಪ್ರತಿ-ನಿತ್ಯ ಬಂದ ಬಡವರಿಗೆಲ್ಲಾ ಸ್ವಲ್ಪ ಹಣ ಕೊಡುತ್ತಿದ್ದರು. ಕಷ್ಟವನ್ನು ತೋಡಿಕೊಂಡವರಿಗೆಲ್ಲಾ ಮನಿಯಾರ್ಡರು ಕಳುಹಿಸುತ್ತಿದ್ದರು. ಇನ್ನೂ ಅನೇಕ ಬಡವರಿಂದ ಮೆಚ್ಚುಗೆಯನ್ನು ಪಡೆದಿದ್ದರು. ಆದರೆ ಅವರು ಸಂಗ್ರಹಿಸುವ ಹಣ ವಾಮ ಮಾರ್ಗಗಳಿಂದ ಕೂಡಿದ್ದಾಗಿತ್ತು. ಅವರು ಸಿರಿವಂತರೊಡನೆ ಅನೇಕ ವಿಷಯಗಳಲ್ಲಿ ಶಾಮೀಲಾಗಿರುತ್ತಿದ್ದರು.

ಇನ್ನು ಕೆಲವರು ಒಂದು ತತ್ವ ಅಥವಾ ಒಂದು ಆದರ್ಶಕ್ಕಾಗಿ ಹೋರಾಡಿ ಆ ತತ್ವ ಮತ್ತು ಆದರ್ಶಗಳತ್ತ ಅನೇಕ ಜನರನ್ನು ಸೆಳೆದು ಜನಪ್ರಿಯರಾಗುವರು. ಗಾಂಧೀಜಿಯವರ ಜನಪ್ರಿಯತೆ ಇಂಥ ಜನ ಪ್ರಿಯತೆಯಾಗಿತ್ತು.

ಇವುಗಳಲ್ಲಿ ಪ್ರಚಾರದಿಂದ ಸಂಪಾದಿಸಿದ ಜನಪ್ರಿಯತೆ-ಕೊನೆಯವರೆಗೆ ನಿಲ್ಲುವುದಿಲ್ಲ. ಅದರಿಂದ ಲೋಕಕ್ಕೆ ಹಿತವೂ ಆಗುವುದಿಲ್ಲ. ಒಂದು ಕಡೆಯಿಂದ ಕೆಲವು ಜನಪ್ರಿಯತೆಯ ಕಾರ್ಯಗಳು ಇನ್ನೊಂದು ಕಡೆಯಿಂದ ಲೋಕವಂಚನೆಯ ಕಾರ್ಯಗಳು ಇದರಿಂದಲೂ ಲೋಕಕ್ಕೆ ಹಿತವಾಗುವುದಿಲ್ಲ. ಇಂಥ ಜನಪ್ರಿಯತೆಯೂ ಬಹುಕಾಲ ಬಾಳುವದಿಲ್ಲ.

ಸಾಮಾನ್ಯರಾಗಲೀ ಮುಖಂಡತ್ವದ ಆಸೆಯುಳ್ಳವರಾಗಲೀ ನಮಗೆ ಜನಪ್ರಿಯತೆಯೇ ಬೇಡವೆನ್ನುವುದು ಸರಿಯಲ್ಲ. ಜನಪ್ರಿಯತೆಯು ನಮ್ಮ ವ್ಯಕ್ತಿತ್ವದ ಸತ್ವದ ಮಾನದಂಡ. ಈ ಮಾನದಂಡವನ್ನು ಉಪಯೋಗಿಸಿಕೊಂಡು ನಮ್ಮ ವ್ಯಕ್ತಿತ್ವದ ವಿಷಯದಲ್ಲಿ ನಾವೂ ಆದರವುಳ್ಳವರಾಗಿ ಬೇರೆಯವರಿಂದಲೂ ಆದರವನ್ನು ಪಡೆದು ಜೀವನದ ಉಲ್ಲಾಸವನ್ನು ಹೆಚ್ಚಿಸಿಕೊಳ್ಳುವದು ಉತ್ತಮ. ಆದರೆ ಉತ್ತಮ ಗುಣ ಮತ್ತು ಉತ್ತಮ ಕಾರ್ಯ ಮಾಡಿ ಜನಪ್ರಿಯತೆಯನ್ನು ಪಡೆಯಬೇಕು. *

# ಅನಿಸಿಕೆ

# ಚಂದ್ರ ಮತ್ತು ಅರಿವು

ನಮಗೀಗ ಚಂದ್ರ ಭೂಮಿಯ ಉಪಗ್ರಹ ಮಾತ್ರ. ನಮಗೂ ಅದಕ್ಕೂ ಅಂತರ ಮೂರೂವರೆ ಲಕ್ಷ ಮೈಲಿಗಳು. ಬೇಕೆಂದರೆ ಮನುಷ್ಯ ಚಂದ್ರನಲ್ಲಿಗೆ ಹೋಗಬಲ್ಲ. ಅವರ ನೆಲದ ಮೇಲೆ ನಡೆದಾಡಬಲ್ಲ. ನನ್ನ ಮಗುವಿಗೆ ಪಾಠ ಹೇಳುತ್ತಾ ಈ ಎಲ್ಲ ವಿವರ ನೀಡುವಾಗ ನನಗೆಲ್ಲೋ ನೋವಾಗುತ್ತದೆ. ಆ ಪದಗಳು ನಿರ್ಜೀವ ಶಬ್ದಗಳು ಎನಿಸುತ್ತವೆ.

ಮಗುತನದ ನೆನಪಾಗುತ್ತದೆ.

ಆಕಾಶದ ಚಂದ್ರನನ್ನು ತೋರಿಸುತ್ತಾ ಕಲೆಸಿದ ತುತ್ತು ಬಾಯಿಗಿಡುತ್ತಿದ್ದಳು ತಾಯಿ. "ಚಂದಮಾಮ ಬಾ-ಬಾ" ಎಂದು ಕರೆಯುವಂತೆ ಉತ್ತೇಜಿಸುತ್ತಿದ್ದಳು. "ದ...ದ...." ಎನ್ನುತ್ತಾ ಮಡಿಸಿ ತೆರೆಯುತ್ತಿದ್ದ ನನ್ನ ಮೃದು ಬೆರಳುಗಳನ್ನು ನೋಡಿ ಆಕೆಗೆ ಎಲ್ಲಿಲ್ಲದ ಹಿಗ್ಗು. ಒಮ್ಮೊಮ್ಮೆ ನಿದ್ದೆ ಬಾರದೆ ರಚ್ಚೆ ಹಿಡಿದಾಗ ಅಂಗಳಕ್ಕೆ ಕರೆತಂದು ಚಂದ್ರಾಮನನ್ನು ತೋರುತ್ತಾ ಸಮಾಧಾನಿಸುತ್ತಿದ್ದಳು. ಹೆಗಲ ಮೇಲೆ ಮಲಗಿಸಿಕೊಂಡು ಚಕ್ಕು ಬಡಿಯುತ್ತಾ ಕಾಗೆ ಗುಬ್ಬಿ ಕಥೆ ಹೇಳುತ್ತಿದ್ದಳು. "ಒಂದೂರಲ್ಲಿ...." ಎಂದು ಆರಂಭವಾಗುತ್ತಿದ್ದ ಆ ಕಥೆ ಕೇಳಲು ಬಟ್ಟಲ ಹಾಗೆ ತೆರೆದುಕೊಂಡ ಕಣ್ಣಲ್ಲಿ ಎಂಥ ಕುತೂಹಲ. "ಅಲ್ಲಿ ಅವರು ಸುಖವಾಗಿದ್ದರು. ಇಲ್ಲಿ ನಾವು..." ಎಂದೇ ಎಲ್ಲ ಕಥೆ ಮುಗಿಯುತ್ತಿತ್ತು. ಶಾಲೆಗೆ ಸೇರಿದ ಮೇಲೆ "ಚಂದಿರನೇತಕೆ ಓಡುವನಮ್ಮ? ಮೋಡಕೆ ಹೆದರಿಹನೇ?" ಪದ್ಯ ನನ್ನ ಕಾಡಿತ್ತು. ರಾತ್ರಿ ಮೋಡಗಳ ಮರೆಯಲ್ಲಿ ಚಂದ್ರ ಓಡುವುದನ್ನು ನಿಟ್ಟಿಸುತ್ತಾ ನಿಲ್ಲುತ್ತಿದ್ದೆ. ಅಪ್ಪ, ಅಮ್ಮನನ್ನು ನೂರೆಂಟು ಪ್ರಶ್ನೆಗಳಿಂದ ಪೀಡಿಸುತ್ತಿದ್ದೆ.

ಮಾಧ್ಯಮಿಕ ಶಾಲೆಯಲ್ಲಿ ಚಂದ್ರನ ಮೇಲೊಂದು ಪ್ರಬಂಧ ಬರೆದು ಬಹುಮಾನ ಗಿಟ್ಟಿಸಿದ್ದೆ. ಅಣ್ಣ ಹೇಳುತ್ತಿದ್ದ ಕುವೆಂಪು ಕವನದ ಸಾಲು "ಎಷ್ಟೇ ತಿಂದರು ಖರ್ಚೇ ಆಗದ ದೇವರ ಪೆಪ್ಪರಮೆಂಟಮ್ಮಾ" ಎನ್ನುವ ಸಾಲು ಪ್ರಬಂಧದಲ್ಲಿ ಸೇರಿಸಿದ್ದೆ.

ರಜೆಯ ದಿನ ಬಂದರೆ ಅಜ್ಜನ ಮನೆಗೆ ಓಡುವ ಹಿಗ್ಗು. ಅಲ್ಲಿ ಸಿಗುತ್ತಿದ್ದ 'ಚಂದಮಾಮ' ಓದಲು ನಮ್ಮೊಳಗೇ ಪೈಪೋಟಿ, ಜಗಳ ಕೂಡ. ಹುಣ್ಣಿಮೆಯ ದಿನ ತಿಂಗಳೂಟದ ಸಡಗರ. ಆ ಬೆಳಕಿನ ಧಾರೆ, ಮನೆಯ ಎಲ್ಲರೂ ಒಗ್ಗೂಡಿ ಊಟ ಮಾಡುವ ಸಂಭ್ರಮ. ಅಜ್ಜಿ ನೀಡುತ್ತಿದ್ದ ಕೈತುತ್ತು.

ಹೈಸ್ಕೂಲು ದಾಟುವ ಹಂತಕ್ಕಾಗಲೇ ಕಾದಂಬರಿಗಳ ಭಾವ ಪ್ರಪಂಚ ತೆರೆದುಕೊಂಡಿತ್ತು. "ಚಂದ್ರಮುಖಿ" ಎನ್ನುವ ಪ್ರಿಯನುಡಿ ಭ್ರಾಮಕ ಕಲ್ಪನೆ ಎನಿಸಿರಲಿಲ್ಲ. ಹಾಗೆನಿಸಿಕೊಳ್ಳುವ ಸುಂದರ ನಿರೀಕ್ಷೆ ಅರಳುತ್ತಿತ್ತು. ಬೆಳದಿಂಗಳಲ್ಲಿ ತೇನೆಹಕ್ಕಿ ವಿಹರಿಸುತ್ತದೆಂದು ಓದಿದಾಗ ಕುತೂಹಲ. ತೇನೆ ಹಕ್ಕಿ ಕಾಣಲೆಂದು ಬೆಳದಿಂಗಳ ರಾತ್ರಿಯಲ್ಲಿ ಕಿಟಕಿಯಲ್ಲಿ ಮುಖವಿರಿಸಿ ಕಾಯುತ್ತ ಕುಳಿತಿದ್ದೆ. ನೀಲ್ ಆರ್ಮ್‌ಸ್ಟ್ರಾಂಗ್ ಚಂದ್ರನ ಮೇಲೆ ಕಾಲಿರಿಸಿದ ದಿನ ನನಗೂ ಥ್ರಿಲ್ ಎನಿಸಿತ್ತು. ಆದರೆ....

ಎಳೆತನದಲ್ಲಿ ಸುಂದರ ಭಾವವಾಗಿದ್ದ ಚಂದ್ರ ಈಗ ಕಟು ವಾಸ್ತವ. *Ignorance is bliss* ಅನ್ನುತ್ತಾರೆ. ನನ್ನ ಮಗುತನದ ಮುಗ್ಧತೆಯನ್ನು ಅರಿವು ಆಕ್ರಮಿಸಿ ನಿಂತಿದೆ. ನನ್ನ ಸಣ್ಣ ಸಣ್ಣ ಖುಷಿಗಳು ಅರಿವಿನಿಂದಾಗಿ ಕಳೆದು ಹೋಗಿವೆ.

ಈ ಅರಿವಿನ ಬದಲು ನನ್ನ ಎಳೆತನದ ಮುಗ್ಧತೆಯನ್ನು ಬಯಸುತ್ತೇನೆ. ತಂದುಕೊಡುವವರಿಲ್ಲ. ಅದಕ್ಕಾಗಿ ನನ್ನ ಹೃದಯದ ಆಳದಲ್ಲೆಲ್ಲೋ ವಿಷಾದ ಮಡುಗಟ್ಟಿ ನಿಂತಿದೆ.

• ವಿನುತಾ •

# ಕಲಾತಪಸ್ವಿ ಕೆ.ವೆಂಕಟಪ್ಪ

● ಕೆ.ವಿ. ಸುಬ್ರಹ್ಮಣ್ಯ

*ಕರ್ನಾಟಕದ ಹೊರಗೆ ಕಲಿತು ಬಂದ ಪ್ರಥಮ ಕಲಾವಿದ ಕೆ. ವೆಂಕಟಪ್ಪ (1887-1965) ರಾಜ್ಯಕ್ಕೆ ಕೀರ್ತಿ ತಂದವರು. 1987 ಅವರ ಜನ್ಮ ಶತಮಾನೋತ್ಸವ ವರ್ಷ. ಈ ಸಂದರ್ಭಕ್ಕಾಗಿ ಕೇಂದ್ರ ಹಾಗೂ ರಾಜ್ಯ ಲಲಿತಕಲಾ ಅಕಾಡೆಮಿಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ರಾಜ್ಯ ವಸ್ತು ಸಂಗ್ರಹಾಲಯ ಮೊದಲಾದವು ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ನಿರ್ವಹಿಸಿದವು.*

ಹತ್ತೊಂಬತ್ತನೆಯ ಶತಮಾನದ ಅಂತ್ಯದಲ್ಲಿ ಸಣ್ಣದಾದರೂ ಗೌಣವಲ್ಲದ ಬಂಗಾಳಿ ಕಲಾವಿದರ ಗುಂಪೊಂದು ವಿನಾಶದ ಅಂಚಿಗೆ ಹೊಂದಿಕೊಳ್ಳುತ್ತಿದ್ದ ಭಾರತೀಯ ಕಲೆಯ ಅವನತಿಯನ್ನು ಸಹಿಸಲಾರದೆ ಪುನರುಜ್ಜೀವನಗೊಳಿಸುವ ದೃಢ ನಿಶ್ಚಯದಿಂದ ಒಟ್ಟಾಗಿ ಕಲಾ ಸೃಷ್ಟಿಗೆ ತೊಡಗಿತು. ಆ ಚಳವಳಿಯ ಮುಂಚೂಣಿಯಲ್ಲಿದ್ದ ಅವನೀಂದ್ರನಾಥ ಠಾಕೂರರು 1896ರಲ್ಲಿ ಕಲ್ಕತ್ತ ಕಲಾಶಾಲೆಗೆ ಪ್ರಿನ್ಸಿಪಾಲರಾಗಿ ಬಂದ ಇ.ಬಿ. ಹ್ಯಾವೆಲ್ಲರಿಂದ ಭಾರತೀಯ ಪರಂಪರೆಯ ಮಾರ್ಗದತ್ತ ಮುನ್ನಡೆಯಲು ಕಲಿತರು. ಇದೇ ಹಾದಿಯಲ್ಲಿನ ಕರ್ನಾಟಕದ ಕೆ. ವೆಂಕಟಪ್ಪ ನಂತರದ ದಿನಗಳಲ್ಲಿ ಖ್ಯಾತ ಪರ್ಸಿಬ್ರೌನ್ ಹಾಗೂ ಅವನೀಂದ್ರರ ಮಾರ್ಗದರ್ಶನದಲ್ಲಿ ಕಲಿತವರು. ಹಳೆಯ ಚಾರಿತ್ರಿಕ ಕಲೆಯ ಆಗರಗಳಾದ ಅಜಂತಾ, ಸಿಗೀರಿಯಾ (ಶ್ರೀಲಂಕಾ)ಗಳ ಭಿತ್ತಿ ಚಿತ್ರಗಳು, ಟಿಬೇಟಿನ ಧಾರ್ಮಿಕ ಬ್ಯಾನರ್‌ಗಳು ಮತ್ತು ಅತ್ಯುತ್ತಮ ಕಲಾವಿದರು ರಚಿಸಿದ ಮೊಗಲ್, ರಜಪೂತ್ ಶೈಲಿಗಳ ಮಿನಿಯೇಚರ್ ಕಲಾಕೃತಿಗಳ ಅಧ್ಯಯನ ಹಾಗೂ ಪೌರಸ್ತ್ಯ ಕಲೆಯ ಮೇರು ಕೃತಿಗಳ ಅವಲೋಕನಗಳಿಂದ ಹುಟ್ಟಿದ ಹೊಸ ಬಂಗಾಳಿ ಕಲಾ ಚಳವಳಿಯ ಪ್ರವಾಹಕ್ಕೆ ವೆಂಕಟಪ್ಪನವರು ನಿಷ್ಠೆಯಿಂದ ಸೇರಿದರು.

ಕಲಾಸಾರ್ವಭೌಮ, ಸಂಗೀತ ಶಾಸ್ತ್ರವಿಶಾರದ ಚಿತ್ರದುರ್ಗದ ವೆಂಕಟಪ್ಪನವರು 1887 ನೆಯ ಜೂನ್ 23 ರಂದು ಮೈಸೂರಿನಲ್ಲಿ ಜನಿಸಿದರು. ಸೋಮವಂಶ ಕ್ಷತ್ರಿಯ ಜನಾಂಗದ ಇವರು ಕಲಾವಿದರ ವಂಶಕ್ಕೆ ಸೇರಿದವರು. ತಂದೆ ಕೃಷ್ಣಪ್ಪನವರು ರಚಿಸಿದ "ಶ್ರೀ ಶಾರದ" ಚಿತ್ರವು ಈಗ ಮೈಸೂರು ಜೈನ್ ಬೋರ್ಡಿಂಗ್ ಹೋಂನಲ್ಲಿದೆ. ಬಿಳಿಯ ಕಚ್ಚೆಯ ಪಂಚೆ, ಕ್ಲೋಸ್ ಕಾಲರ್ ಕೋಟು, ಮೈಸೂರಿನ ಪೇಟ, ದಪ್ಪ ಮೀಸೆ, ಹಣೆಯಲ್ಲಿ ಸಣ್ಣದಾದ ತಿಲಕ. ಇದು ವೆಂಕಟಪ್ಪನವರ ದೈನಂದಿನ ಬದಲಾಗದ ರೀತಿಯ ಉಡುಪಾಗಿತ್ತು.

ಮನೆಯಲ್ಲಿ ತಂದೆಯ ಬಳಿ ಕಲಾಭ್ಯಾಸ ಮಾಡಿದ ನಂತರ ಶ್ರೀ ಜಯಚಾಮರಾಜೇಂದ್ರ



ಚಿತ್ರ, ಕರಕುಶಲ ಶಾಲೆಯಲ್ಲಿ ಆರ್.ಟಿ. ರಾಮ ಕೃಷ್ಣನ್‌ರವರಲ್ಲಿ ಪಾಶ್ಚಾತ್ಯ ಶೈಲಿಯ ಕಲಾಭ್ಯಾಸ ಮಾಡಿ ಮದ್ರಾಸ್ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿ ಹೊಸ ಅರಮನೆಯ ನಿರ್ಮಾಣ ಕಾರ್ಯದಲ್ಲಿ, ನಕಾಶೆ ಬಿಡಿಸುವ ಕೆಲಸದಲ್ಲಿ ಪ್ರಸಿದ್ಧರಾದರು. ಪ್ರಸ್ತುತ ಬೆಂಗಳೂರಿನ ಚಿತ್ರಕಲಾ ಪರಿಷತ್ತಿನಲ್ಲಿ ಮೈಸೂರು ಸಾಂಪ್ರದಾಯಿಕ ಶೈಲಿ ಚಿತ್ರಕಲಾ ಶಿಕ್ಷಣ ನೀಡುತ್ತಿರುವ ಹಿರಿಯ ಕಲಾವಿದರಾದ ವೈ. ಸುಬ್ರಹ್ಮಣ್ಯರಾಜುರವರ ತಾತ ಸುಂದರಯ್ಯನವರು ತರುಣರಾದರೂ ಕೆಲಸದಲ್ಲಿ ನಿಷ್ಠಾವಂತರಾದ ವೆಂಕಟಪ್ಪನವರಿಗೆ ದೊಡ್ಡವರಿಗೆ ಕೊಡುವಷ್ಟೇ ಸಂಭಾವನೆ ಕಲ್ಪಿಸಿದಾಗ ಉಂಟಾದ ವಿವಾದಕ್ಕೆ "ಕೆಲಸ ಮಾಡುವುದು ಕೈ, ಮೀಸೆಯಲ್ಲ" ಎಂದು ವೆಂಕಟಪ್ಪನವರು ಉತ್ತರಿಸಿದ್ದೂ ಉಂಟು. ಧ್ಯಾನಾಸಕ್ತ ತಪಸ್ವಿಯಂತೆ ಒಂದೇ ಸಮನೆ ಕೆಲಸ ಮಾಡಿದ ವೆಂಕಟಪ್ಪನವರನ್ನು ಕಂಡು ಸಂತೋಷಗೊಂಡ ನಾಲ್ವಡಿ ಶ್ರೀ ಕೃಷ್ಣರಾಜ ಒಡೆಯರಿಂದ ಪ್ರಾರಂಭದಲ್ಲಿ ಸಿಕ್ಕ ಸಂಭಾವನೆ ಒಂದು ನೂರು ರೂಪಾಯಿಗಳು. ನಂತರ ಅವರ ಆಸರೆಯಲ್ಲಿ ಇಂಗ್ಲೀಷು ಕಲಿತು ಕಲ್ಕತ್ತಾ ಚಿತ್ರಶಾಲೆಗೆ ಸೇರಿದರು. ಅಲ್ಲಿನ ಅವರ ಸಾಧನೆ ಇತಿಹಾಸ ಸೃಷ್ಟಿಮಾಡಿತು. ಈ ಕಲಾ ತಪಸ್ವಿಯ ತಲ್ಲೀನತೆಯಿಂದ ಬೆರಗುಗೊಂಡ ಗುರು ಅವನೀಂದ್ರನಾಥ ಠಾಕೂರರು, ಪಾಶ್ಚಾತ್ಯರಾದ ಲೇಡಿ ಹ್ಯಾರಿಗ್ ಹ್ಯಾಂರವರು ಅಜಂತಾ ಗುಹೆಗಳ ಭಿತ್ತಿ ಚಿತ್ರಗಳನ್ನು ನಕಲು ಮಾಡಲು ಬಂದಾಗ ನಂದಲಾಲ ಬೋಸರ ಜೊತೆ ವೆಂಕಟಪ್ಪನವರ ಹೆಸರನ್ನು ಶಿಫಾರಸ್ಸು ಮಾಡಿದರು. ಕಲ್ಕತ್ತಾ ಕಲಾ ಶಾಲೆಯಲ್ಲಿ ಕಲಿತು ಮೈಸೂರಿಗೆ ಮರಳಿದ ವೆಂಕಟಪ್ಪನವರು ನಿಸರ್ಗಪ್ರಿಯರು. ಅವರ ಊಟಿ ಹಾಗೂ ಕೊಡೈಕನಾಲ್ ಭೂ ದೃಶ್ಯಗಳನ್ನು ಮೆಚ್ಚದವರಾರು? ನಗರದ ಗಡಿಬಿಡಿಗೆ ಬೇಸತ್ತು, ಬೇಸಿಗೆಗಳಲ್ಲಿ ಈ ಗಿರಿಧಾಮಗಳಿಗೆ ತಮ್ಮ ಪ್ರಿಯ ವೀಣೆಯ ಜೊತೆ ಧಾವಿಸಿ ಹಗಲು ಚಿತ್ರಿಸಿ, ರಾತ್ರಿ ವೀಣಾ ವಾದನದಿಂದ ಶಾಂತಿ ಪಡೆಯುತ್ತಿದ್ದ ಈ ನೈಷ್ಠಿಕ ಬ್ರಹ್ಮಚಾರಿ ಸರಳ ಮತ್ತು ಆದರ್ಶ ಬದುಕನ್ನು ಅಪ್ಪಿಕೊಂಡವರು.

ಇಂತಹ ಕಲಾಶಿಲ್ಪಿಯನ್ನು ಆಗಾಗ ಸಂಧಿಸುವ ಅವಕಾಶ ಪಡೆದಿದ್ದ ವೈ. ಸುಬ್ರಹ್ಮಣ್ಯರಾಜುರವರು "ಮಾವ ನೀವು ಕಲಿತ ಚಿತ್ರಕಲೆಯನ್ನು ಯಾರಿಗೂ ಹೇಳಿ ಕೊಡುತ್ತಿಲ್ಲವೆಂಬ ಪ್ರಚಾರ ಇದೆ" ಎಂದು ಕೇಳಲಾಗಿ, ಅವರು "ನೋಡು ನಾನು ಕಲಾ ಬೆಟ್ಟದ ಸಾವಿರ ಮೆಟ್ಟಿಲನ್ನು ಮುಟ್ಟಿರುವೆನು. ನಾನು 999 ಮೆಟ್ಟಿಲುಗಳನ್ನಿಳಿದು ಬಂದು ಒಂದೊಂದು ಮೆಟ್ಟಿಲಾಗಿ ಅವರಿಗೆ ಐದು ವರ್ಷ ಕಲಿಸಿದರೆ ಈಗಿರುವ ನನ್ನ ಸ್ಥಾನವನ್ನು ಮುಟ್ಟಬೇಕಾದರೆ 995 ಮೆಟ್ಟಿಲುಗಳನ್ನು ಪುನಃ ಹತ್ತಬೇಕಾಗುತ್ತದೆ. ನನಗೆ ಅರಮನೆಯ ಡಿಸ್ಪೆನ್‌ಸರಿ ಮೇಲೆ ಸ್ಟುಡಿಯೋ ಕೊಟ್ಟಿದ್ದರೂ ಸಂತೇ ಪೇಟೆ ಗಲಾಟೆ ತಡೆಯಲಾಗುವುದಿಲ್ಲ. ಶಾಂತ ವಾತಾವರಣವಿಲ್ಲ. ಬೇಸಿಗೆಯಲ್ಲಿ ನನ್ನ ವೀಣೆ ಜೊತೆಯಲ್ಲಿ ಊಟಿಗೆ ಹೋಗಿ ಅಲ್ಲಿ ಶಾಂತಮಯ ವಾತಾವರಣದಲ್ಲಿ ಚಿತ್ರಗಳನ್ನು ರಚಿಸಿಕೊಂಡು ಮನಶ್ಶಾಂತಿ ಪಡೆಯುತ್ತೇನೆ" ಎಂದರು. ಅವರ ಚಿತ್ರವೊಂದರಲ್ಲಿ ರಾಮ ಮುದ್ರಿಕಾ ಕಾಲುಂಗರವನ್ನು ಎಡಗೈಯ್ಯಲ್ಲಿ ಕೊಡುತ್ತಿರುವಂತೆ ಪ್ರಕಟಿಸಿದ ಒಂದು ಪತ್ರಿಕೆಯ ಸಂಪಾದಕರಿಗೆ ಕಲ್ಕತ್ತಾ ಹೈಕೋರ್ಟು ಒಂದು ರೂಪಾಯಿ ಸಾಂಕೇತಿಕ ದಂಡ ವಿಧಿಸಲು ಕಾರಣರಾದರು. ಮೈಸೂರಿನಲ್ಲಿ ಇನ್ನೊಂದು ಇಂತಹುದೇ ಪ್ರಕರಣದಲ್ಲಿ ಅರಸೊತ್ತಿಗೆಯ ವಿರುದ್ಧವೇ ದಾವಾ ಹಾಕಿದರು. ವಿಚಾರಣೆ ನಡೆಯಿತು. ಮಹಾರಾಜರ ಮೇಲಿನ ದಾವಾದಲ್ಲಿ ಸಿಂಧುತ್ವವಿಲ್ಲ ಎಂಬ ಕಾರಣದ ಮೇಲೆ ನ್ಯಾಯಾಧೀಶರು ಕೇಸನ್ನು ವಜಾ ಮಾಡಿದರು. ಕೋಪಗೊಂಡ ವೆಂಕಟಪ

ನವರು ಮೈಸೂರನ್ನೇ ಬಿಟ್ಟು ಶಾಶ್ವತವಾಗಿ ಬೆಂಗಳೂರಿನಲ್ಲಿ ನೆಲೆಸಿದರು.

ಪಳಗಿದ ವೈಣಿಕರೂ ಆಗಿದ್ದ ವೆಂಕಟಪ್ಪನವರು ವೀಣಾವಾದನದಲ್ಲಿ ಸಂಗೀತ ಶಾರದೆಯನ್ನು ಆವಿರ್ಭವಿಸಿ ಬಗೆ ಬಗೆಯ ರಾಗಗಳ ನಾದ ತರಂಗಗಳನ್ನು ಹರಿಸಿ ಮೈ ಮರೆಯುತ್ತಿದ್ದ ರಾಗಜೀವಿ. ಮೈಸೂರು ವಾಸದಲ್ಲಿ ಶೇಷಣ್ಣನವರ ಬಳಿ ಇವರ ವೀಣಾ ಕಲಿಕೆ. ಅವರು ಸಂಗೀತ ಸಾರ್ವಭೌಮ, ಇವರು ಕಲಾ ಸಾಮ್ರಾಟ. ಎಂತಹ ಸಮ್ಮಿಳನ. ಸಂಗೀತ ರಸ ಗಂಗೆಯಾಗಿ ಹರಿಯುತ್ತಿತ್ತು. ತಾವೇ ಸೃಷ್ಟಿಸಿದ್ದ ವಿಶೇಷ ವೀಣೆಯ ತಂತಿ ಸಾಲುಗಳ ಮೇಲೆ ಚಿತ್ರಿಸಲು ಕುಂಚ ಹಿಡಿದ ಅವರ ಕೈ ಬೆರಳುಗಳು ಪಾದರಸದಂತೆ ಲಾಸ್ಯವಾಡಿ, ನಾದ ತರಂಗಗಳನ್ನೆಬ್ಬಿಸಿ ಶ್ರಾವಕರನ್ನು ಆನಂದ ಸಾಗರದಲ್ಲಿ ಮುಳುಗಿಸುತ್ತಿದ್ದರು.

ವೆಂಕಟಪ್ಪನವರಿಗೆ ಯಾರೂ ಲಲಿತ ಕಲೆ, ಸಂಗೀತ, ಯಾವ ಕಲೆಯಾದರೂ ಸರಿ ಒಂದು ಉಪವೃತ್ತಿಯಾಗಿ ಸ್ವೀಕರಿಸುವುದು ಇಷ್ಟವಿರಲಿಲ್ಲ. ಒಮ್ಮೆ ಒಬ್ಬರು ಅವರ ಬಳಿ ವೀಣೆ ಕಲಿಯಲು ಬರಬಹುದೇ ಎಂದು ಕೇಳಿದರು. ವೆಂಕಟಪ್ಪನವರು ಅವರನ್ನು ಸ್ವಲ್ಪ ವೀಣೆ ನುಡಿಸಿ ಎಂದರು. ಸ್ವಲ್ಪ ಆಲಿಸಿದ ನಂತರ ಅವರಿಗೆ ಹೇಳಿದರು, ನೀವು ತಂತಿ ಮೇಲೆ ಬೆರಳು ಆಡಿಸುವುದನ್ನು ಆರು ತಿಂಗಳು ಅಭ್ಯಾಸ ಮಾಡಿ ನಂತರ ಬನ್ನಿ ಅಂತ. ವೆಂಕಟಪ್ಪನವರ ಆರೋಗ್ಯ ಗಮನಿಸುತ್ತಿದ್ದ ಬೆಂಗಳೂರಿನ ಡಾ|| ಕೆ. ರಂಗಾಚಾರ್‌ರವರ ಅಭಿಪ್ರಾಯದಲ್ಲಿ ವೆಂಕ ಟಪ್ಪನವರು ಸಿಡುಕು ಮೋರೆಯ ಸೇರಿಕೆ ಇಲ್ಲದ ವ್ಯಕ್ತಿಯಾಗಿರಲಿಲ್ಲ. ಅವರು ಏಕಾಂತ ವಾಸಿ ನಿಜ, ಆದರೆ ಅವರಿಗೆ ಸ್ನೇಹಿತರು, ಕಲಾ ಪ್ರೇಮಿಗಳು ಬೇಕಿತ್ತು. ನಿರರ್ಥಕ ಸಂಭಾಷಣೆ, ಹರಟೆ ಹೊಡೆದು ಕಾಲಹರಣ ಮಾಡುವವರನ್ನು ಅವರು ಹತ್ತಿರ ಸೇರಿಸುತ್ತಿರಲಿಲ್ಲ. ಮಂತ್ರಿಗಳು, ಮಹಾರಾಜರು ಅಥವಾ ಸಾರ್ವಜನಿಕರು ಯಾರೇ ಆಗಲಿ ವೆಂಕಟಪ್ಪನವರ ಕಲಾಕೃತಿಗಳಲ್ಲಿ ನಿಜವಾದ ಆಸಕ್ತಿಯಿಂದ ನೋಡಲು ಬಯಸಿದರೆ, ಅವರಿಗೆ ತಾವೇ ವಿವರವಾಗಿ ತೋರಿಸುತ್ತಿದ್ದರು. ಆದರೆ ನಿರ್ದಿಷ್ಟ ವೇಳೆಗೆ ಹೋಗಬೇಕಿತ್ತು. ಯಾರಾದರೂ ವೇಳೆ ತಪ್ಪಿ ದಿಢೀರನೆ ಬಾಗಿಲು ತಟ್ಟಿ ಒಳಹೋದರೆ ವೆಂಕಟಪ್ಪನವರಿಗೆ ಕೋಪ ಬರು



ಊಟಿಯ ಸರೋವರ: ಜಲವರ್ಣ ಚಿತ್ರ



ವೆಂಕಟಪ್ಪನವರ ಒಂದು ಪ್ಲಾಸ್ಟರ್ ಉಬ್ಬು ಚಿತ್ರ

ತ್ತಿತ್ತು. ಬದುಕನ್ನು ಕಟ್ಟುನಿಟ್ಟಿನ ಮಾರ್ಗದಲ್ಲಿ ನಡೆಸಿ ಮಹಾರಾಜರೇ ಅಲ್ಲದೆ ಹಿಂದಿನ ಪ್ರಧಾನಿ ನೆಹರೂರವರಿಗೂ ಇದರ ಚುರುಕನ್ನು ಮುಟ್ಟಿಸಿದ್ದರು.

ವೈವಿಧ್ಯಮಯ ಮಾಧ್ಯಮಗಳಲ್ಲಿ ಕೃತಿ ರಚಿಸಿದ್ದರಾದರೂ ವೆಂಕಟಪ್ಪನವರ ಜಲವರ್ಣ ಕೃತಿಗಳ ಸಹಜ ಯಶಸ್ಸು ಪ್ಲಾಸ್ಟರ್ ಉಬ್ಬು ಚಿತ್ರ ಮಾಧ್ಯಮದಲ್ಲಿ ಗಳಿಸಲಾಗಲಿಲ್ಲ. ಪ್ರಯೋಗಗಳು ಕೊನೆಯವರೆಗೂ ಮುಂದುವರೆದಿದ್ದವು. ಮೈಸೂರು ಅರಮನೆಯ ಅಂಬಾವಿಲಾಸದ ಅವರ ಉಬ್ಬು ಶಿಲ್ಪಗಳನ್ನು, ಎಲ್ಲಾ ಲೈಟುಗಳನ್ನಾರಿಸಿ, ಒಂದು ಟಾರ್ಚ್ ಹಿಡಿದು ವಿವಿಧ ಕೋನಗಳಿಂದ ನೋಡಿದಾಗ ಅವರು ರಚಿಸಿರುವ ಶಿಲ್ಪಗಳ ಅರಿವಾಗುತ್ತದೆ ಎಂದು ಒಂದೆಡೆ ಅವರು ಹೇಳಿಕೊಂಡಿದ್ದಾರೆ. ಈ ದೃಷ್ಟಿಯಿಂದ ಬೆಂಗಳೂರಿನ ವೆಂಕಟಪ್ಪ ಚಿತ್ರಶಾಲೆಯಲ್ಲಿ ಅವರ ಉಬ್ಬು ಶಿಲ್ಪಗಳಿಗೆ ಮಾಡಿರುವ ಬೆಳಕಿನ ವ್ಯವಸ್ಥೆ ಪ್ರಶ್ನಾರ್ಹ. ಅವರ ಮಿನಿಯೇಚರ್ ಚಿತ್ರಗಳು ಪಹೇರಿ ಮತ್ತು ರಾಜಸ್ಥಾನಿ ಚಿತ್ರಗಳ ತಾಜಾತನ ಹಾಗೂ ಚೈತನ್ಯವನ್ನು ಹೊಂದಿದ್ದು ಅತ್ಯುತ್ತಮವಾಗಿವೆ. ಮೂರ್ತಿ ಶಿಲ್ಪ, ಚಿತ್ರ ಸಂಗೀತಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ವೆಂಕಟಪ್ಪನವರ ಕಲಾ ಸಂಪ್ರದಾಯ ಅವರೊಂದಿಗೇ ಕರ್ನಾಟಕದಲ್ಲಿ ಕೊನೆಗೊಂಡಿತೆಂದೇ ಹೇಳಬೇಕು. ವೈಯಕ್ತಿಕವಾಗಿ ಮಾತ್ರ ಬೆಳೆದ ವೆಂಕಟಪ್ಪನವರು ರಾಜ್ಯದ ಕಲಾ ಪ್ರವಾಹದಲ್ಲಿ ಯಾವುದೇ ಸಂಚಲನಾತ್ಮಕ ಕಾವನ್ನು ಉಂಟುಮಾಡಲಿಲ್ಲ. ಶಾಂತವಾಗಿ ಒಬ್ಬರೇ ಹರಿದರು. ತಮ್ಮಂಥ ಆದರ್ಶದ ಶಿಷ್ಯರನ್ನು ಪಡೆಯುವುದು ಕೊನೆಗೂ ಅವರಿಗೆ ಸಾಧ್ಯವಾಗಲಿಲ್ಲ.

ಕೇಂದ್ರ ಲಲಿತ ಕಲಾ ಅಕಾಡೆಮಿ ವೆಂಕಟಪ್ಪನವರಿಗೆ ಫೆಲೋಷಿಪ್ ನೀಡಿ ಗೌರವಿಸಿತ್ತು. ರಾಜ್ಯ ಅಕಾಡೆಮಿಯೂ ಇವರನ್ನು ಸನ್ಮಾನಿಸಿ ಪ್ರಶಸ್ತಿ ನೀಡಿತ್ತು. ಚಿತ್ರಕಲಾ ಪರಿಷತ್ತು ವಿಶೇಷ ಸಮಾರಂಭ ನಡೆಸಿ ಗೌರವಿಸಿತು. ಕೇಂದ್ರ ಹಾಗೂ ರಾಜ್ಯ ಲಲಿತ ಕಲಾ ಅಕಾಡೆಮಿಗಳು ಅವರ ಪರಿಚಯ ಪುಸ್ತಕಗಳನ್ನು ಹೊರ

ತಂದಿವೆ. ವೆಂಕಟಪ್ಪನವರು ಪರಂಪರೆಗೆ ನಿಷ್ಠರು – ಭಾರತೀಯ ಸಂಸ್ಕೃತಿಗೆ ಪರಮ ಬದ್ಧರು. ಕಂಡದ್ದನ್ನು ಕಂಡಂತೆ ಆಡಿಬಿಡುವ ಸ್ವಭಾವ, ವಿನಾಕಾರಣದ ಹೊಗಳಿಕೆಗೆ ಸಿಟ್ಟು ಮಾಡಿಕೊಳ್ಳುತ್ತಿದ್ದರು. ಅವರ ಈ ಸ್ವಭಾವ ವನ್ನು ಅರ್ಥ ಮಾಡಿಕೊಳ್ಳದವರು ಅವರನ್ನು ಸಮಸ್ಯಾತ್ಮಕ ವ್ಯಕ್ತಿ ಎಂದೇ ತಿಳಿದುಕೊಳ್ಳು ತ್ತಿದ್ದರು. ಈ ಸ್ವತಂತ್ರ ಜೀವಿ ಯಾವುದಕ್ಕೂ ಯಾರಿಗೂ ಅಳುಕುತ್ತಿರಲಿಲ್ಲ. ಲೌಕಿಕ ಲಾಭ ಕ್ಕಾಗಿ ಆತ್ಮಗೌರವವನ್ನು ಬಲಿಕೊಟ್ಟವರೇ ಅಲ್ಲ. ಅವರ ಕೃತಿಗಳು ಇಂದು ದೇಶ ವಿದೇಶ ಗಳ ಸಂಗ್ರಹಾಲಯಗಳಲ್ಲಿವೆ. ಅಂತಿಮ ದಿನ ಗಳಲ್ಲಿ ಅಪರೂಪಕ್ಕೆ ಮನೆಯ ಹೊರಗೆ ಬರು ತ್ತಿದ್ದ ಈ ಮಹಾನ್ ಕಲಾವಿದ 1965ನೇ ಮೇ ತಿಂಗಳ 25ರಂದು ಎಪ್ಪತ್ತರ ಮುಪ್ಪಿನಲ್ಲಿ ವಿಧಿ ವಶರಾದರು. ಬಣ್ಣಗಳಲ್ಲಿ ಭಾವ ಬಣ್ಣಿಸಿ ಲೋಕ ಬೆರಗುಗೊಳಿಸಿದ ಲೋಕಮಾನ್ಯ ಈ ಕಲಾವಿದ. *



# ಪ್ರಾಣ—ಮಿತ್ರ

ಆಲ್ಪ್ಸ್ ಪರ್ವತಶ್ರೇಣಿಯ ಹಿಮತಪ್ಪಲಿನಲ್ಲಿ ಇಂಗ್ಲೆಂಡಿನ ರಾಜ ಪರಿವಾರದ ಕೆಲವರು ತಮ್ಮ ಆಪ್ತಮಿತ್ರವರ್ಗದೊಂದಿಗೆ ವಿಹಾರಾರ್ಥ ಸ್ಕೀಯಿಂಗ್ ಆಡುತ್ತಿದ್ದ ಸಂದರ್ಭದಲ್ಲಿ ಟನ್‌ಗಟ್ಟಲೆ ಭಾರದ ಹಿಮಬಂಡೆಯೊಂದು ಗಾಟ್‌ಶನ್‌ಗ್ರಾಟ್ ಬೆಟ್ಟದಿಂದ ಕೆಳಕ್ಕುರುಳತೊಡಗಿತು. ಕೂದಲೆಳೆ ಯಷ್ಟು ಅಂತರದಿಂದ ಅದರಿಂದ ಪಾರಾದರು ರಾಜಕುಮಾರ ಚಾರ್ಲ್ಸ್. ಆದರೆ ತನ್ನ ಮಿತ್ರ ಮೇಜರ್ ಹ್ಯೂಗ್ ಲಿಂಡ್ಸೆಯನ್ನು ಬಂಡೆಯಿಂದ ಪಾರುಮಾಡಲು ಧಾವಿಸಿದರು. ಚಾರ್ಲ್ಸ್ ನೋಡ ನೋಡುತ್ತಿದ್ದಂತೆಯೇ ಪ್ರಾಣಮಿತ್ರ ರಭಸದಿಂದ ಕೊಚ್ಚಿಕೊಂಡು ಪ್ರಪಾತ ಸೇರಿಬಿಟ್ಟ.

ಸ್ಕೀಯಿಂಗ್‌ನ ಅಪಾಯದ ಅರಿವಿದ್ದವರೇ ಅವರೆಲ್ಲ. ಅಲ್ಲಿ ಪರ್ವತಗಳಿಂದ ನೀರ್ಗಲ್ಲು ಗಳುರುಳುವುದು ಅಸಹಜ ಸಂಗತಿಯೇನಲ್ಲ. ಈ ತಂಡದಲ್ಲಿ ರಾಜಕುಮಾರ ಚಾರ್ಲ್ಸ್ ಜತೆ ಮೇಜರ್ ಹ್ಯೂಗ್ ಲಿಂಡ್ಸೆ, ಚಾರ್ಲ್ಸ್ ಪಾಮರ್ ಟಾಮ್ಕಿನ್ಸನ್ ಹಾಗೂ ಅವರ ಪತ್ನಿ, ಮಾರ್ಗದರ್ಶಕ ಬ್ರೂನೋ ಸ್ಪ್ರೀಚರ್ ಮತ್ತು ಒಬ್ಬ ಸ್ವಿಸ್ ಪೊಲೀಸ್ ಇದ್ದರು.

"ಭಯಂಕರ ಶಬ್ದದೊಂದಿಗೆ ನೀರ್ಗಲ್ಲು ಉರುಳಿ ಬರುತ್ತಿದ್ದಂತೆಯೆ ನಾವು ನಾಲ್ವರು ಪಕ್ಕಕ್ಕೆ ಸರಿದೆವು. ಆದರೆ ಲಿಂಡ್ಸೆ ಹಾಗೂ ಮಿಸೆಸ್ ಪಾಮರ್ ನಮ್ಮ ಕಣ್ಣೆದುರಿಗೇ ಹಿಮದೊಂದಿಗೆ ಕೊಚ್ಚಿ ಕೊಂಡು ಹೋದರು. ತಕ್ಷಣ ಕಾರ್‍ಯೋನ್ಮುಖರಾದ ಸ್ಪ್ರೀಚರ್ ಮಿಂಚಿನ ವೇಗದಲ್ಲಿ ಕೆಳಗೆ ಜಾರ ತೊಡಗಿದರು. ಆಡಿಫೋನ್ ರೇಡಿಯೋ ಸಾಧನದ ಸಹಾಯದಿಂದ ಸ್ಪ್ರೀಚರ್ ಮಿಸೆಸ್ ಪಾಮರ್‌ಳನ್ನು ಪತ್ತೆಹಚ್ಚಿದರು. ಅದೇ ಸಮಯಕ್ಕೆ ನಾನು ಹಾಗೂ ಪಾಮರ್ ಅಲ್ಲಿಗೆ ತಲಪಿದೆವು. ಸ್ಪ್ರೀಚರ್ ಆಕೆಯ ಬಾಯಿಗೆ ಬಾಯಿ ಹಚ್ಚಿ ಕೃತಕ ಶ್ವಾಸೋಚ್ಛ್ವಾಸ ನಡೆಸುತ್ತಿದ್ದರು. ನಾನು ಆಕೆ ಯನ್ನು ಹಿಮದ ರಾಶಿಯಿಂದ ಹೊರಗೆಳೆದೆ" ಎಂದು ನಂತರ ರಾಜಕುಮಾರ ಚಾರ್ಲ್ಸ್ ಹೇಳಿಕೆ ನೀಡಿದರು.

ತದನಂತರ ಲಿಂಡ್ಸೆಯ ಪತ್ತೆಹಚ್ಚಲು ಸ್ಪ್ರೀಚರ್ ಹೊರಟರು. ಮಿಸೆಸ್ ಪಾಮರ್‌ಗೆ ಚಾರ್ಲ್ಸ್ ಧೈರ್ಯ ಹೇಳುತ್ತಿದ್ದರು. ಆದರೆ ಕೂಡಲೇ ಸ್ಪ್ರೀಚರ್ ಕೂಗಿದರು– "ಲಿಂಡ್ಸೆ ಸತ್ತು ಹೋಗಿದ್ದಾರೆ. ಇಲ್ಲಿದೆ ಮೃತದೇಹ."

ಚಾರ್ಲ್ಸ್ ಆಡಲಾಡುತ್ತ ಪ್ರಾಣ-ಮಿತ್ರನನ್ನು ಕಳೆದುಕೊಂಡರು.

(ಆಧಾರ- 'ದಿ ಗಾರ್ಡಿಯನ್')

# ಸೌಂದರ್ಯ ಲಹರಿ

**ಆತ್ಮ** ಪರಮಾತ್ಮಗಳ ಸಾವಯವ ಸಂಬಂಧ ಕುರಿತ ವಿವೇಚನೆ. ವಿಮರ್ಶೆಯೇ ಭಾರತೀಯ ತತ್ತ್ವದರ್ಶನ. ಈ ದರ್ಶನಕ್ಕೆ ತಮ್ಮದೇ ಸಿದ್ಧಾಂತವನ್ನು ಕಾಣಿಕೆಯಾಗಿತ್ತು. ಅದನ್ನು ನೆಲೆಗೊಳಿಸಿದವರು ಶ್ರೀ ಶಂಕರ ಭಗವತ್ಪಾದರು. ಅವರು ರೂಪಿಸಿದ ಸಿದ್ಧಾಂತ ಅದ್ವೈತ ತತ್ತ್ವ. ನಿರಾಕಾರ, ನಿರ್ಗುಣ ಪರಬ್ರಹ್ಮ ಒಂದೇ ಎನ್ನುವುದು ಈ ತತ್ತ್ವದ ಸಾರ. ಈ ಸಿದ್ಧಾಂತದಂತೆ ಬ್ರಹ್ಮ ಅಕ್ರಿಯವೇ ಆದರೂ, ಆ ಶಕ್ತಿ-ಸೃಷ್ಟಿ, ಸ್ಥಿತಿ ಲಯಗಳಿಗೆ ಕಾರಕ. ಆದ್ದರಿಂದ ಬ್ರಹ್ಮ ಮತ್ತು ಶಕ್ತಿ ಎರಡೂ ಒಂದೇ ಎಂಬುದು ಶಂಕರರ ಪ್ರತಿಪಾದನೆ.

ಈ ಸಿದ್ಧಾಂತ ವಿಚಾರಗಳನ್ನು ಸರಳವಾಗಿ, ಸುಂದರವಾಗಿ ಮಂಡಿಸಿದ ಅವರ ಕಾವ್ಯ 'ಸೌಂದರ್ಯ ಲಹರಿ.' ಶಿಖರಿಣೀ ಛಂದಸ್ಸಿನ ನೂರು ಪದ್ಯಗಳ ಮಾಲೆ ಈ ಕೃತಿ. ಇಲ್ಲಿನ ಪ್ರತಿ ಪದ್ಯಕ್ಕೂ ಒಂದೊಂದು ವೈಶಿಷ್ಟ್ಯವಿದೆ.

ಸಾಮಾನ್ಯವಾಗಿ ತತ್ತ್ವದರ್ಶನದಂಥ ವಿಚಾರಗಳು ಪಂಡಿತರಿಗೇ ಮೀಸಲು. ಸಾಮಾನ್ಯರು ಈ ಬಗ್ಗೆ ಚರ್ಚಿಸಲು ಅಸಮರ್ಥರು ಎಂಬ ನಂಬಿಕೆ ಬೆಳೆದು ಬಂದಿತ್ತು. ನಮ್ಮ ದರ್ಶನ ವಿಚಾರಗಳು ಸುಲಭ ಗ್ರಾಹ್ಯವಲ್ಲದ್ದು ಈ ಪರಂಪರಾನುಗತ ನಂಬಿಕೆಗೆ ಕಾರಣ. ಶ್ರೀ ಶಂಕರರು ರಚಿಸಿದ 'ಸೌಂದರ್ಯ ಲಹರಿ' ಸರಳ, ಸುಂದರ, ಎಲ್ಲ ವರ್ಗದ ಜನರಿಗೂ ಅರ್ಥವಾಗುವಂಥ ಕಾವ್ಯ ಕೃತಿ. ಶಂಕರರ ಗುರು ಗೌಡಪಾದರು ರಚಿಸಿದ ವಿದ್ಯಾ ಸೂತ್ರಗಳ ಸರಳ ನಿರೂಪಣೆ ಸೌಂದರ್ಯ ಲಹರಿ.

'ಶಿವಃ ಶಕ್ತ್ಯಾಯುಕ್ತೋಯದಿ ಭವತಿ ಭಕ್ತಃ' ಎಂದು ಪ್ರಾರಂಭವಾಗುವ ಶ್ಲೋಕದಲ್ಲಿ 'ಶಿವ' ನಿರ್ಗುಣ ಬ್ರಹ್ಮ. ಇದನ್ನು ಸಾಮಾನ್ಯ ಕಲ್ಪನೆಯ ತ್ರಿಮೂರ್ತಿಗಳಲ್ಲೊಬ್ಬನಾದ 'ಶಿವ' ಎಂದು ಅರ್ಥೈಸಿದರೆ ಮೂಲದ ಉದ್ದೇಶಿತ ಅರ್ಥವೇ ಬದಲಾಗಿಬಿಡುತ್ತದೆ. 'ಶಕ್ತಿ' ಸ್ತ್ರೀ ರೂಪಿಣಿ ಎನ್ನುವುದು ಸಾಂಪ್ರದಾಯಿಕ ಕಲ್ಪನೆ. ಈಕೆ, ಬ್ರಹ್ಮಾದಿಗಳ ಕರ್ತವ್ಯಕ್ಕೆ ಸಾಮರ್ಥ್ಯ ನೀಡುವವಳು. ವೇದ, ಪುರಾಣಗಳು ಮಾತ್ರ ಶಕ್ತಿ ಎಂದು ಬಣ್ಣಿಸಿದ ಈ ದೇವಿ ತ್ರಿಭುವನೈಕ ಸುಂದರಿ, ಸರ್ವೇಶ್ವರಿ. ಇಂಥ ಶಕ್ತಿ ಸೌಂದರ್ಯ ಲಹರಿಯಾಗಿ ಮೂರ್ತಿಭವಿಸಿದ ಬಣ್ಣನೆ ಕಾವ್ಯದ ಅತ್ಯಂತ ಸುಂದರ ಕಲ್ಪಕ ಶಕ್ತಿ. ಈ ಮಹಾದೇವಿ; ಪುರಾಣಗಳಲ್ಲಿ ಲಕ್ಷ್ಮಿ, ಸರಸ್ವತಿ, ಪಾರ್ವತಿಯಾಗಿ ಮೂಡಿ ಬಂದಿದ್ದಾಳೆ. ಸೌಂದರ್ಯ ಲಹರಿಯಾದ ಮಹಾಮಾತೃಕೆ ಆನಂದ ಲಹರಿಯೂ ಹೌದು. ಆದ್ದರಿಂದ ಈ ಕಾವ್ಯದ ಮೊದಲ ನಲವತ್ತೊಂದು ಪದ್ಯಗಳನ್ನು 'ಆನಂದ ಲಹರಿ' ಎನಿಸಿಕೊಂಡಿದೆ. 'ಪರಶಿವ'ನ ಪರ್ಯಂಕದಲ್ಲಿ ಸುಖಾಸೀನಳಾಗಿ ಎಲ್ಲರಿಗೂ ಐಹಿಕ, ಪಾರಮಾರ್ಥಿಕ ಸುಖ ನೀಡುವವಳೆಂದು ಶ್ರೀ ಶಂಕರರ ಪ್ರತಿಪಾದನೆ.

ಅದ್ವೈತ ತತ್ತ್ವ ಅರ್ಥಮಾಡಿಕೊಳ್ಳ ಬಯಸುವವರು 'ಸೌಂದರ್ಯ ಲಹರಿ'ಯನ್ನು ಮನಸ್ಸಿಟ್ಟು ಅಭ್ಯಸಿಸಿದರೆ 'ನೂರು ಶ್ಲೋಕ ಓದಿದವ ಪಂಡಿತ' ಎಂಬ ಮಾತು ಅಕ್ಷರಶಃ ನಿಜವಾಗುತ್ತದೆ. *

● ಕೆ.ವೈ. ನರಸಿಂಹಮೂರ್ತಿ ●





# ಸೇತು ಬಂಧನ

ಜಪಾನ್ ಹಲವು ದ್ವೀಪಗಳ ಸಮೂಹ. ಹೊಕ್ಕೈಡೋ, ಶಿಕೋಕು, ಕ್ಯುಷು ಮತ್ತು ಹಾನ್ಷು ಇವುಗಳಲ್ಲಿ ಮುಖ್ಯವಾದವು. ಉತ್ತರದ ತುದಿಯ ಹೊಕ್ಕೈಡೋ ಒಂಟಿ ದ್ವೀಪ. ದೇಶದ ಇತರ ಭಾಗಗಳೊಡನೆ ಸಂಪರ್ಕ ಕಷ್ಟಸಾಧ್ಯ. ಇದುವರೆಗೆ ಫೆರಿ ಬೋಟ್‌ಗಳು ಶಾಂತ ಸಾಗರದಲ್ಲಿ ತೇಲಿ ಆಚೀಚೆಗೆ ಜನ, ಸರಕುಗಳನ್ನು ಒಯ್ಯುತ್ತಿದ್ದವು. ಮಾರ್ಚ್ ಹದಿಮೂರರಂದು ಹೊಸ ರೈಲು ರಸ್ತೆಯೊಂದು ಈ ಎರಡು ದ್ವೀಪಗಳಿಗೆ ಕೊಂಡಿಯಾಯಿತು. ಶಾಂತ ಸಾಗರದ ತ್ಸುಗಾರು ಜಲಸಂಧಿಯ ಅಲೆಗಳು ಮನುಷ್ಯ ಯತ್ನಕ್ಕೆ ಮಣಿದ ಇತ್ತೀಚಿನ ಉದಾಹರಣೆ ಇದು.

ಈ ರೈಲು ಹಾದಿ ಇರುವುದು ಸುರಂಗದೊಳಗೆ. ಈ ಸುರಂಗದ ಹೆಸರು 'ಸೀಕಾನ್.' ಉದ್ದ 53.85 ಕಿಲೋ ಮೀಟರು. ಅದರಲ್ಲಿ 23.3 ಕಿಲೋಮೀಟರ್ ಉದ್ದದ ಹಾದಿ ಸಮುದ್ರದೊಳಗೆ ಹಾಯ್ದು ಬಂದಿದೆ.

ಇಪ್ಪತ್ನಾಲ್ಕು ವರ್ಷದ ದೀರ್ಘ ಅವಧಿಯಲ್ಲಿ ತಯಾರಾದ ಈ ಸುರಂಗ ಸಾಗರದ ಮೇಲ್ಮೈಯಿಂದ ಇನ್ನೂರು ನಲವತ್ತು ಮೀಟರ್ ಆಳದಲ್ಲಿದೆ. ಸಮುದ್ರ ತಳವೇ ನೂರ ನಲವತ್ತು ಮೀಟರ್ ಕೆಳಗಿದೆ. ಅಲ್ಲಿಂದ ನೂರು ಮೀಟರ್ ಕೆಳಗೆ ಈ ಸುರಂಗ. ಸದ್ಯಕ್ಕೆ ಈ ಸುರಂಗ ಮಾರ್ಗವೇ ಜಗತ್ತಿನ ಅತಿ ಉದ್ದದ ಸಮುದ್ರದ ಕೆಳಗಿನ ಸುರಂಗ. ಈ ದೃಷ್ಟಿಯಿಂದ ಜಪಾನೀಯರು ವಾಸ್ತು ರಚನೆಯ ರಂಗದಲ್ಲಿ

ಸೊಪ್ಪವೊಂದು ಹೆಜ್ಜೆ ಇರಿಸಿದ್ದಾರೆ.

ಎಪ್ಪತ್ತು ಬಿಲಿಯನ್ ಯೆನ್‌ಗಳ ಖರ್ಚು ತಗಲಬಹುದೆಂಬ ಅಂದಾಜು ಆರಂಭದಲ್ಲಿ. ಪೂರ್ಣಗೊಂಡಾಗ ಏಳುನೂರು ಬಿಲಿಯನ್ ಯೆನ್‌ಗಳ ವೆಚ್ಚವಾಗಿತ್ತು. ಇದನ್ನು ಕಟ್ಟಿದ ಜಪಾನಿನ ರೈಲ್ವೇ ಕನ್‌ಸ್ಟ್ರಕ್ಷನ್ ಕಾರ್ಪೊರೇಷನ್‌ಗೆ ಜಪಾನ್ ರೈಲ್ವೇ ಸಂಸ್ಥೆ ಐವತ್ತು ವರ್ಷಗಳವರೆಗೆ ಬಿಲಿಯಾಂತರ ಯೆನ್‌ಗಳನ್ನು ಮರುಪಾವತಿ ಮಾಡಬೇಕಾಗುತ್ತದೆ.

ಇಡೀ ಸುರಂಗದ ವ್ಯವಸ್ಥೆ ಅತ್ಯಂತ ಸುರಕ್ಷಿತ. ಭೂಕಂಪ, ಅಗ್ನಿ ಅಘಾತಗಳ ಬಗ್ಗೆ ತೀವ್ರ ಮುನ್ನೆಚ್ಚರಿಕೆ ವಹಿಸಲಾಗಿದೆ. ಅಗ್ನಿ ಅಪಘಾತದ ಮುನ್ನೆಚ್ಚರಿಕೆಗೆ ಅತ್ಯಂತ ಆಧುನಿಕ



ವ್ಯವಸ್ಥೆ ಇದೆ. ತುರ್ತು ಸಂದರ್ಭಗಳಿಗೆಂದೇ ಎರಡು ವಿಶೇಷ ನಿಲುಮನೆಗಳಿವೆ. ಈ ನಿಲುಮನೆಗಳಲ್ಲಿ ಪ್ರಯಾಣಿಕರು ಇಳಿದೊಡನೆ ಮುನ್ನೂರು ಮೀಟರ್ ಉದ್ದದ ಹಾದಿಯೊಂದು ಅವರನ್ನು ಸುರಕ್ಷಿತ ನೆಲೆಗೆ ಒಯ್ಯುತ್ತದೆ. ಅಲ್ಲಿ ಊಟ, ವಸತಿ ಮನರಂಜನೆ ಎಲ್ಲ ಸೌಲಭ್ಯಗಳೂ ಇವೆ.

ಸುರಂಗ ಮಾರ್ಗ ತಾಂತ್ರಿಕತೆಯ ಪರಾಕಾಷ್ಠೆಯಾದರೆ ಹಾನೆಷು ಮತ್ತು ಶಿಕೋಕು ದ್ವೀಪಗಳ ನಡುವಿನ ಸುಮಾರು ಆರು ಕಿಲೋಮೀಟರ್ ಉದ್ದದ ಸೇತುವೆ ಹಾದಿ, ಕಲೆ ಮತ್ತು ತಾಂತ್ರಿಕತೆಯ ಸುಂದರ ಸಮ್ಮಿಲನದ ಉತ್ಕೃಷ್ಟ ಮಾದರಿ.

ಈ ಎರಡು ದ್ವೀಪಗಳ ನಡುವೆ ಇರುವ ನಡುಗಡ್ಡೆಗಳಲ್ಲಿ ಕಾಲೂರಿ ನಿಂತ ಆರು ಸೇತುವೆಗಳ ಬಣ್ಣ, ಕೂಡ ಸುತ್ತಣ ಪರಿಸರದೊಡನೆ ಮಿಳಿತವಾಗುಂಥದ್ದು. ಇಂಥ ಇನ್ನೂ ಎರಡು ಸೇತು ಸರಪಳಿಗಳು ಜಪಾನ್‌ನಲ್ಲಿ ನಿರ್ಮಾಣ ಆಗಲಿವೆ. ಈ ಸೇತುವೆಯಲ್ಲಿ ಎರಡು ಮಾರ್ಗಗಳಿವೆ. ಮೇಲಿನ ಸ್ತರದಲ್ಲಿ ಬಸ್ಸು, ಕಾರು ಮುಂತಾದ ವಾಹನಗಳು ಚಲಿಸಿದರೆ, ಕೆಳಗಿನ ಸ್ತರದಲ್ಲಿ ರೈಲುಗಳು ಓಡಾಡುತ್ತವೆ.

'ಸೀಟೋ-ಓಹಾಶೀ' ಎಂದು ಕರೆಯುವ ಈ ಸೇತು ಹಾದಿ ಆರು ಸೇತುವೆಗಳ ಒಂದು ದೀರ್ಘ ಸರಪಳಿ. ಇವುಗಳಲ್ಲಿ ಅತಿ ದೊಡ್ಡ ಸೇತುವೆ 1648 ಮೀಟರ್ ಉದ್ದವಿದೆ. ಅತ್ಯಂತ ಕಿರಿದು 585 ಮೀಟರ್ ಉದ್ದ.

ಸಾಗರದ ಮೇಲೆ ತೂಗಿಬಿದ್ದ ಸೇತುವೆಗೆ ಬಹುದೊಡ್ಡ ಶತ್ರು ಬಿರುಗಾಳಿ. ಅದನ್ನು ತಡೆಯುವ ಶಕ್ತಿ ಮೈಗೂಡಿಸಿಕೊಂಡಿದೆ ಈ ಜಪಾನೀ ವಾಸ್ತು ರಚನೆ. ಏಪ್ರಿಲ್ ತಿಂಗಳ ಹತ್ತರಂದು ಮುಕ್ತ ಸಂಚಾರಕ್ಕೆ ತೆರವಾಗಿರುವ ಈ ಮಾರ್ಗಗಳಿಂದಾಗಿ ಜಪಾನಿನ ಉದ್ದಗಲಗಳನ್ನು ಸಂಚರಿಸುವುದು ಈಗ ಸುಲಭವಾಗಿದೆ. ಈ ಸೇತು ಮಾರ್ಗ ಕ್ರಮಿಸಲು ಕೇವಲ ಹದಿನೈದು ನಿಮಿಷ ಸಾಕು. ನೂರು ಕಿಲೋ ಮೀಟರ್ ವೇಗದಲ್ಲಿ ಚಲಿಸುವ ರೈಲು. ಅಷ್ಟೇ ವೇಗದಲ್ಲಿ ನಾಲ್ಕು ಪಥಗಳ ರಸ್ತೆಯಲ್ಲಿ ವಾಹನಗಳೂ ಚಲಿಸಬಲ್ಲವು.

ಈ ಅದ್ಭುತ ಸೇತು ರಚನೆಗೆ ತಗಲಿದ ವೆಚ್ಚ 1.53 ಟ್ರಿಲಿಯನ್ ಯೆನ್‌ಗಳು. ಜಪಾನಿನ ಜನರ ಮೂರ್ತಿ ಚಿಕ್ಕದು. ಆದರೆ ಕೀರ್ತಿ! *

# ಕನ್ನಡ ಗಾದೆಗಳ ಅಪೂರ್ವ ಸಂಗ್ರಹಗಳು

● ಸಣ್ಣ ನಂಜೇಗೌಡ ●

**ಕ**ನ್ನಡ ಗಾದೆಗಳ ಸೊಗಡು ಸಾಂದ್ರತೆಗಳನ್ನು ಗುರುತಿಸಿ ಅವುಗಳನ್ನು ಸಂಗ್ರಹಿಸಿ ಪ್ರಕಟಿಸುವ ಕಾಯಕವನ್ನು ಕೈಗೆತ್ತಿಕೊಂಡವರಲ್ಲಿ ಪಾಶ್ಚಾತ್ಯರೇ ಮೊದಲಿಗರು. ಕನ್ನಡ ಪತ್ರಿಕೋದ್ಯಮ, ಲಿಪಿ ಸುಧಾರಣೆ, ಪಠ್ಯಪುಸ್ತಕ ರಚನೆ– ಇವುಗಳಲ್ಲಿ ಆದ್ಯನೆನಿಸಿದ ರೆವರೆಂಡ್ ಹರ್ಮನ್ ಮೊಗ್ಲಿಂಗ್ (1811-1881) ಮೊಟ್ಟ ಮೊದಲಿಗೆ ಕನ್ನಡ ಗಾದೆಗಳನ್ನು ಸಂಗ್ರಹಿಸಿ ಪ್ರಕಟಿಸಲು ಕಾರಣನಾಗಿದ್ದಾನೆ. 1847ರಲ್ಲಿ ಪ್ರಕಟಗೊಂಡ ಈತನ 'ಕನ್ನಡ ಗಾದೆಗಳ ಸಂಗ್ರಹ', ಸುಮಾರು ನಾಲ್ಕೈದು ವರ್ಷಗಳ ಶ್ರಮದ ಫಲವೆನ್ನಬಹುದು.

ರೆ. ಹರ್ಮನ್ ಮೊಗ್ಲಿಂಗ್ 1836ರಲ್ಲಿ ಕ್ರೈಸ್ತ ಧರ್ಮ ಪ್ರಚಾರಕ್ಕೆಂದು ಜರ್ಮನಿಯಿಂದ ಕರ್ನಾಟಕಕ್ಕೆ ಆಗಮಿಸಿದ. ಬಂದ ಕೆಲವೇ ವರ್ಷಗಳಲ್ಲಿ ಕನ್ನಡವನ್ನು ಶ್ರದ್ಧೆ ಉತ್ಸಾಹಗಳಿಂದ ಮೈಗೂಡಿಸಿಕೊಂಡು ಆ ಮೂಲಕ ಧರ್ಮ ಪ್ರಚಾರವನ್ನು ಆರಂಭಿಸಿದನಾದರೂ ಕ್ರಮೇಣ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಈತನಿಂದ ಕನ್ನಡ ನಾಡು ನುಡಿಗೆ ಸಂದ ಸೇವೆ ಅಪಾರ.

ಕನ್ನಡ ಗಾದೆಗಳನ್ನು ಸಂಗ್ರಹಿಸುವ ಕಾರ್ಯವನ್ನು ಮೊಗ್ಲಿಂಗ್ 1843ರಷ್ಟು ಹಿಂದೆಯೇ ಪ್ರಾರಂಭಿಸಿದ್ದಂತೆ ಕಂಡುಬರುತ್ತದೆ. ಮಂಗಳೂರಿನ ಬಾಸೆಲ್ ಮಿಶನ್ನಿನಿಂದ 1843ರಲ್ಲಿ ಪ್ರಕಟವಾದ ಕನ್ನಡದ ಪ್ರಥಮ ವರ್ತಮಾನ ಪತ್ರಿಕೆ 'ಮಂಗಳೂರು ಸಮಾಚಾರ'ದ ಸಂಪಾದಕನೂ ಮೊಗ್ಲಿಂಗನೆ. ಪತ್ರಿಕೆಯ ಮೊದಲ ಸಂಚಿಕೆಯಲ್ಲಿ ಅದರ ಉದ್ದೇಶ ಮತ್ತ ವ್ಯಾಪ್ತಿಗಳ ಬಗ್ಗೆ ವಿವರಿಸುತ್ತಾ 'ಸುಬುದ್ಧಿಗಳು' ಎಂಬ ಶೀರ್ಷಿಕೆಯಡಿಯಲ್ಲಿ "ಬೇರೆ ಬೇರೆ ದೇಶಗಳ ಗಾದೆಗಳನ್ನು ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ಜನರೊಳಗೆ ಪ್ರಶಿದ್ಧಿಯಾದ ವುತ್ತಮ ಬುದ್ಧಿಯ ಮಾತುಗಳಂನು ಯುಕ್ತ ಕಂಡಾಗ್ಗೆ ಬರೆಯಲಿಕ್ಕೆ ನಿರ್ನಯಿಸಿಲಧೆ" ಎಂದು ತಿಳಿಸಿದ್ದಾನೆ. ('ಮಂಗಳೂರು ಸಮಾಚಾರ') 1843, 1 ಜುಲೈ 1ನೇ ಪುಸ್ತಕ, 1ನೇ ಲಂಕೆ) ಅದೇ ವರ್ಷದ ಐದನೇ ಸಂಚಿಕೆಯಲ್ಲಿ ಪ್ರಕಟವಾಗಿ ರುವ ಎರಡು 'ಸುಬುದ್ಧಿಗಳು' ಈ ರೀತಿ ಇವೆ:

"ಕುರುಡನು ಕುರುಡನಿಗೆ ಮಾರ್ಗ ತೋರಿಸಿದ ಹಾಗೆ"

"ಯೆರಡು ದಾಸರಿಗೆ ನಂಬಿ ಕುರುಡ ದಾಸ ಕೆಟ್ಟ"

ಮೊಗ್ಲಿಂಗನ ಗಾದೆಗಳ ಸಂಕಲನದ ಮೊದಲ ಆವೃತ್ತಿಯಲ್ಲಿ (1847) ಒಟ್ಟು 3350 ಗಾದೆಗಳಿವೆ. ಮೊದಲ ಆವೃತ್ತಿ ಪ್ರಕಟವಾದ ಒಂದೇ ವರ್ಷದಲ್ಲಿ ಎರಡನೇ ಆವೃತ್ತಿ (1848) ಮುದ್ರಣವಾಯಿತು. ಎರಡನೇ ಆವೃತ್ತಿಯಲ್ಲಿ 3350 ಗಾದೆಗಳ ಜೊತೆಗೆ 'ಗಾದೆಗಳ ಯೆರಡನೆ ತರವು' ಎಂಬ ವರ್ಗೀಕರಣದಲ್ಲಿ 250 (ಒಟ್ಟು 3600) ಗಾದೆಗಳನ್ನು ಕೊಡಲಾಗಿದೆ. ಮೊದಲ ಮುದ್ರಣ ಒಟ್ಟು 276 ಪುಟಗಳಿದ್ದು ಎರಡನೇ ಮುದ್ರಣದಲ್ಲಿ 300 ಪುಟಗಳಿವೆ. ಗಾದೆಗಳನ್ನು ಅಕಾರಾದಿಯಾಗಿ ಕೊಟ್ಟಿದೆ. ಮೊಗ್ಲಿಂಗನ 'ಕಂನಡ ಗಾದೆಗಳು' 1852ರಲ್ಲಿ

# ಗಾದೆಗಳು.

೧. ಅಚ್ಚಾ ಬಾರದಿದ್ದರೆ ಅಮರವಾದರೂ ಹೋಗು.

೨. ಅಂಕೆಯಿಲ್ಲದ ಕಪಿ ಲಂಕೆ ಸುಟ್ಟಿತು.

೩. ಅಂಗುಷ್ಠ ಬಾಕರೆ ವರ್ಷವಾದೀತೆ.

೪. ಅಂಗೈ ಬಗೆ ನೋಡಬೇಕಾದರೆ ಕಂನಡಿಯಾಕೆ.

೫. ಅಂಣ ತನ್ನವನಾದರೂ ಅತ್ತಿಗೆ ತಂನವಳಲ್ಲ.

೬. ಅಂಣತಮ್ಮಂದಿರಾದರೂ ಹೊಂಗು ಹೊಂಚಿಕೊಂ ದುಪ್ಪಂಗ್ರುತ್ತಾರೆ.

೭. ಅಂತುಯಿಂತು ಕುಂತಿ ಮಕ್ಕಳಿಗೆ ರಾಜ್ಯವಿಲ್ಲ.

೮. ಅಂದಿಗೆ ಅದೇ ಸುಖ ಯಿಂದಿಗೆ ಯಿದೇ ಸುಖ.

೯. ಅಂದನ್ನಿಸಿಕೊಂಬ ಅಂದಗೇಡಿಯ ಮನೆಯ.

**1847 ಪ್ರಥಮ ಮುದ್ರಣದ ಮೊದಲ ಪುಟ**

ಮೂರನೇ ಮುದ್ರಣವನ್ನು (ಡಾ॥ ಹಾ. ಮಾ. ನಾಯಕರ ಜಾನಪದ ಗ್ರಂಥಸೂಚಿಯಲ್ಲಿ ಈ ಮುದ್ರಣ ನಮೂದಾಗಿದೆ) 1859ರಲ್ಲಿ ನಾಲ್ಕನೆಯ ಮುದ್ರಣವನ್ನು ಕಂಡಿತೆಂದು ತಿಳಿಯುತ್ತದೆ. ಮೊದಲ ಹಾಗೂ ಅನಂತರದ ಮುದ್ರಣಗಳಲ್ಲಿ ಕೊಟ್ಟಿರುವ ಒಟ್ಟು ಗಾದೆಗಳ ಸಂಖ್ಯೆಯಲ್ಲಿ ಅಲ್ಪಸ್ವಲ್ಪ ವ್ಯತ್ಯಾಸವಿದೆ. ಬಹುಶಃ ನುಡಿಗಟ್ಟುಗಳೆಂದು ಕಂಡುಬಂದವುಗಳನ್ನು ಅನಂತರದ ಮುದ್ರಣಗಳಲ್ಲಿ ಕೈಬಿಟ್ಟಿರಬಹುದು.

ಜನರಲ್ಲಿ ಗಾದೆಗಳ ಬಗೆಗಿನ ಅಭಿರುಚಿ ಮತ್ತು ಶಾಲೆಗಳಲ್ಲಿ ಅವುಗಳ ಸಂಗ್ರಹವನ್ನು ಪಠ್ಯವನ್ನಾಗಿಸುವ ಕ್ರಮ ಇವುಗಳಿಂದಾಗಿ ಮೊಗ್ಲಿಂಗನ 'ಕಂನಡ ಗಾದೆಗಳು' ಶೀಘ್ರ ಜನಪ್ರಿಯತೆ ಪಡೆಯಿತಲ್ಲದೆ, ಹೆಚ್ಚಿನ ಬೇಡಿಕೆಯೂ (ಪ್ರತಿಗಳಿಗಾಗಿ) ಇತ್ತೆಂದು ತಿಳಿಯುತ್ತದೆ. 1850ರಲ್ಲಿ ಅಚ್ಚಾಗಿರುವ "ಗ್ರಾಮ ಮುನಶೀಫ ವ ಪಟೇಲರ ಕಾನೂನ್" ಎಂಬ ಪುಸ್ತಕದ ಕೊನೆಯ ಪುಟದಲ್ಲಿ "ಮಂಗಳೂರಿನ ಜರ್ಮನ್ ಮಿಶೆನ್ ಛಾಪಾ ಖಾನೆಯಲ್ಲಿರುವ ಮಾರಾಟದ ಪುಸ್ತಕಗಳ ಪಟ್ಟಿಯಲ್ಲಿ" 'ಕಂನಡ ಗಾದೆಗಳು' ಸೇರಿದ್ದು ಅದರ ಬೆಲೆಯನ್ನು ಎರಡು ಆಣೆಗಳೆಂದು ನಮೂದಿಸಿದೆ. (ಜಯವೀರ ಸಂಗ್ರಹ, ರಾಜ್ಯ ಪತ್ರಾಗಾರ) ರಾಜೇಂದ್ರನಾಮೆ, ಎಪ್ಪತ್ತು ಕಥೆಗಳು, ಮೂವತ್ತು ದಾಸರ ಪದಗಳು, ಬಸವ ಪುರಾಣ (ಕಾಂಡ 9ರಿಂದ

15ರವರೆಗೆ) ಇವುಗಳಲ್ಲದೆ ಮೊಗ್ಲಿಂಗನ ಕನ್ನಡ ಗಾದೆಗಳ ಸಂಗ್ರಹ ಮದರಾಸು ವಿಶ್ವವಿದ್ಯಾನಿಲಯದ ಪ್ರವೇಶ ಪರೀಕ್ಷೆಯಲ್ಲಿ ಕನ್ನಡವನ್ನು ಐಚ್ಛಿಕವಾಗಿ ಆಯ್ದುಕೊಂಡವರ ಪಠ್ಯಕ್ರಮದಲ್ಲಿ ಅಳವಡಿಸಲಾಗಿತ್ತು. (ಪೋರ್ಟ್‌ಸೆಂಟ್ ಜಾರ್ಜ್ ಗೆಜೆಟ್, ದಿನಾಂಕ 23-2-1858, ಪು.306)

ಮೊಗ್ಲಿಂಗನ 'ಕಂನಡ ಗಾದೆಗಳು' ಕನ್ನಡ ಗಾದೆಗಳ ಸಂಗ್ರಹ ಮತ್ತು ಅಧ್ಯಯನಕ್ಕೆ ನಾಂದಿಯಾಯಿತೆನ್ನಬಹುದು. ದೇಶೀಯ ಮತ್ತು ಪಾಶ್ಚಾತ್ಯ ಆಸಕ್ತರು ಕನ್ನಡ ಗಾದೆಗಳ ಸಂಗ್ರಹದತ್ತ ಗಮನ ಹರಿಸಿದರು. ಕನ್ನಡ ಗಾದೆಗಳಿಗೆ ಸಮಾನಾಂತರ ಇಂಗ್ಲೀಷ್ ಗಾದೆಗಳನ್ನು ಹುಡುಕುವ ಪ್ರಯತ್ನವೂ ಪ್ರಾರಂಭವಾಯಿತು. ರೆ. ಕಿಟ್ಟೆಲ್‌ರು ತಮ್ಮ ಕನ್ನಡ ನಿಘಂಟಿನಲ್ಲಿ (1894) ಕನ್ನಡ ಪದಗಳ ಅರ್ಥ ವಿವರಣೆ ಪದದ ಸಹಜ ಪ್ರಯೋಗ ತಿಳಿಸಲು ಗಾದೆಗಳನ್ನು ವಿಪುಲವಾಗಿ ಬಳಸಿಕೊಂಡಿದ್ದಾರೆ. ಮೊಗ್ಲಿಂಗನ ಸಂಗ್ರಹದ ಬಹಳಷ್ಟು ಗಾದೆಗಳು ಕಿಟ್ಟೆಲ್ ನಿಘಂಟಿನಲ್ಲಿ ಯಥಾವತ್ತಾಗಿ ಬಳಕೆಯಾಗಿರುವುದನ್ನು ಕಾಣಬಹುದು.

1894ರಲ್ಲಿ 'Popular Canarese Proverbs And Their English Equivalents' ಎಂಬ ಸಂಕಲನವನ್ನು ಮಂಗಳೂರು ಬಾಸೆಲ್ ಮಿಶನ್ ಪ್ರಕಟಿಸಿತು. ಶದ್ರಾಚ್ ಐಮನ್ ಮತ್ತು ಉಭಯದ ನರಸಿಂಗರಾವ್ ಎಂಬುವರು ಇದರ ಸಂಗ್ರಹಕಾರರು. ಶಾಲೆಗಳಲ್ಲಿ ಕಲಿಯುವವರಿಗೆ ಮತ್ತು ಸಾರ್ವಜನಿಕರಿಗೆ ಉಪಯುಕ್ತವಾಗಲಿ ಎಂಬ ದೃಷ್ಟಿಯಿಂದ ಹೆಚ್ಚು ಜನಪ್ರಿಯವೆನಿಸಿದ ಕನ್ನಡ ಗಾದೆಗಳಿಗೆ ಸಮಾನಾರ್ಥಕ ಇಂಗ್ಲೀಷ್ ಗಾದೆಗಳನ್ನು ಹುಡುಕಿ ಪ್ರಕಟಿಸಿರುವುದಾಗಿ ತಿಳಿಯುತ್ತದೆ. ಪುಸ್ತಕದ ಮುನ್ನುಡಿಯಲ್ಲಿ "If this first attempt should meet with success, similar collections in Proverbs will be published on parts like this" ಎಂದು ಸಂಗ್ರಹಕಾರರು ಹೇಳಿಕೊಂಡಿದ್ದಾರೆ. ಬಹುಶಃ ಇವರ ಮೊದಲ ಪ್ರಯತ್ನ ಜನಪ್ರಿಯವಾಗಿದ್ದಿರಲೇಬೇಕು. ಏಕೆಂದರೆ ಇದೇ ಸಂಗ್ರಹಕಾರರ "A Hand Book of Canarese Proverbs with English Equivalents" ಎಂಬ ಹೆಸರಿನಿಂದ 1906ರಲ್ಲೂ (ಮದ್ರಾಸ್‌ನಲ್ಲಿ ಮುದ್ರಿತ) ಬಾಸೆಲ್ ಮಿಶನ್ ವತಿಯಿಂದ 1912ರಲ್ಲೂ ಪುನರ್ ಮುದ್ರಣ ಕಂಡಿತು. 1903ರಲ್ಲಿ 'ವತ್ಸಕ್ರಿಸ್ತಾನುಜ' ಎಂಬುವನು three hundred canarese Proverbs and their corresponding english equivalents ಎಂಬ ಸಂಗ್ರಹವನ್ನು ಬಾಸೆಲ್ ಮಿಶನ್ ಪ್ರೆಸ್ ಮೂಲಕ ಪ್ರಕಟಿಸಿದನೆಂದು ತಿಳಿಯುತ್ತದೆ. (ಎಲ್.ಡಿ. ಬಾರ್ನೆಟ್ ಅವರ 'ಕೆಟಲ್ಯಾಗ್ ಆಫ್ ಕನ್ನಡ, ಬಡಗ ಅಂಡ್ ಕೂರ್ಗ್ ಬುಕ್ಸ್ ಇನ್ ದಿ ಲೈಬ್ರರಿ ಆಫ್ ಬ್ರಿಟಿಶ್ ಮ್ಯೂಸಿಯಂ'ನಲ್ಲಿ ನಮೂದಾಗಿದೆ)

ಎಸ್. ಐಮನ್ ಮತ್ತು ಉಭಯದ ನರಸಿಂಗರಾವ್ ಅವರ ಸಂಗ್ರಹದಲ್ಲಿ 150 ಕನ್ನಡ ಗಾದೆಗಳಿಗೆ ಇಂಗ್ಲೀಷ್ ಸಮಾನಾರ್ಥಕ ಗಾದೆಗಳನ್ನು ಕೊಟ್ಟಿದೆ. ಬಹುಪಾಲು ಕನ್ನಡ ಗಾದೆಗಳನ್ನು ಮೊಗ್ಲಿಂಗನ ಸಂಗ್ರಹದಿಂದ ಆಯ್ದುಕೊಳ್ಳಲಾಗಿದೆ. ಉದಾಹರಣೆಗಾಗಿ ಎರಡೂ ಸಂಗ್ರಹಗಳಲ್ಲಿರುವ ಕನ್ನಡ ಗಾದೆಗಳಲ್ಲಿ ಕೆಲವನ್ನು ಇಲ್ಲಿ ಕೊಟ್ಟಿದೆ.

ಅಲ್ಪಗೆ ಐಶ್ವರ್ಯ ಬಂದರೆ ಅರ್ಧ ರಾತ್ರಿಯಲ್ಲಿ ಕೊಡೆ ಹಿಡಿಸಿಕೊಂಡ.

No Pride like that of an enriched beggar.

ಊಟ ಬಲ್ಲವನಿಗೆ ರೋಗವಿಲ್ಲ, ಮಾತು ಬಲ್ಲವಗೆ ಜಗಳವಿಲ್ಲಾ.

Diet defies the Doctor.

ಕಳ್ಳ ಕಳ್ಳನಿಗೆ ಬಲ್ಲ

Set a thief to catch a thief.

ಹಂದಿಯವರು ಹಾದರ ಮಾಡಿದರೆ ಕುಮಟೆಯವರು ದಂಡ ತೆತ್ತರು.

One doth the blame, another bears the same.

1930-40ರ ಅವಧಿಯಲ್ಲಿ ಕನ್ನಡ ಜಾನಪದಕ್ಕೆ ಸಂಬಂಧಿಸಿದ ಕೆಲವು ಮಹತ್ವದ ಕೃತಿಗಳು ಪ್ರಕಟವಾಗಿವೆ. ಗರತಿ ಹಾಡು (1931) ಮಲ್ಲಿಗೆ ದಂಡೆ (1935) ಜೀವನ ಸಂಗೀತ (1933) ಹುಟ್ಟಿದ ಹಳ್ಳಿ ಹಳ್ಳಿಯ ಹಾಡು (1933) ಹಳ್ಳಿಯ ಹಾಡುಗಳು (1936) ಕರ್ನಾಟಕ ಸಂಸ್ಕೃತಿ ಇವು ಬೆಳಕು ಕಂಡ ಅವಧಿ

## POPULAR CANARESE

# PROVERBS.

1. ಅಂದಿಗೆ ಅದೇ ಸುಖ ಇಂದಿಗೆ ಇದೇ ಸುಖ.

   A contented mind is a continual feast.

2. ಅಕ್ಕಿ ಸರಿಯಾಗ ಬಾರದು, ಅಕ್ಕನ ಮಕ್ಕಳು ಬಡವಾಗ ಬಾರದು

   You cannot eat your cake and have it too.

   *Cf.* I cannot sell the cow and have the milk.

3. ಅಗಸರ ಕತ್ತೆ ಕೊಂಡುಹೋಗಿ ಡೊಂಬರಿಗೆ ಥ್ಯಾಗ ಹಾಕಿದ ಹಾಗೆ.

   Robbing Peter to pay Paul.

4. ಅಗಸಾಲೆ ಕಿವಿ ಚುಚ್ಚಿದರೆ ನೋವಿಲ್ಲ.

   The kick of the dam hurts not the colt.

5. ಅಡಿಕೆ ಉಡಿಯಲ್ಲಿ ಹಾಕ ಬಹುದು, ಮರವಾದ ಮೇಲೆ ಕೂಡದು.

   A colt you may break, but an old horse you never can.

   *Cf.* Best to bend while a twig.

6. ಅಡಿಕೆಗೆ ಹೋದ ಮಾನ ಆನೆ ಕೊಟ್ಟರೂ ಬಂದೀತೇ?

   A wounded reputation is seldom cured.

7. ಅತಿ ಆಶೆ ಗತಿಗೇಡು.

   Ambition plagues her proselytes.

‘ಪಾಪ್ಯುಲರ್ ಕ್ಯಾನರೀಸ್ ಪ್ರಾವರ್ಬ್ಸ್ ಅಂಡ್ ದೇರ್ ಇಂಗ್ಲೀಷ್ ಇಕ್ವಿವೆಲೆಂಟ್ಸ್’
ಪುಸ್ತಕದ ಮೊದಲ ಪುಟ

ಯಲ್ಲಿ ದಂಡಿನಶಿವರದ (ತುಮಕೂರು ಜಿಲ್ಲೆಯ ತುರುವೇಕೆರೆ ಹತ್ತಿರ) ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಕರಾಗಿದ್ದುಕೊಂಡು ಸುಮಾರು ಆರು ಸಾವಿರ ಗಾದೆಗಳನ್ನು (1934ರಲ್ಲಿ) ಸಂಗ್ರಹಿಸಿ ಕನ್ನಡ ಜಾನಪದಕ್ಕೆ 'ಅಳಿಲು ಸೇವೆ' ಸಲ್ಲಿಸಿದ ಅಳಿಲು ಘಟ್ಟದ ನರಸಿಂಹಮೂರ್ತಿಯವರು ಅಜ್ಞಾತವಾಗಿಯೇ ಉಳಿದಿದ್ದು ವಿಷಾದದ ಸಂಗತಿ. ಸಂಗ್ರಹಿಸಿದ್ದ ಗಾದೆಗಳನ್ನು ಪುಸ್ತಕ ರೂಪದಲ್ಲಿ ಪ್ರಕಟವಾಗುವುದನ್ನು ನೋಡಬೇಕೆಂಬ ಅವರ ಪ್ರಬಲ ಆಸೆ ಕನ

## ಹಲ್ಲುಗಳ ಬಗ್ಗೆ ಒಂದು ಪ್ರಮಾಣಿತ ಸತ್ಯಾಂಶ

ಶ್ವಾಸದ ದುರ್ವಾಸನೆಗೆ ಹಲ್ಲುಗಳಿಗಿಂತ
ಹೆಚ್ಚು ಒಸಡುಗಳು ಕಾರಣ

## ಇನ್ನೊಂದು ಪ್ರಮಾಣಿತ ಸತ್ಯಾಂಶ

ಕೇವಲ ಫೋರ್‌ಹೆನ್ಸ್‌ನ
ಅಪೂರ್ವ ಎಸ್ಟ್ರಿಂಜೆಂಟ್ ಒಸಡುಗಳನ್ನು
ಬಿಗಿ ಮಾಡಿ ಅವುಗಳನ್ನು ಆರೋಗ್ಯಪೂರ್ಣವಾಗಿಡುತ್ತದೆ.
ಶ್ವಾಸದ ದುರ್ವಾಸನೆ ಉಂಟಾಗುವುದೇ ಇಲ್ಲ.

ನೊರೆ-ನೊರೆಯ ಫೋರ್‌ಹೆನ್ಸ್
ನೀಲಿ ಬಣ್ಣದ ಪ್ಯಾಕ್‌ನಲ್ಲಿ.

Forhan's
Foaming Forhan's
Forhan's The toothpaste created by a dentist
For the gums




ಕದಲದ 32 ಓರ್ವ ದಂತವೈದ್ಯರಿಂದ ಸೃಷ್ಟಿಸಲ್ಪಟ್ಟ ಟೂಥ್‌ಪೇಸ್ಟ್.

27/88 Kn

ಸಾಗಿಯೇ ಉಳಿಯಿತು. ಮೊಗ್ಲಿಂಗ್ ಮತ್ತು ಕಿಟ್ಟೆಲ್‌ರನ್ನು ಬಿಟ್ಟರೆ ದೇಶೀಯರೊಬ್ಬರು ಸಂಗ್ರಹಿಸಿದ ಕನ್ನಡ ಗಾದೆಗಳ ಸಂಕಲನಗಳಲ್ಲಿ ಬಹುಶಃ ಇದೇ ಮೊದಲನೆಯದು ಹಾಗೂ ಗಾತ್ರವುಳ್ಳದ್ದು ಎನ್ನಬಹುದು. ಎ. ನರಸಿಂಹ ಮೂರ್ತಿ ಅವರು ಕಾವ್ಯವಾಚನ ಚತುರರೆಂಬ ಪ್ರಶಸ್ತಿ ಗಳಿಸಿದ್ದರು. ಲೇಖಕರೂ ಆಗಿದ್ದರು. ಇವರು ಸಂಗ್ರಹಿಸಿದ 6000 ಗಾದೆಗಳಲ್ಲಿ ಕೆಲವು ತಿ.ತಾ. ಶರ್ಮ ಅವರ ಸಂಪಾದಕತ್ವ ದಲ್ಲಿನ 'ವಿಶ್ವ ಕರ್ನಾಟಕ' ವಾರಪತ್ರಿಕೆಯಲ್ಲಿ ಪ್ರಕಟವಾದವು. ಆದರೆ ಬಹಳಷ್ಟು ಗಾದೆಗಳು ಹಸ್ತಪ್ರತಿಯಲ್ಲಿಯೇ ಉಳಿದವು. 'ಗಾದೆ ಮತ್ತು ನೀತಿ ರತ್ನಾಕರ' ಎಂಬುದು ಈ ಸಂಗ್ರಹದ ಹೆಸರು. ಮುನ್ನುಡಿಯಲ್ಲಿ (ಸಂಗ್ರಹಕಾರರು ಸೂಚನೆ ಎಂದು ಹೇಳಿದ್ದಾರೆ) "ನನಗೆ ಬಾಲ್ಯ ದಿಂದಲೂ ಪುಸ್ತಕಗಳನ್ನೋದುವುದರಲ್ಲಿ ಅಭಿ ಲಾಷೆ ಹೆಚ್ಚು. ಹೀಗೆ ಓದುತ್ತಿರುವಾಗ ಆ ಪುಸ್ತಕಗಳಲ್ಲಿರುವ ಗಾದೆ, ಒಗಟೆ, ಸ್ತೋತ್ರ, ಶ್ಲೋಕ, ನೀತಿವಾಕ್ಯಗಳು ಮೊದಲಾದುವು ಗಳನ್ನು ಆರಿಸಿ ಬರೆದಿಡುವುದು ನನ್ನ ಸ್ವಭಾವ" ಎಂದು ಸಂಗ್ರಹಕಾರರು ಹೇಳಿಕೊಂಡಿರುವುದ ರಿಂದ ಕೆಲವು ಗ್ರಂಥಸ್ತ ಗಾದೆಗಳು, ಶ್ಲೋಕ ಗಳು, ವಚನಗಳು, ಜನಪ್ರಿಯ ನುಡಿಗುಟ್ಟು ಗಳು ಈ ಸಂಗ್ರಹದಲ್ಲಿ ಸೇರಿರುವುದು ಸ್ವಾಭಾ ವಿಕ. ಉದಾ: 'ಕಾಡೆಲ್ಲ ಕಸುಗಾಯಿ ನಾಡೆಲ್ಲ ಹೆಗ್ಗಿಡವು', 'ಆಡಿದ ಮಾತು ನಿಜವಲ್ಲ ಮಲೆ ನಾಡ ಕಾಡು ಸಾಕು ಸರ್ವಜ್ಞ' 'ಇಂದು ವಿನ್ನೋಳ್ ಉರಿಯುಂಟೆ ಸಿಂಧುವಿನೋಳ್ ಅರಬುಂಟೆ, ಸಂದವೀರನೋಳ್ ಭಯವುಂಟೆ, ಭಕ್ತಗೆ ಸಂದೇಹ ಉಂಟೆ ಸರ್ವಜ್ಞ?' ಇತ್ಯಾದಿ.

ಬಹುಶಃ ಪತ್ರಿಕೆಯಲ್ಲಿ ಮುದ್ರಿಸಲು ಯೋಗ್ಯ ವಲ್ಲವೆಂಬ ದೃಷ್ಟಿಯಿಂದ ಅಶ್ಲೀಲವೆನಿಸಿದ ಗಾದೆಗಳ ಮೇಲೆ (ಹಸ್ತಪ್ರತಿಯಲ್ಲಿ) ಕೆಂಪು ಶಾಯಿಯಿಂದ ಗೆರೆ ಎಳೆಯಲಾಗಿದೆ. ಮೊದಲ ನೆಯ ಭಾಗದಲ್ಲಿ ಸುಮಾರು 1500 ಗಾದೆಗಳು ಎರಡನೇ ಭಾಗದಲ್ಲಿ 4200 ಗಾದೆಗಳನ್ನು ಕೊಟ್ಟಿರುವುದಾಗಿ ಸಂಗ್ರಹಕಾರರು ಮುನ್ನುಡಿ ಯಲ್ಲಿ ಹೇಳಿದ್ದಾರೆ (ಮೊದಲ ಭಾಗ ಲಭ್ಯ ವಿಲ್ಲ. ಎರಡನೇ ಭಾಗ ಕರ್ನಾಟಕ ರಾಜ್ಯಪತ್ರಾ ಗಾರದಲ್ಲಿ ಟಿ.ಟಿ. ಶರ್ಮ ಅವರ ಸಂಗ್ರಹ ದಲ್ಲಿದೆ).

ಕನ್ನಡ ಗಾದೆಗಳ ಸ್ವಾತಂತ್ರ್ಯಪೂರ್ವ ಸಂಗ್ರಹ ಗಳು ಭಾಷೆ ಮತ್ತು ಪ್ರಾದೇಶಿಕತೆಯ ದೃಷ್ಟಿ ಯಿಂದ ಅಧ್ಯಯನ ಯೋಗ್ಯ. ಕರ್ನಾಟಕ ಜಾನ ಪದ ಅಧ್ಯಯನ ಮತ್ತು ಸಂಗ್ರಹಗಳ ಇತಿಹಾಸ ವನ್ನು ಗುರುತಿಸಲೆತ್ನಿಸುವ ವಿದ್ವಾಂಸರಿಗೆ ಈ ಲೇಖನದಲ್ಲಿ ಪ್ರಸ್ತಾಪಿಸಿರುವ ಅಪೂರ್ವ ಸಂಗ್ರಹಗಳು ದಿಕ್ಸೂಚಿಯಾಗಬಹುದು. *



**ಕಿಟ್ಟೆಲ್ ಕೋಶದ ಗಾದೆಗಳು:**

- ದೊಡ್ಡವನ ಹೆಂಡತಿ ಎಲ್ಲರಿಗೂ ಅತ್ತೆ.
  ಬಡವನ ಹೆಂಡತಿ ಎಲ್ಲರಿಗೂ ಸೊಸೆ.
- ನುಚ್ಚು ಉಂಡ ಮಗನು ಇಚ್ಚೇಲಿ ಇರುವನು.
  ತುಪ್ಪ ಸಕ್ಕರೆ ಉಂಡ ಅಳಿಯ ತಿಪ್ಪೇಲಿ ನಿಂತು ಬೊಗಳುವನು.
- ಕೊಟ್ಟು ಬರುವ ನಿಷ್ಠುರಕ್ಕಿಂತ
  ಕೊಡದೇ ಬರುವ ಮುನಿಸೇ ಲೇಸು.

# ಶಬ್ದಾರ್ಥ ಚಿಂತಾಮಣಿ

• ಪಾವೆಂ •



## ವಿಮರ್ಶೆಯೆಂದರೆ ತಡಹುವುದು!

**"ವಿಮರ್ಶೆ"** ಮಾಡಿ ನೋಡಿದರೆ ಇದರಲ್ಲಿ ಏನೂ ಹುರುಳಿಲ್ಲ, ಎನ್ನುತ್ತೇವೆ. "ಪರಾಮರ್ಶೆ" ಮಾಡಿಯೇ ಈ ಕ್ರಮ ಕೈಕೊಂಡದ್ದಾಗಿದೆ, ಎನ್ನುತ್ತೇವೆ. ಎರಡಕ್ಕೂ ಸುಮಾರು ಒಂದೇ ತಾತ್ಪರ್ಯ ಸರಿಯಾಗಿ ಆಲೋಚನೆ ಮಾಡುವುದು, ಚರ್ಚೆ ಮಾಡುವುದು ಇತ್ಯಾದಿ. ಆದರೆ ಇದೀಗ ವಾಲ್ಮೀಕಿ ರಾಮಾಯಣ ಓದುತ್ತಿರುವಾಗ, ತಾನು ಅರಣ್ಯಕ್ಕೆ ಹೋಗುವುದನ್ನು ತಿಳಿಸಿ ಅಪ್ಪಣೆ ಪಡೆಯಲು ಕೌಸಲ್ಯೆಯ ಬಳಿ ಶ್ರೀರಾಮ ಹೋದ ಪ್ರಸಂಗದಲ್ಲಿ ಸುದ್ದಿ ಕೇಳಿ ಸ್ಮೃತಿ ತಪ್ಪಿ ನೆಲಕ್ಕೆ ಬಿದ್ದು ಹೊರಳಾಡಿದ ತಾಯಿಯನ್ನು ಮೇಲೆತ್ತಿ, ಮೈಯೆಲ್ಲ ಧೂಳಾದ ಅವಳನ್ನು ಆತ "ವಿಮಮರ್ಶ ಪಾಣಿನಾ" (ಕೈಯಿಂದ ವಿಮರ್ಶೆ ಮಾಡಿದನು) ಎಂಬ ವಾಲ್ಮೀಕಿ ಪ್ರಯೋಗವನ್ನು ಕಂಡು ಚಕಿತನಾದೆ. ತಾಯಿಯನ್ನು, ಅಥವಾ ಅವಳ ಮೈಯನ್ನು ವಿಮರ್ಶೆ ಮಾಡುವುದೆಂದರೇನು? ಅದೇನು ಪುಸ್ತಕವೋ ಅಥವಾ ಚರ್ಚಾ ಕೂಟದ ವಿಷಯವೋ! ಆದರೆ ಸಿದ್ಧಾಂತ ಕೌಮುದಿ ವ್ಯಾಕರಣ ಗ್ರಂಥವನ್ನು ತೆಗೆದು ನೋಡಿದರೆ "ಮೃಶ ಆಮರ್ಶನೇ ಅಮರ್ಶನಂ ಸ್ಪರ್ಶಃ (ಮೃಶ ಧಾತುವಿಗೆ ಆಮರ್ಶನವೆಂದರ್ಥ, ಆಮರ್ಶನವೆಂದರೆ ಮುಟ್ಟುವುದು) ಎಂದೇ ಹೇಳಿದ್ದಾರೆ. ಅರ್ಥಾತ್ ಶ್ರೀರಾಮ ತಾಯಿಯ ಮೈಯನ್ನು ತಡವಿ ಧೂಳು ಒರಸಿದ! ಧಾತುವಿನ ಅರ್ಥ ಹೀಗಿರುವಾಗ "ವಿಮರ್ಶೆ" ಎಂಬ ಪದ ನಾವು ತಿಳಿದ ಅರ್ಥಕ್ಕೆ ಹೇಗೆ ವಿಸ್ತಾರಗೊಂಡಿತು? ಕೈಯಾಡಿಸಿ ತಾನೇ ನಾವು ಪದಾರ್ಥಗಳ ಸರಿಯಾದ ಪರಿಚಯ ಮಾಡಿಕೊಳ್ಳುವುದು? ವಿಚಾರವೆಂದರೇನು? ಮನಸ್ಸಿನಿಂದ ತಡಹುವುದು. ಪರಾಮರ್ಶೆಯೆಂದರೂ ಸುಮಾರಾಗಿ ಅಷ್ಟೇ ಅರ್ಥ. "ವಿ""ಪರಾ" ಎಂಬ ಉಪಸರ್ಗಗಳ ಊರೆ ಇಟ್ಟು, ಅರ್ಥವನ್ನು ವಿಸ್ತರಿಸಲಾಗಿದೆ.

ಭಾಷೆಯಲ್ಲಿ ಭಾವಾತ್ಮಕ ಅಥವಾ ಅಮೂರ್ತ ವಿಷಯಗಳನ್ನು ವ್ಯಕ್ತಪಡಿಸುವುದಕ್ಕೆ ಮೂರ್ತ ಪದಾರ್ಥಗಳ ಅಥವಾ ಕ್ರಿಯೆಗಳ ಕುರಿತ ಶಬ್ದಗಳನ್ನು ಬಳಸುವುದು ಸಾರ್ವಭಾಷಿಕ ಲಕ್ಷಣವಾಗಿದೆ. ಶರೀರದ ಅಂಗಗಳ ಮತ್ತು ಅವುಗಳ ಕ್ರಿಯೆಗಳನ್ನು ಕುರಿತ ಶಬ್ದಗಳು ಅಮೂರ್ತ ಅಭಿವ್ಯಕ್ತಿಗೆ ನೆರವಾಗುವುದಂತೂ ಬಹಳ ಸಾಮಾನ್ಯ. ಕೈಗಳನ್ನೆ ಕುರಿತು ಹೇಳುವುದಾದರೆ "ಹಸ್ತಕ್ಷೇಪ" "ಕೈಯಾಸರೆ" ಇತ್ಯಾದಿ ಶಬ್ದಗಳನ್ನು ನೋಡಿ, ಇವೆಲ್ಲವುಗಳಲ್ಲಿ ಕೈಯ ಪ್ರತ್ಯಕ್ಷ ಸಂಬಂಧವಿಲ್ಲ. ಹಾಗೆಯೇ ಕಾಲು ಮತ್ತು ಅದರ ಕ್ರಿಯೆ ಕೂಡ. "ವಿಚಾರ" "ಪ್ರಚಾರ" "ಆಚಾರ" ಇವು ಕಾಲಿನ ಕ್ರಿಯೆಯಾದ "ಚರಣ"ದಿಂದ (ಚರ=ನಡೆ) ಹುಟ್ಟಿದವು. "ನಡತೆ" "ನಡವಳಿಕೆ" ಇತ್ಯಾದಿ ಕನ್ನಡ ಪದಗಳಿಗೂ ನಡೆಯುವ ಕ್ರಿಯೆಗೂ ಪ್ರತ್ಯಕ್ಷ ಸಂಬಂಧವಿಲ್ಲ. "ನನ್ನ ಮಾತು ನಡೆಯಲಿಲ್ಲ" ಎನ್ನುವಾಗ ನಡೆಯುವುದಕ್ಕೂ ಕಾಲಿನ ಚಲನೆಗೂ ನೇರ ಸಂಬಂಧವಿಲ್ಲ. ಸಂಸ್ಕೃತ "ಚರಿತ್ರ" "ಚರಿತ್ರೆ" ಕೂಡ ಹಾಗೆಯೇ. "ಕ್ರಮ" ಎಂದರೂ ನಡೆ ಅಥವಾ ಹೆಜ್ಜೆ "ನಿನ್ನ ಮೇಲೆ ಕ್ರಮ ತೆಗೆದುಕೊಳ್ಳಲಾಗುತ್ತದೆ" ಎನ್ನುವ ನಮ್ಮ ವಾಕ್ ಧೋರಣೆಗೂ steps will be taken

against you ಎಂಬ ಇಂಗ್ಲೀಷ್ ವಾಕ್ ಧೋರಣೆಗೂ ಏನೂ ವ್ಯತ್ಯಾಸವಿಲ್ಲ. ಕ್ರಮ ಎಂದರೂ step ಎಂದರೂ ಹೆಜ್ಜೆ.

"ಗಮನ" ಎನ್ನುವುದು ಇಂಥ ಇನ್ನೊಂದು ಶಬ್ದ. "ತರಗತಿಯಲ್ಲಿ ಪಾಠಕ್ಕೆ ಗಮನ ಕೊಡಲಿಲ್ಲ" ಎಂದು ನಾವು ಆಕ್ಷೇಪಿಸುವಾಗ "ಗಮನ" ಶಬ್ದದ ಮೂಲಾರ್ಥ ಹೋಗುವುದು ಎಂಬುದನ್ನು ಗಮನಿಸುವುದೇ ಇಲ್ಲ. ಪಾಠಕ್ಕೆ ಗಮನ ಕೊಡುವುದೆಂದರೆ ಹೇಳುವ ವಿಷಯದ ಕಡೆಗೆ ಹೋಗುವುದು. ಕಾಲಿನ ಕ್ರಿಯೆಯನ್ನು ತಲೆಗೆ ಕಟ್ಟಿದ್ದು ಇದು! ಅರ್ಥವಾಗದ್ದು "ಅಗಮ್ಯ" ಗಮನಕ್ಕೆ ಇರುವ ಇನ್ನೊಂದು ಅರ್ಥ ಮತ್ತು ದೂರಾನ್ವಯ ವಾದದ್ದು ಸಂಭೋಗ ಎಂಬರ್ಥದಲ್ಲಿ ಅದನ್ನು ಪ್ರಯೋಗಿಸುವುದುಂಟು. "ಅಗಮ್ಯಾಗಮನ" ಹೋಗಬಾರ ದವಳ ಕಡೆಗೆ ಹೋಗುವುದು ಎಂಬ ನೇರ ಅರ್ಥವುಳ್ಳ ಈ ಪದ ಪುಂಜವನ್ನು ಲೈಂಗಿಕ ಸಂಬಂಧಕ್ಕೆ ಅನ್ವಯಿಸಲಾಗಿದೆ. ತಾಯಿ, ಅಕ್ಕ, ತಂಗಿ, ಗುರುಪತ್ನಿ ಅಥವಾ ವಿವಾಹಿತ ಇಲ್ಲವೇ ಕೀಳು ಅಂತಸ್ತಿನ ಹೆಂಗಸಿನ ಸಂಗಡ ಮಾಡುವ ಲೈಂಗಿಕ ಸಂಬಂಧ ಅಗಮ್ಯಾಗಮನ. ಕನ್ನಡದಲ್ಲಿ ಕೂಡ ಕೆಲ ಪ್ರದೇಶಗಳಲ್ಲಿ "ಅವನ ಹತ್ತಿರ" ಅಥವಾ "ಅವಳ ಹತ್ತಿರ" ಹೋಗುವುದು ಎಂದರೆ ಸಂಭೋಗವೇ ಅಭಿಪ್ರೇತವಾಗಿದೆ. ತುಳುವಿನಲ್ಲಿ ಕೂಡ ಹಾಗೆಯೆ. ಮತ್ತೆ ಭಾರತೀಯ ಭಾಷೆಗಳಿಗಷ್ಟೆ ಇದು ಮಿತವಾಗಿಲ್ಲ. Polygamy, Monogamy ಮೊದಲಾದ ಗ್ರೀಕ್ ಮೂಲದ ಶಬ್ದಗಳಲ್ಲಿ gamy (=ಸಂ.ಗಮನ) ಕೂಡ ಈ ಪ್ರವೃತ್ತಿ ತೋರುತ್ತದೆ gamy= ವಿವಾಹ ಎಂದು ಶಬ್ದಕೋಶಗಳು ವಿವರಿಸುತ್ತವೆ.

ನಾಲಗೆಯ ಕ್ರಿಯೆಯನ್ನು ಮಾನಸಿಕ ಕ್ರಿಯೆಗೆ ತೊಡಕಿಸುವುದು ಉಂಟು. "ರಸಾಸ್ವಾದನೆ" ಪೂರ್ತಿ ನಾಲಗೆಗೆ ಸಲ್ಲುವ ಕೆಲಸ ರಸದ ರುಚಿ ನೋಡುವುದು (ನೋಡಿ ಮೆಚ್ಚುವುದು ಕೂಡ). ಆದರೆ ಕವಿತೆಯನ್ನು ಆಸ್ವಾದಿಸುವುದು ಸಂಗೀತವನ್ನು ಆಸ್ವಾದಿಸುವುದು ಪೂರ್ಣವಾಗಿ ಮಾನಸಿಕ ಕ್ರಿಯೆ. ಬುದ್ಧಿಯ ಮಾತು ಅವನಿಗೆ "ರುಚಿಸಲಿಲ್ಲ" ಎನ್ನುವಾಗಲೂ ನಾವು ನಾಲಗೆಯ ಕೆಲಸವನ್ನು ಮನಸ್ಸಿಗೆ ಅನ್ವಯಿಸುತ್ತೇವೆ.

ಇನ್ನೊಬ್ಬರ ವಿಚಾರದಲ್ಲಿ "ಮೂಗು ತುರುಕಿಸುವುದು" ಎಂಬ ವ್ಯಂಗ್ಯೋಕ್ತಿ ಬಹುಶಃ ಇಂಗ್ಲೀಷ್ ಪ್ರಭಾವದಿಂದ ಕನ್ನಡದಲ್ಲಿ ಉದ್ಭವಿಸಿದೆ. ಆದರೆ ದೇಶೀಯ ಭಾಷೆಗಳಲ್ಲಿಯೂ ಮೂಗಿನ ವ್ಯಾಪಾರವನ್ನು ಇತರತ್ರ ಅನ್ವಯಿಸುವುದು ಇಲ್ಲದೇ ಇಲ್ಲ. "ಅಧಿಕಾರ ಕಳೆದುಕೊಂಡ ಮೇಲೆ ಅವನನ್ನು ಮೂಸಿ ನೋಡುವವರಿಲ್ಲ". "ಅವನ ಕವಿತೆಗಳನ್ನು ಈಗ ಮೂಸುವವರಿಲ್ಲ" ಎಂಬವುಗಳನ್ನು ಉದಾಹರಿಸಬಹುದು. "ಅವನಿಗೆ ವಿದ್ಯೆಯ ಗಂಧವಿಲ್ಲ" ಎಂಬಲ್ಲಿ ಬೌದ್ಧಿಕ ಪರಿಣತಿಯನ್ನು ಪರಿಮಳಕ್ಕೆ ಹೋಲಿಸುತ್ತೇವೆ. ಸುಗಂಧವು ಅತ್ಯಂತ ಸೂಕ್ಷ್ಮ ಪ್ರಮಾಣದಲ್ಲಿದ್ದರೂ ಅದು ಇಡುಗದೆ ಇರುವುದಿಲ್ಲ. ವಿದ್ಯೆಯೂ ಹಾಗೆಯೆ.

ಮೂಗನ್ನಾಧರಿಸಿದ ನುಡಿ ಕಟ್ಟುಗಳಲ್ಲಿ ಕೆಲವು ಮೂಗನ್ನು ಆತ್ಮಗೌರವ, ಮರ್ಯಾದೆಯ ಸಂಕೇತವಾಗಿ ಬಳಸುವುದು ಕೌತುಕದ ವಿಷಯ. ದ್ರೌಪದಿ ಬಂದು ಕೀಚಕನಿಂದ ಕಾಪಾಡಲು ಕೋರಿದಾಗ ಭೀಮನು ಅಣ್ಣನ ಅಪ್ಪಣೆಗೆ ಕಟ್ಟುಬಿದ್ದು ತಾನು ಅಸಹಾಯನಾಗಿರುವುದನ್ನು ವಿವರಿಸುತ್ತ "ಈ ನಪುಂಸಕನೊಡನೆ ಹುಟ್ಟಿದ ನಾನು ಮೂಗುಳ್ಳವನೆ!" ಎಂದು ಪರಿತಪಿಸುತ್ತಾನೆ (ಕುಮಾರ ವ್ಯಾಸ) ಇದು ಬಹುಶಃ ಕೆಲವೊಂದು ಅಪರಾಧಕ್ಕೆ ಮೂಗನ್ನು ಕೊಯ್ಯುವ ಶಿಕ್ಷೆಕೊಡುವ ಪೌರಸ್ತ್ಯ ಪುರಾತನ ಸಂಪ್ರದಾಯದಿಂದ ಹುಟ್ಟಿದ ವಾಗ್‌ಧೋರಣೆ. ಹೀಗೆ ಮೂಗು ಕೊಯ್ಯುವುದೂ ಅವಮಾನ ಮಾಡುವುದೂ ಸಮೀಕೃತವಾಗಿ ಭಾಷೆಯಲ್ಲಿ ಬೇರೂರಿದೆ. ಸೇವಕನ ಮೂಗಿಗೆ ಸುಣ್ಣ ಬಳಿದು ಕಳಿಸಿದರೆ ಅದು ಯಜಮಾನನಿಗೆ ಮಾಡಿದ ಅವಮಾನ, ಅವನಿಗೆ ನೀಡಿದ ಕೆಣಕು ಎಂಬ ತಿಳವಳಿಕೆ ಕರ್ನಾಟಕದಲ್ಲಂತೂ ಇತ್ತು. "ಮೂಗು ತುರಿಸುವುದು" ಎಂಬುದು ಎದುರಾಳಿಯನ್ನು ಜಗಳಕ್ಕೆ ಕರೆಯುವುದು. ಎತ್ತರ ಮೂಗು ಇರುವುದು ಅಧಿಕಾರ ಪ್ರಭುತ್ವದ ಶಾರೀರಕ ಲಕ್ಷಣವೆಂದು ಪರಿಗಣಿಸುತ್ತಿದ್ದರು. ಈ ಅಂಗಲಕ್ಷಣವುಳ್ಳವರನ್ನು ಸಂಸ್ಕೃತದಲ್ಲಿ 'ಉನ್ನಸ' (ಉನ್ನತ ವಾದ ನಾಸಿಕವುಳ್ಳವನು) ಎನ್ನುತ್ತಾರೆ. ಪಾಶ್ಚಾತ್ಯರಲ್ಲಿ ಇಂಥ ಕಲ್ಪನೆ ಇಲ್ಲವೆಂದು ಕಾಣುತ್ತದೆ. ಆದರೆ ಪತ್ರಿಕೋದ್ಯೋಗದಲ್ಲಿ Nose for News, ಸುದ್ದಿಯನ್ನು ಗುರುತಿಸುವ ಮೂಗು, ಘ್ರಾಣಶಕ್ತಿ) ಎನ್ನುವಾಗ ಯಾವುದು ಮಹತ್ವದ ಜನ ಕೇಳಿ ಬಯಸುವ ಸುದ್ದಿ ಯಾವುದು ಅಲ್ಲ ಎಂಬ ಸಹಜ ನಿರ್ಣಯ ಶಕ್ತಿ ಎಂದು ತಾತ್ಪರ್ಯ. ಬಹುಶಃ ಪ್ರಬಲ ಘ್ರಾಣಶಕ್ತಿಯಿರುವ ನಾಯಿಯ ದೆಸೆಯಿಂದ ಈ ಕಲ್ಪನೆ ಇಂಗ್ಲಿಷ್ ಭಾಷೆಯಲ್ಲಿ ತಲೆಯೆತ್ತಿದೆ. *

# ಅಗ್ನೇಸ್

ಇಟಾಲಿಯನ್ ಕಥೆ



ಮೂಲ: ಆಲ್ಬರ್ಟೋ ಮೊರೆವಿಯಾ
ಅನು : ಪ್ರಿಯತಮ

ಆಗ್ನೇಸ್ ಹೀಗೆ ಅಚಾನಕವಾಗಿ ಹೋಗಿ ಬಿಡಬಾರದಿತ್ತು.

ಆಕೆ ಈ ಕುರಿತು ನನ್ನೊಡನೇನಾದರೂ ಪ್ರಸ್ತಾಪಿಸಿದ್ದರೆ ಅಥವಾ ಅದರ ಸುಳಿವಾದರೂ ನನಗೆ ಸಿಕ್ಕಿದ್ದಿದ್ದರೆ ಚೆನ್ನಾಗಿತ್ತು. ಇದರಲ್ಲಿ ನನ್ನದೇನೂ ತಪ್ಪಿಲ್ಲ ಎಂದು ಹೇಳುವ ಧೈರ್ಯವನ್ನು ನಾನು ಮಾಡುವುದಿಲ್ಲ. ನನ್ನ ಬಗ್ಗೆ ಆಗ್ನೇಸ್‌ಳ ತಕರಾರೇನಾದರೂ ಇದ್ದರೂ ಇರಬಹುದು. ಆದರೆ ಆಕೆ ಆ ಕುರಿತು ನನ್ನೊಡನೆ ಮಾತನಾಡಬೇಕಿತ್ತು. ಹಾಗಾಗಿದ್ದರೆ ಇಬ್ಬರೂ ಸೇರಿ ಇದಕ್ಕೇನಾದರೂ ಒಂದು ಪರಿಹಾರವನ್ನು ಕಂಡುಕೊಳ್ಳಬಹುದಾಗಿತ್ತು.

ವಸ್ತುಸ್ಥಿತಿ ಎಷ್ಟು ಸೋಜಿಗದ್ದಾಗಿದೆ ನೋಡಿ. ನಮ್ಮ ಮದುವೆಯಾದಂದಿನಿಂದ ಅಂದರೆ ಕಳೆದೆರಡು ವರ್ಷಗಳಿಂದ ಆಕೆ ಈ ರೀತಿ ಯೋಚಿಸಿರಬಹುದೆಂದೇ ನನಗನಿಸಿರಲಿಲ್ಲ. ಒಂದು ಸಲವೂ ನನ್ನ ಬಗ್ಗೆ ಆಕೆ ಗೊಣಗಲಿಲ್ಲ. ತಕರಾರು ಹೇಳಲಿಲ್ಲ. ನಾನೂ ಅಷ್ಟೇ. ಆದರೆ ಒಂದು ದಿನ ಇದ್ದಕ್ಕಿದ್ದ ಹಾಗೆಯೇ -ನಾನಿಲ್ಲದ ಸಮಯ ಸಾಧಿಸಿ ಓಡಿಹೋಗುವಂತೆ- ಹೋಗಿಬಿಟ್ಟಳಲ್ಲ. ನಮ್ಮನೆಯ ಕೆಲಸದಾಳಿಗೆ ಬೇರೆ ಮನೆಯಲ್ಲಿ ಇನ್ನೂ ಒಳ್ಳೆಯ ಸಂಬಳ ಸಿಕ್ಕುವಂತಾಗಿ ಓಡಿಹೋದ ಹಾಗೆ.

ಆಗ್ನೇಸ್ ಹೋಗಿ ಈಗ ಆರು ತಿಂಗಳಾಗಿವೆ. ಆದರೆ ಏನು ಕಾರಣವೆಂಬುದು ನನಗೆ ಈವರೆಗೂ ತಿಳಿದಿಲ್ಲ.

ಆ ದಿನ ನನಗಿನ್ನೂ ಚೆನ್ನಾಗಿ ನೆನಪಿದೆ. ಎಂದಿನಂತೆ ಮನೆಗೆ ಬೇಕಾಗುವ ಚಿಲ್ಲರೆ ಸಾಮಾನುಗಳನ್ನು ತರಲು ನಾನು ಪೇಟೆಗೆ ಹೋಗಿದ್ದೆ. ಪೇಟೆಯ ಈ ವ್ಯವಹಾರದಲ್ಲಿ ನಾನು ನಿಪುಣ. ಅಂಗಡಿಯವನೊಡನೆ ಚೌಕಾಶಿ ಮಾಡುವುದು ನನ್ನ ಹವ್ಯಾಸ. ಬೇಕಾದ ಸಾಮಾನುಗಳ ವಿವಿಧ ನಮೂನೆಗಳನ್ನು ನೋಡುವುದು, ನಂತರ ಅದರ ಬೆಲೆಯನ್ನು ನಾನು 'ನಿರ್ಧರಿಸು'ವುದು ನನಗೆ ಅಭ್ಯಾಸವಾಗಿಹೋಗಿದೆ. ಆದಿನ ಪೇಟೆಯಿಂದ ಸಾಮಾನುಕೊಂಡು ಮನೆಗೆ ಹಿಂದಿರುಗಿ ಬಂದಾಗ, ಪರದೆಗಳ ಕೆಳಗಿನ ಅಂಚಿಗೆ ಜಾಲರಿ ಹೊಲಿಯಲು ಬೇಕಾದ ಬಟ್ಟೆಯನ್ನು ತನ್ನಿ ಎಂದಾಕೆ ಹೇಳಿದ್ದು, ನಾನು ಮರೆತು ಬಂದದ್ದು ನೆನಪಾಗಿ, ಮತ್ತೆ ಪೇಟೆಗೆ ಓಡಿದೆ. ನಮ್ಮ ಅಡಿಗೆ ಮನೆಯ ಕಿಟಕಿಯ ಪರದೆಗೆ ಬೇಕಿತ್ತು ಆ ಜಾಲರಿ ಬಟ್ಟೆ.

ಪೇಟೆಯಲ್ಲಿ ಬಹಳ ಅಂಗಡಿಗಳನ್ನು ಹೊಕ್ಕು ಹೊರಬಂದ ನನಗೆ ಕೊನೆಗೆ ಒಂದು ಸಣ್ಣ ಅಂಗಡಿಯಲ್ಲಿ ಆ ಬಟ್ಟೆ ದೊರೆಯಿತು ಬಿಡಿ. ಮ್ಯಾಚಿಂಗ್ ಬಟ್ಟೆ ಹುಡುಕಬೇಕಲ್ಲ. ಮನೆಗೆ ಬಂದೆ. ಆ ಪರದೆಯ ಬಟ್ಟೆಗೂ ಈ ಜಾಲರಿ ಬಟ್ಟೆಗೂ ಹೊಂದಾಣಿಕೆ ಆಗುತ್ತದೋ ಎಂದು ನೋಡುವ ತರಾತುರಿ ನನ್ನದು. ಅಲ್ಲಿ ನನ್ನ ಟೇಬಲ್ ಮೇಲೆ ಶಾಯಿಯ ದೌತಿ ಮತ್ತು ಒಂದು ಲಕ್ಕೋಟೆ ಬಿದ್ದುಕೊಂಡಿರುವುದು ಕಾಣಿಸಿತು. ಟೇಬಲ್ ಕ್ಲಾತ್ ಮೇಲೆ ಶಾಯಿ ಬಿದ್ದು ಒಂದು ದೊಡ್ಡ ಕಲೆ ಆಗಿತ್ತು. ಆ ಕಲೆ ನನ್ನ ಗಮನ ಸೆಳೆಯಿತು.

"ಛಿ, ಈಕೆ ಇಷ್ಟು ಅಶಿಸ್ತಿನವಳಾದಳೆ? ಏಕೆ?" ಎಂದು ಜೋರಾಗಿಯೇ ಅಂದೆ. "ಒಳ್ಳೆಯ ಟೇಬಲ್ ಕ್ಲಾತ್ ಮೇಲೆ ಇಷ್ಟು ದೊಡ್ಡ ಶಾಯಿಯ ಕಲೆ!" ಅದನ್ನು ತೊಳೆಯಬೇಕೆಂದು ನಾನು ಬಚ್ಚಲು ಮನೆಗೆ ಅದನ್ನೊಯ್ದೆ. ಸೋಪು ಹಾಕಿ ಅದನ್ನು ತಿಕ್ಕಿತೊಳೆದೆ. ಬಹು ಪ್ರಯತ್ನದ ನಂತರ ಆ ಕಲೆಯನ್ನು ತೊಡೆದು ಹಾಕುವುದರಲ್ಲಿ ನಾನು 'ವಿಜಯಿ'ಯಾದೆ. ಅದನ್ನು ಒಣಗಲು ಹಾಕಿ ಹೊರ ಬಂದು ಟೇಬಲ್ ಮೇಲೆ ಬೇರೆ ಕ್ಲಾತ್ ಹಾಕಿದೆ. ಆ ವೇಳೆಗೆ ಸರಿಯಾಗಿಯೇ ನನಗೆ ಆ ಪತ್ರ ಕಣ್ಣಿಗೆ ಬಿದ್ದುದು.

ನನ್ನ ಹೆಸರಿಗೇ ಬರೆದ ಪತ್ರ! ಒಡೆದು ಓದತೊಡಗಿದೆ.

"ಪಾತ್ರೆಗಳನ್ನು ತಿಕ್ಕಿ ತೊಳೆದಿರಿಸಿದೆ. ನಿಮ್ಮ ಊಟವನ್ನೀಗ ನೀವೇ ತಯಾರಿಸಿಕೊಳ್ಳಿ. ನೀವು ರುಚಿಕಟ್ಟಾಗಿ ಅಡಿಗೆ ಮಾಡಬಲ್ಲಿರೆಂದು ನನಗೆ ಗೊತ್ತು. ನಾನು ತವರಿಗೆ ತೆರಳುತ್ತಿದ್ದೇನೆ. ಗುಡ್ ಬೈ —ಆಗ್ನೇಸ್."

ಕ್ಷಣ ಹೊತ್ತು ನನಗೇನೂ ತಿಳಿಯಲಿಲ್ಲ.



"ಏ... ಅದ್ಯಾಗೆ ರಾಯ್ರೆ ಮೂರು ತಿಂಗಳ ಮಾಸಿಕ ಶ್ರಾದ್ಧ ಒಟ್ಟಿಗೆ ಮಾಡೋದು...?"

ನಾನು ಮತ್ತೆ ಆ ಪತ್ರವನ್ನು ಓದಿದೆ. ಆಗ ಎಲ್ಲವೂ ಹೊಳೆಯಿತು.

ಆಗ್ನೇಸ್ ಹೊರಟು ಹೋಗಿದ್ದಳು.

ನನ್ನೊಂದಿಗೆ ಎರಡು ವರ್ಷ ವೈವಾಹಿಕ ಜೀವನ ನಡೆಸಿದ ಮೇಲೆ ನನ್ನ ಆಗ್ನೇಸ್ ಹೊರಟು ಹೋಗಿದ್ದಳು.

ನಾನು ಯಾವಾಗಲೂ ಪತ್ರ, ಬಿಲ್ಲು, ರಸೀದಿಗಳನ್ನಿಡುವ ಜಾಗದಲ್ಲೇ ಅಭ್ಯಾಸಬಲದಿಂದಲೇ ಆ ಪತ್ರವನ್ನೂ ಇಟ್ಟೆ.

ಹಾಗೇ ಒಂದು ಕುರ್ಚಿಯನ್ನೆಳೆದುಕೊಂಡು ಕಿಟಕಿಯ ಬಳಿ ಕುಳಿತೆ.

ಆಗ್ನೇಸ್ ಹೀಗೆ ಏಕಾಏಕಿ ಹೊರಟು ಹೋದದ್ದರಿಂದ ನನ್ನ ದೇಹದ ಅರ್ಧಭಾಗವೇ ಕಳಚಿಕೊಂಡು ಬಿಟ್ಟಂಥ ನೋವನ್ನು ನನಗೆ ತಂದಿತು. ಅದರಿಂದ ಚೇತರಿಸಿಕೊಳ್ಳುವುದು ನನಗೆ ಅಷ್ಟು ಸುಲಭದ್ದಾಗಿರಲಿಲ್ಲ.

ಕೆಲ ದಿನಗಳ ತುಮುಲದ ನಂತರ ಸ್ವಲ್ಪ ಸುಧಾರಿಸಿಕೊಂಡ ನಾನು ಈ ಘಟನೆಯ ಕಾರಣದ ಮೀಮಾಂಸೆ ಮಾಡಲು ತೊಡಗಿದೆ. ನನ್ನದೇನೂ ಎಳ್ಳಷ್ಟೂ ದೋಷ ಇದರಲ್ಲಿಲ್ಲ ಎಂದು ನನಗನಿಸಿತು. ಹೌದು, ನನ್ನದೇನೂ ತಪ್ಪಿರಲಿಲ್ಲ.

ನಾನೊಬ್ಬ ಸಚ್ಚರಿತ. ಕಾಲು ಜಾರುವುದಕ್ಕೆ ಶಕ್ಯವೇ ಇಲ್ಲ. ಹೆಂಗಸರನ್ನೆಂದೂ ಅರ್ಥಮಾಡಿಕೊಳ್ಳಲಾಗದವ ನಾನು. ಹಾಗೇ ಹೆಂಗಸರು ಕೂಡ ನನ್ನನ್ನು ಸರಿಯಾಗಿ ಅರ್ಥ ಮಾಡಿಕೊಂಡಿದ್ದಾರೆಂದು ನನಗನಿಸುವುದಿಲ್ಲ. ವಿವಾಹಾನಂತರ ಆಗ್ನೇಸ್‌ಳನ್ನು ಬಿಟ್ಟು ಇತರ ಹೆಣ್ಣುಗಳ ಅಸ್ತಿತ್ವದ ಬಗ್ಗೆ ನನ್ನ ದೃಷ್ಟಿಯಲ್ಲಿ ಏನೂ ಅರ್ಥವಿರಲಿಲ್ಲ.

ಆದರೆ ಆಗ್ನೇಸ್ ಮಾತ್ರ ಆಗೀಗ, "ಒಂದು ವೇಳೆ ನೀವು ಬೇರೆ ಸ್ತ್ರೀಯ ಪ್ರೇಮಪಾಶದಲ್ಲಿ ಸಿಲುಕಿದರೆ ಏನು ಮಾಡುತ್ತೀರಿ?" ಎಂದು ನನ್ನನ್ನು ಕೇಳುತ್ತಿದ್ದಳು.

"ಅದು ಸಾಧ್ಯವೇ ಇಲ್ಲ. ನಾನಂತೂ ನಿನ್ನನ್ನು ಮಾತ್ರ ಪ್ರೀತಿಸುತ್ತೇನೆ. ಕೊನೆಯುಸಿರಿನ ವರೆಗೂ ನಿನ್ನನ್ನೇ ಪ್ರೀತಿಸುತ್ತೇನೆ" ಎಂಬುದು ನನ್ನ ಉತ್ತರವಾಗಿರುತ್ತಿತ್ತು. ಆಕೆಯ ದೃಷ್ಟಿಯಲ್ಲಿದು ರೆಡಿಮೇಡ್ ಉತ್ತರ.

ನನ್ನ ನಡತೆಯೇನಾದರೂ ಬದಲಾಗುತ್ತಿದೆಯೇ? ನೀವೇ ನೋಡಿ- ವಾರಕ್ಕೆರಡು ಬಾರಿ ಸಿನೆಮಾಕ್ಕೆ ಹೋಗುತ್ತಿದ್ದೆವು. ವಾರಕ್ಕೆರಡು ಬಾರಿ ಹೋಟೇಲಿನಲ್ಲಿ ಊಟ ಮಾಡುತ್ತಿದ್ದೆವು. ಆಗ್ನೇಸ್ ಹೇಳಿದ ಜಾಗಕ್ಕೆ ಐಸ್ ಕ್ರೀಂ ತಿನ್ನಲು, ಕಾಫಿ ಕುಡಿಯಲು ಕರೆದೊಯ್ಯುತ್ತಿದ್ದೆ. ಓದುವುದು ಅವಳ ಹವ್ಯಾಸವಾದ್ದರಿಂದ ದಿನವೂ ವರ್ತಮಾನ ಪತ್ರಿಕೆಯೊಂದನ್ನು ಮನೆಗೆ ತರಿಸುತ್ತಿದ್ದೆ. ಸಚಿತ್ರ ವಾರಪತ್ರಿಕೆಗಳೆರಡನ್ನು ಕೂಡ ಅವಳಿಗಾಗಿ ಮನೆಗೆ ತರಿಸುತ್ತಿದ್ದೆ. ಶರದೃತುವಿನಲ್ಲಿ ಅಪೇರಾಕ್ಕೂ, ಬೇಸಿಗೆಯ ಧಗೆ ಶುರುವಾಯಿತೆಂದರೆ ಅವಳ ತವರು ಮನೆಗೂ ಕರೆದೊಯ್ಯುತ್ತಿದ್ದೆ.

ಯಾರೊಂದಿಗಾದರೂ ಮಾತನಾಡುವುದೆಂದರಾಗಲಿ, ನಾನು ಮಾತನಾಡುತ್ತಿರುವುದನ್ನು ಎದುರಿಗಿರುವ ವ್ಯಕ್ತಿ ಕೇಳಿಸಿಕೊಳ್ಳುತ್ತಿದ್ದಾನೆಂಬುದನ್ನು ನೋಡುವುದೆಂದರಾಗಲಿ ನನಗೆ ತುಂಬ ಇಷ್ಟ. ತೀರ ಆತ್ಮೀಯನೊಂದಿಗೆ ಮಾತನಾಡುತ್ತಿದ್ದರಂತೂ ಇದು ನನಗೆ ಕೊಡುವ ಆನಂದ ಇಮ್ಮಡಿಯಾಗುತ್ತದೆ.

ಹಾಗೆ ನೋಡಿದರೆ ಗೃಹಕೃತ್ಯಗಳೆಂದರೆ ನನಗೆ ಬಹಳ ಆಸಕ್ತಿ. ಮನೆಗೆ ಬೇಕಾಗುವ ಸಾಮಾನುಗಳನ್ನು ಕೊಂಡು ತರುವುದು, ಫರ್ನಿಚರ್‌ಗಳನ್ನು ಸ್ವಚ್ಛಮಾಡುವುದು, ಆಗೀಗ ಅಡಿಗೆಯನ್ನೂ ಮಾಡುವುದು ಇತ್ಯಾದಿ. ಈ ಕುರಿತು ಮಾತನಾಡುವುದೆಂದರೂ ಇಷ್ಟವೆ. ಅದೂ ಮತ್ತೆ ಮತ್ತೆ ಅದನ್ನೇ ಅದನ್ನೇ. ಒಮ್ಮೊಮ್ಮೆ ಆಗ್ನೇಸ್ ಇದನ್ನು ಗಮನಿಸಿದಳೋ —ನನ್ನ ತಪ್ಪು ನನಗರಿವಾಗುತ್ತಿತ್ತು.

ನನ್ನ ನೆರೆಹೊರೆಯ ಗಂಡಸರೆಲ್ಲ ಸಾಮಾನ್ಯವಾಗಿ ಆಫೀಸಿಗೆ ಹೋಗುವವರು. ಸ್ವಂತದ ಬಿಜಿನೆಸ್ ನೋಡಿಕೊಳ್ಳುವವರು, ಏನೂ ಕೆಲಸವಿಲ್ಲದಿದ್ದರೆ ಮಿತ್ರರನ್ನು ಕೂಡಿಹಾಕಿಕೊಂಡು ಹರಟೆ ಹೊಡೆಯುವವರು. ನನಗೆ ಮಾತ್ರ ಮನೆಯೇ ಆಫೀಸು. ಆಗ್ನೇಸಾಳೆ ಬಾಸು. ಒಂದರೆಕ್ಷಣವೂ ನನ್ನ ದೃಷ್ಟಿಯಿಂದ ಆಕೆಯಾಗಲಿ, ಆಕೆಯ ದೃಷ್ಟಿಯಿಂದ ನಾನಾಗಲಿ ಅಗಲುತ್ತಿರಲಿಲ್ಲ.

ಆಗ್ನೇಸ್ ಅಡಿಗೆ ಮಾಡುತ್ತಿದ್ದರೆ ನಾನು ಅಡಿಗೆ ಮನೆಯಲ್ಲೇ ಸುಳಿದಾಡುತ್ತಿದ್ದೆ. 'ಪಾಕಶಾಸ್ತ್ರ'ವನ್ನೋದುತ್ತ ಹೊಸರುಚಿ ತಯಾರಿಸುವುದರಲ್ಲಿ ನಾನು ನಿಸ್ಸೀಮ. ಆದರೆ ಆಗ್ನೇಸ್‌ಳಿಗೆ ಊಟ ತಿಂಡಿಗಳಲ್ಲಿ ಹೆಚ್ಚಿನ ಆಸಕ್ತಿಯೇ ಇರಲಿಲ್ಲ. ಕಳೆದ ಕೆಲವು ದಿನಗಳಿಂದಲಂತೂ ಆಕೆಯ ಹಸಿವು ಸತ್ತೇಹೋಗಿತ್ತೋ ಏನೋ. ಎಷ್ಟೋ ಸಲ ಎದುರಿನ ತುಂಬಿದ ತಟ್ಟೆ ತುಂಬಿದಂತೆಯೇ ಇರುತ್ತಿತ್ತು.

ಒಂದು ಸಲ ಆಗ್ನೇಸ್ ಅಂದಿದ್ದಳು— "ನಿಮ್ಮನ್ನು ಆ ಸೃಷ್ಟಿಕರ್ತ ಅದೇಕೆ ಪುರುಷನನ್ನಾಗಿ ಹುಟ್ಟಿಸಿದನೋ ನನಗೆ ತಿಳಿಯುವುದಿಲ್ಲ. ನಿಜವಾಗಿ ನೋಡಿದರೆ ನೀವು ಹೆಂಗುಸೇ. ಕೇವಲ ಹೆಂಗುಸಲ್ಲ- ಆದರ್ಶ ಗೃಹಿಣಿ!"

ಆಕೆ ಏನೇ ಅಂದರೂ ನನಗೆ ಕೋಪ ಬರುತ್ತಿರಲಿಲ್ಲ. ಸುಮ್ಮನೇ ನಕ್ಕುಬಿಡುತ್ತಿದ್ದೆ.

"ಇವತ್ತು ನಾನು ಇಂಥಿಂಥ ಕಡೆ ಹೋಗಬೇಕು. ಇಂಥಿಂಥವರನ್ನು ಭೇಟಿಯಾಗಬೇಕು. ಬಹುಶಃ ನಿಮಗೆ ಇಂಥದರಲ್ಲಿ-ಇಂಥವರಲ್ಲಿ ಆಸಕ್ತಿಯಿರಲಿಕ್ಕಿಲ್ಲ." ಎಂದು ಆಕೆ ಹೇಳಬೇಕು.

"ಅದರೇನಂತೆ? ನಾನು ಮಾತ್ರ ನಿನ್ನ



"ರಾಮನ ಪಾತ್ರವನ್ನ ವಾಕ್ಯಗಳಲ್ಲಿ ಚಿತ್ರಿಸೋ ಅಂದ್ರೆ... ಅರುಣ್ ಗೋವಿಲ್ ಚಿತ್ರ ಬರೆದಿದೀಯಾ... ಮುಠ್ಠಾಳ...?!"

ಜೊತೆಗೇ ಬರುವೆ. ಇಲ್ಲಿ ಒಬ್ಬನೇ ಕುಳಿತು ನಾನೇನು ಮಾಡಲಿ?" ನಾನು ಉತ್ತರಿಸಬೇಕು:

"ಬರಬಹುದು. ಬೇಡ ಅಂತ ನಾನ್ಯಾಕೆ ಹೇಳಲಿ? ಆದ್ರೆ ನಿಮಗೆ ಅಲ್ಲಿ ತುಂಬಾ ಬೋರ್ ಆಗುತ್ತೆ ಅಷ್ಟೆ." ತಡಮಾಡದೆ ಆಕೆ ಸಿದ್ಧ ಉತ್ತರ ಬಂದೇಬಿಡಬೇಕು.

...... ಎಷ್ಟು ಒಂದಾಗಿದ್ದೆವು ನಾವು!

ಹೊರಟು ಹೋಗುವ ಮೊದಲು ಆಕೆ ಎಲ್ಲವನ್ನೂ ವಿಚಾರ ಮಾಡಬೇಕಾಗಿತ್ತು. ಇಂಥ ಸ್ಥಿತಿಯಲ್ಲೂ ಅಗ್ನೇಸ್ ಮನೆಬಿಟ್ಟು ಏಕೆ ಹೋಗಬೇಕಿತ್ತು? ಯೋಚಿಸುತ್ತಾ ನಾನು ನಮ್ಮ ಅಂಗಡಿಗೆ ಬಂದೆ. ಅಪ್ಪ ಲೆಕ್ಕ ಬರೆಯುತ್ತ ಕೂತಿದ್ದರು.

"ಅಪ್ಪಾ, ಅಗ್ನೇಸ್ ಹೊರಟುಹೋದಳು..." ಎಂದೆ ಗದ್ಗದಿತನಾಗಿ.

ಲೆಕ್ಕದ ಪುಸ್ತಕದಿಂದ ಕೊಂಚವೇ ತಲೆಯೆತ್ತಿ, ಕನ್ನಡಕದ ಮೇಲಂಚಿನಿಂದ ನನ್ನನ್ನು ದೃಷ್ಟಿಸಿ, ತಮ್ಮ ತೆಳ್ಳಗಿನ ಮೀಸೆಯ ಕೆಳಗೊಂದು ತೆಳುವಾದ ನಗೆಯನ್ನು ಸೂಸಿದರು. ನಂತರ,

"ತುಂಬ ದುಃಖದ ಸಂಗತಿ. ನನಗೆ ತುಂಬ ಕೆಡುಕೆನಿಸಿತು ಕೇಳಿ. ಯಾಕೆ, ಯಾಕೆ ಹೀಗಾಯಿತು?" ಎಂದರು.

ನಾನೂ ಸಾದ್ಯಂತ ವಿವರಣೆ ನೀಡಿದೆ.

"ನನಗೆ ತುಂಬ ನೋವಾಗಿದೆ ಅಪ್ಪಾಜಿ. ಅಗ್ನೇಸ್ ಹೀಗೇಕೆ ಮಾಡಬೇಕಿತ್ತು ಹೇಳಿ."

"ಇದು ನಿನಗೆ ಮೊದಲೇ ಗೊತ್ತಾಗಲಿಲ್ಲವೇ?"

"ಇಲ್ಲ."

"ಅಲ್ಫ್ರೆಡ್, ನಿನ್ನನ್ನು ಹೇಗೆ ಸಮಾಧಾನಪಡಿಸಬೇಕೋ ತಿಳಿಯುತ್ತಿಲ್ಲ. ನೀನು ನನ್ನ ಮಗ. ನಿನ್ನನ್ನು ಪ್ರೀತಿಸುತ್ತೇನೆ. ಎಲ್ಲ ನಿಜವೇ. ಆದರೆ ನಿನ್ನ ಹೆಂಡತಿಯ ಮನೋಗತ ನನಗೆ ಹೇಗೆ ತಿಳಿಯಬೇಕು ಹೇಳು."

"ಆದರೆ ಅಪ್ಪಾಜಿ, ಆಕೆ ಹೀಗೇ ಯಾಕೆ ಮಾಡಬೇಕಿತ್ತು?"

ಅಪ್ಪಾಜಿ ತಲೆಯಾಲ್ಲಾಡಿಸಿ, "ನಿನ್ನ ಜಾಗದಲ್ಲಿ ನಾನೇನಾದರೂ ಇದ್ದಿದ್ದರೆ ಈ ಘಟನೆಯ ಬಗ್ಗೆ ಇಷ್ಟೊಂದು ತಲೆ ಕೆಡಿಸಿಕೊಳ್ಳುತ್ತಿರಲಿಲ್ಲ. ಅದರ ಬಗ್ಗೆ ಆಳವಾಗಿ ಯೋಚನೆಯನ್ನೂ ಮಾಡುತ್ತಿರಲಿಲ್ಲ. ಇರಲಿ ಬಿಡು. ಅಗ್ನೇಸ್ ಮನೆಬಿಟ್ಟು ಹೋದುದರ ಹಿಂದಿನ ಕಾರಣವನ್ನು ಹುಡುಕಿ ತೆಗೆಯುವುದರಿಂದ ಈಗ ನಿನಗೇನು ಸಿಗುತ್ತದೆ?"

"ಸಿಗುವುದಂತೂ ಏನೂ ಇಲ್ಲ. ಆದರೆ ನನ್ನ ದೃಷ್ಟಿಯಲ್ಲಿ ಇದು ತುಂಬ ಮಹತ್ವದ ಘಟನೆ. ಅದರ ಪೂರ್ವಾಪರಗಳನ್ನು ನಾನು ಯೋಚಿಸಲೇಬೇಕು."

ಅಪ್ಪ ಸುಮ್ಮನಾದರು.

ಆ ದಿನದಿಂದ ಅಗ್ನೇಸ್‌ಗಾಗಿ ಕಾಯುತ್ತಲೇ ಇದ್ದೇನೆ. ನನ್ನಂಥ ಗಂಡ ಅವಳಿಗೆ ಈ ಜಗತ್ತಿನಲ್ಲೆಲ್ಲೂ ಸಿಗಲಿಕ್ಕಿಲ್ಲ.

ಆದರೆ ಅವಳೂ 'ನನ್ನಂಥ ಹೆಂಡತಿ ಆಲ್ಫ್ರೆಡ್‌ಗೆ ಬೇರೆಲ್ಲೂ ಸಿಕ್ಕಲಿಕ್ಕಿಲ್ಲ' ಎಂದುಕೊಂಡಿದ್ದರೆ...?"

ತಾನು ಮನೆಬಿಟ್ಟು ಹೋದುದೇಕೆ ಎಂಬ ಪ್ರಶ್ನೆಗೆ ಉತ್ತರ ಕೊಡುವವರೆಗೂ ನಾನಾಕೆಯನ್ನು ಮನೆಯೊಳಗೆ ಕಾಲಿಡಲು ಬಿಡಲಾರೆ."

## ವಿಷಾದ ಜ್ಞಾಪಕ ಚಿಹ್ನೆಗಳು

*ಖ್ಯಾತ ಫ್ರೆಂಚ್ ನಟ ಜಾರ್ಜ್ ಲವ್‌ಕಾಟನ್ ಮದುವೆ ನಿಶ್ಚಿತವಾಗಿತ್ತು. ಆದರೆ ಮದುವೆಯ ದಿನ ನಿಶ್ಚಿತ ಸಮಯಕ್ಕೆ ವಧುವಿನ ತಂದೆ ಕೆಲವು ಅನಿವಾರ್ಯ ಕಾರಣಗಳಿಂದ ಅವರಿಗೆ ಮದುವೆ ಮಾಡದೆ ಹೊರಟು ಹೋದ. ಆಗ ವಧುವಿಗೆ ದುಃಖವನ್ನು ತಡೆದುಕೊಳ್ಳಲಾಗಲಿಲ್ಲ. ತಕ್ಷಣ ಜಾರ್ಜ್ ತನ್ನ ಕರ ವಸ್ತ್ರದಿಂದ ಅವಳ ಕಣ್ಣೀರನ್ನು ಮೃದುವಾಗಿ ಒರೆಸಿದ. ನಂತರ ಜಾರ್ಜ್ ಆ ಕರ ವಸ್ತ್ರವನ್ನು 20 ವರ್ಷಗಳವರೆಗೆ ವಿಷಾದ ಜ್ಞಾಪಕ ಚಿಹ್ನವಾಗಿ ಭದ್ರವಾಗಿ ಇಟ್ಟುಕೊಂಡ. ಒಂದು ದಿನ ಅದು ಎಲ್ಲಿಯೋ ಕಳೆದು ಹೋಯಿತು. ತುಂಬ ಹುಡುಕಾಡಿದ ಆತ ಕೊನೆಗೆ ಅದನ್ನು ಹುಡುಕಿಕೊಟ್ಟವರಿಗೆ 26,000 ರೂಪಾಯಿಗಳಷ್ಟು ಬಹುಮಾನವನ್ನು ಕೊಡುವುದಾಗಿ ಪ್ರಕಟಿಸಿದ.*

● ಎಂ.ವಿ. ಸುಬ್ಬರಾವ್

# ಸ್ತನದ ಕ್ಯಾನ್ಸರ್

● ಡಾ|| ಎಚ್.ಡಿ. ಚಂದ್ರಪ್ಪಗೌಡ ●

ಆಧುನಿಕ ಮಹಿಳೆಯರ ಅನಾರೋಗ್ಯದ ಆತಂಕಗಳಲ್ಲಿ ಮೊಲೆಗಳ ಕ್ಯಾನ್ಸರು ಅತಿ ಹೆಚ್ಚು ಭಯವನ್ನುಂಟು ಮಾಡುವ ಕಾಯಿಲೆಯಾಗಿ ಪರಿಣಮಿಸುತ್ತಿದೆ. ಮಹಿಳೆಯರಲ್ಲಿ ಉದ್ಭವಿಸುವ ಕ್ಯಾನ್ಸರ್‌ಗಳಲ್ಲೆಲ್ಲಾ ಅದರ ಪ್ರಮಾಣ ಹೆಚ್ಚಾಗಿರುವುದಲ್ಲದೆ ತೀವ್ರ ಪರಿಣಾಮಗಳನ್ನುಂಟುಮಾಡುವುದೇ ಇದಕ್ಕೆ ಕಾರಣವೆನ್ನಬಹುದು.

ಸ್ತನದ ಕ್ಯಾನ್ಸರ್‌ನ ಉದ್ಭವ ಬೆಳವಣಿಗೆ ಮತ್ತು ಪರಿಣಾಮಗಳ ಸರಿಯಾದ ಅರಿವಿಗೆ ಅವುಗಳ ರಚನೆ ಮತ್ತು ಕಾರ್ಯವಿಧಾನಗಳ ಬಗೆಗೆ ಅಲ್ಪ ಮಾಹಿತಿಯಾದರೂ ಅವಶ್ಯಕ.

ನಮ್ಮ ಶರೀರದಲ್ಲಿ ಬೆವರನ್ನು ಸುರಿಸುವ ಗುಂಪಿನ ಗ್ರಂಥಿಗಳೇ ಹಾಲು ಸ್ರವಿಸುವ ಗ್ರಂಥಿಗಳಾಗಿ ಮಾರ್ಪಾಡಾಗಿವೆ. ಅತ್ಯಂತ ಕಿರಿದಾದ ಸಾವಿರಾರು ಗ್ರಂಥಿಗಳು ಒಂದುಗೂಡಿ ಒಂದೊಂದು ಮೊಲೆಯಲ್ಲಿ ಹತ್ತಿಪ್ಪತ್ತು ಹಾಲೆಗಳಿವೆ(Lobes). ಅವುಗಳ ದ್ವಾರಗಳು ಒಗ್ಗೂಡಿ ಮೊಲೆ ತೊಟ್ಟಿನ ಮೂಲಕ ಹಾಲನ್ನು ಸುರಿಸುವ ಏರ್ಪಾಡಾಗಿದೆ. ಈ ಹಾಲೆಗಳ ನಡುವೆ ಕೊಬ್ಬಿನಂಶವಿರುವ ನಾರುಗಂತಿ ಕಣಜಾಲ(Fibro-fatty Tissue) ತುಂಬಿಕೊಂಡಿರುವುದರಿಂದ ಸ್ತನಗಳಿಗೆ ಆಕರ್ಷಕ ಆಕಾರ ಉಂಟಾಗುತ್ತದೆ. ಯೌವನಾವಸ್ಥೆಗೆ ತಲುಪುವವರೆಗೂ ಸುಪ್ತವಾಗಿರುವ ಸ್ತನದ ಗ್ರಂಥಿಗಳು ಆಗ ಸ್ರವಿಸಲಾರಂಭಿಸುವ ಕೆಲವು ಲೈಂಗಿಕ ಹಾರ್ಮೋನುಗಳ ಪ್ರಭಾವದಿಂದ ಚುರುಕುಗೊಳ್ಳುತ್ತವೆ. ಈ ಸಮಯದಲ್ಲಿ ಯುವತಿಯಲ್ಲಾಗುವ ಋತುಸ್ರಾವದ ಆರಂಭ, ಧ್ವನಿ ಬದಲಾವಣೆಗಳಂತೆ ಸ್ತನಗಳಲ್ಲೂ ಗಾತ್ರ, ಆಕಾರದಲ್ಲಿ ಗಮನಾರ್ಹ ಬದಲಾವಣೆಗಳಾಗುತ್ತವೆ. ಮುಂದೆ, ಗರ್ಭಾವಸ್ಥೆ ಬಾಣಂತನ ಮೊಲೆಯುಣಿಸುವ ಅವಧಿ ಹಾಗೂ ಅಂತಿಮವಾಗಿ "ಮುಟ್ಟು ನಿಲ್ಲುವಿಕೆ" ಮುಂತಾದ ಎಲ್ಲಾ ಹಂತಗಳಲ್ಲೂ ಮೊಲೆಗಳು ಹಲವು ತರದ ಹಾರ್ಮೋನುಗಳ ಪ್ರಚೋದನೆಗಳಿಗೆ ಸ್ಪಂದಿಸಬೇಕಾಗುತ್ತದೆ. ಅವುಗಳಲ್ಲಿ ನಿರಂತರ ಬದಲಾವಣೆಗಳು ಕ್ರಮಬದ್ಧವಾಗಿ, ಪ್ರತಿ ತಿಂಗಳೂ

ಜರುಗುತ್ತಿರುತ್ತವೆ. ಗರ್ಭಕೋಶವನ್ನುಳಿದು ದೇಹದ ಇನ್ನಾವ ಅಂಗದಲ್ಲೂ ಸ್ತನಗಳಲ್ಲಾಗುವಷ್ಟು ತ್ವರಿತಗತಿಯ ಬದಲಾವಣೆಗಳಾಗಲಾರವು. ಯಾವುದೇ ಕಾರಣದಿಂದ ಈ ಬದಲಾವಣೆಗಳ ಹಂತದಲ್ಲಿ ಅಡೆತಡೆಗಳುಂಟಾದರೆ ಮೊಲೆಗಳು ರೋಗಗ್ರಸ್ತವಾಗಬಹುದು. ಲೈಂಗಿಕ ಚೋದಸಿಗಳು ಸ್ರವಿಸುವ ಕಾಲ ಮತ್ತು ಪ್ರಮಾಣದಲ್ಲಿ ವ್ಯತ್ಯಾಸಗಳುಂಟಾದಾಗ ಇಂಥ

ಏಪರುತೊಡರುಗಳಾಗುವುದು ಸ್ವಾಭಾವಿಕ. ಸ್ತನಗಳ ಪ್ರಮುಖ ಜೈವಿಕ ಉದ್ದೇಶವಾದ ಮೊಲೆಯುಣಿಸುವುದನ್ನು ಅಕಾಲಿಕವಾಗಿ ಮೊಟಕುಗೊಳಿಸುವ ಪರಿಪಾಠ ಈಗ ವ್ಯಾಪಕವಾಗುತ್ತಿರುವುದೇ ಮೊಲೆಗಳ ಕ್ಯಾನ್ಸರ್ ಉದ್ಭವಿಸುವ ಪ್ರಮಾಣ ಏರುತ್ತಿರುವುದಕ್ಕೆ ಕಾರಣ.

ಸ್ತನಗಳ ಕ್ಯಾನ್ಸರ್ ಶ್ರೀಮಂತ ದೇಶಗಳ ಅವರಲ್ಲೂ ಸಮಾಜದ ಮೇಲ್ವರ್ಗದ ಮಹಿಳೆಯರಲ್ಲಿ ಹೆಚ್ಚಾಗಿ ಉದ್ಭವಿಸುವ ಕಾಯಿಲೆಯೆಂಬುದಕ್ಕೆ ಪುರಾವೆಗಳಿವೆ. ಅಮೆರಿಕಾದಲ್ಲಿ ಪ್ರತಿ ಹನ್ನೊಂದು ಜನ ಮಹಿಳೆಯಲ್ಲೊಬ್ಬರಿಗೆ ಇದರ ಸಾಧ್ಯತೆ ಇದ್ದರೆ ಸಾವಿರದಲ್ಲೊಬ್ಬ ಸ್ತ್ರೀಯಲ್ಲಿ ಸ್ತನದ ಕ್ಯಾನ್ಸರ್ ಆಗುವ ಅಂದಾಜಿದೆ. ಭಾರತದ ಪಾರ್ಸಿ ಮತ್ತು ಸಿಂಧಿ ಪಂಗಡದ ಸುಮಾರು 360 ಹೆಂಗಸರಲ್ಲೊಬ್ಬರಿಗೆ ಸ್ತನದ ಕ್ಯಾನ್ಸರ್ ಉಂಟಾಗುವುದು ಕಂಡುಬಂದಿದೆ.

ಮೈಯೊಳಗಿನ ಕೆಲವು ಜೈವಿಕ ಹಾಗೂ ಹಾರ್ಮೋನು ವ್ಯವಸ್ಥೆಗಳ ಪರಸ್ಪರ ಕ್ರಿಯೆಗಳ ಪರಿಣಾಮವೇ ಮೂಲಭೂತವಾಗಿ ವ್ಯಕ್ತಿಯಲ್ಲಿ ಸ್ತನದ ಕ್ಯಾನ್ಸರ್ ಆರಂಭವಾಗುತ್ತದೆಂಬ ಅಭಿಪ್ರಾಯಕ್ಕೆ ಹೆಚ್ಚಿನ ಬೆಂಬಲವಿರುವುದಾದರೂ ಈ ಕ್ಯಾನ್ಸರ್ ಆಗುವ ಸಾಧ್ಯತೆಗಳನ್ನು ಮೊದಲೇ ಗುರುತಿಸಲು ಕೆಲವು ಮಾರ್ಗಗಳಿವೆ.

ಅನುವಂಶಿಕತೆ ಅವುಗಳಲ್ಲೊಂದು. ತಾಯಿ, ಸಹೋದರಿಯರು ಮತ್ತು ಹತ್ತಿರದ ರಕ್ತ ಸಂಬಂಧಿಗಳಲ್ಲಿ ಮೊಲೆಯ ಕ್ಯಾನ್ಸರ್ ಆದ ನಿದರ್ಶನಗಳಿದ್ದ ಸಂತತಿಗಳಲ್ಲಿ ಈ ಕಾಯಿಲೆಯ ಸಾಧ್ಯತೆ ಇತರರಿಗಿಂತ ಎರಡು ಮೂರು ಪಟ್ಟು ಜಾಸ್ತಿ. ಆದರೂ ಸ್ತನದ ಕ್ಯಾನ್ಸರ್ ಆಗಿರುವ ಮಹಿಳೆಯರ ಒಟ್ಟು ಸಂಖ್ಯೆಯ ಶೇ. 90 ರಷ್ಟರ ರಕ್ತ ಸಂಬಂಧಿಗಳಲ್ಲಿ ಈ ತೆರನ ಕ್ಯಾನ್ಸರ್ ಆಗದಿರುವುದು ಸಮಾಧಾನದ ಸಂಗತಿ. ಹನ್ನೆರಡು ವರ್ಷಕ್ಕಿಂತ ಮೊದಲೇ ಮೈನೆರೆದ ಮತ್ತು ಐವತ್ತು ವರ್ಷಗಳ ನಂತರ ಮುಟ್ಟು ನಿಂತವರಲ್ಲಿ ಇತರರಿಗಿಂತ ಇದರ ಆಗು ಪ್ರಮಾಣ ಜಾಸ್ತಿ. ಬಹಳ ತಡವಾಗಿ ಮದುವೆಯಾದವರು. ಆದರೂ ಮಕ್ಕಳಾಗದಿರುವವರು, ಇಲ್ಲವೆ ಬಹಳ ಕಾಲ ಮಕ್ಕಳಾಗದವರಲ್ಲೂ ಸ್ತನದ ಕ್ಯಾನ್ಸರ್ ಸಂಭವ ಹೆಚ್ಚು.

ಮೂರಕ್ಕಿಂತ ಕಡಿಮೆ ಮಕ್ಕಳಾದವರಿಗಿಂತ ಬಹು ಮಕ್ಕಳ ಮಾತೆಯರಲ್ಲಿ ಮೊಲೆಯ ಕ್ಯಾನ್ಸರ್ ಆದ ಸಂದರ್ಭಗಳು ತೀರಾ ಕಡಿಮೆ. ಯಾವುದೇ ಕಾರಣದಿಂದ ತಮ್ಮ ಶಿಶುಗಳಿಗೆ ಮೊಲೆಯುಣಿಸದೇ ಇರುವುದು ಇಲ್ಲವೆ ಸ್ವಲ್ಪ ಸಮಯದಲ್ಲೇ ಮೊಲೆಯುಣಿಸುವುದನ್ನು ಮೊಟಕುಗೊಳಿಸುವವರಲ್ಲಿ ಸ್ತನದ ಕ್ಯಾನ್ಸರ್ ಸಂಭವ ಹೆಚ್ಚು. ಯೌವನಾವಸ್ಥೆಯಲ್ಲಿ ಸ್ತನಗಳಲ್ಲಿ ಆಗಾಗ್ಗೆ ಉದ್ಭವಿಸುವ ಕೆಲವು ತೆರನ ಗಡ್ಡೆಗಳನ್ನು ಸೂಕ್ತ ಚಿಕಿತ್ಸೆಗೊಳಪಡಿಸದಿದ್ದಲ್ಲಿ, ಅವುಗಳಲ್ಲಿ ಕ್ಯಾನ್ಸರ್ ಪರಿವರ್ತನೆಯಾಗುವ ಸಾಧ್ಯತೆಗಳಿರುತ್ತವೆ. ಈ ಕಾಯಿಲೆ ಮಹಿಳೆಯರಿಗೇ ಸೀಮಿತವಾದುದಾದರೂ ಕೆಲ ಸಾರಿ ಪುರುಷರ ಸ್ತನಗಳಲ್ಲಿಯೂ (ಶೇ.1.5) ಕಾಣಿಸಿಕೊಂಡಿವೆ.

ಎಲ್ಲಾ ವಯಸ್ಸಿನವರಲ್ಲೂ ಸ್ತನದ ಕ್ಯಾನ್ಸರ್ ಆಗುವ ಸಾಧ್ಯತೆಗಳಿರುವುವಾದರೂ, 30 ರಿಂದ 40 ವರ್ಷಗಳ ಅಂತರದವರಲ್ಲಿ ಇದರ ಹಾವಳಿ ಹೆಚ್ಚು. ಶುರುವಿನಲ್ಲಿ ಸ್ತನದ ಕ್ಯಾನ್ಸರ್ ಸಾಮಾನ್ಯವಾಗಿ ನೋವುಂಟುಮಾಡದಿರುವುದರಿಂದ ಗಡ್ಡೆ ಗಾತ್ರದಲ್ಲಿ ಹಿರಿದಾಗುತ್ತಿದರೂ ಅದನ್ನು ನಿರ್ಲಕ್ಷಿಸುವವರು ಬಹಳ.

ಸ್ತನದ ಒಂದು ಭಾಗ ಊದಿಕೊಳ್ಳುವುದು, ಇಡೀ ಸ್ತನದ ಗಾತ್ರ ಹಿರಿದಾಗುವುದು: ಊದಿಕೊಂಡ ಭಾಗ ಕೆಂಪಾಗುವುದು, ಅಲ್ಲಿ ಚರ್ಮ ಸುಕ್ಕುಗಟ್ಟುವುದು, ಕಿತ್ತಳೆ ಹಣ್ಣಿನ ಸಿಪ್ಪೆಯಲ್ಲಿರುವಂತಹ ಸಣ್ಣ ಸಣ್ಣ ಗುಳಿಗಳಾಗುವುದು (Peau Dorange) ಮೊಲೆ ತೊಟ್ಟು ಕಿರಿದಾಗಿ ಹಿಂದೆ ಸರಿದುಕೊಳ್ಳುವುದು, ಮೊಲೆ ತೊಟ್ಟಿನ ರಂಧ್ರದ ಮೂಲಕ ತಿಳಿಯಾದ ಇಲ್ಲವೆ ರಕ್ತ ಮಿಶ್ರಿತ ದ್ರವ ಆಗಾಗ್ಗೆ ಸ್ರವಿಸುವುದು ಮುಂತಾದವು ಮೊಲೆಯಲ್ಲಿ ಕ್ಯಾನ್ಸರ್ ಗಡ್ಡೆ ಉದ್ಭವಿಸಿದ ಚಿಹ್ನೆಗಳು. ರೋಗಿಗೆ ಮೊಲೆ ಭಾರವಾದಂತಾಗುವುದು, ಮೊಲೆ ತೊಟ್ಟಿನ ಸುತ್ತ ತುರಿಸಿದಂತಾಗುವುದು, ಅಲ್ಲದೆ ಮೊಲೆಯೊಳಗಡೆ ನೋವು ಸಹಾ ಉಂಟಾಗಬಹುದು. ಮುಂದೆ ಗಡ್ಡೆ ಹಿರಿದಾಗಿ ಬೆಳೆದು ಪೂರ್ತಿ ಮೊಲೆಯನ್ನಾವರಿಸುತ್ತದೆ. ಒಡೆದು ಹುಣ್ಣಾಗಿ ಕೀವು ರಕ್ತ ಸುರಿಯಲಾರಂಭಿಸುತ್ತವೆ. ಆ ಭಾಗದ ಕಂಕುಳು ಕುತ್ತಿಗೆಯ ಕೆಳಭಾಗದಲ್ಲಿ

ಹಾಲ್ರಸ ಗ್ರಂಥಿಗಳು.(Lymph nodes) ಕಣ್ಣಿಗೆ ಗೋಚರಿಸುವಷ್ಟು ಊದಿಕೊಳ್ಳುತ್ತವೆ. ಇನ್ನೂ ಮುಂದುವರಿದ ಸ್ಥಿತಿಯಲ್ಲಿ ಶ್ವಾಸಕೋಶ ಲಿವರ್ ಮೂಳೆ ಮುಂತಾದ ದೂರದ ಅವಯವಗಳಿಗೆ ಕ್ಯಾನ್ಸರ್ ಜೀವಕೋಶಗಳು ಹಾಲ್ರಸನಾಳ ರಕ್ತನಾಳಗಳ ಮುಖಾಂತರ ಹರಡಿದ ಲಕ್ಷಣಗಳು ಎದ್ದು ಕಾಣುತ್ತವೆ. (Metastases) ವಿಪರೀತ ನೋವಿನಿಂದ ರೋಗಿ ಒದ್ದಾಡುತ್ತಾಳೆ.

ಸ್ತನದ ವ್ಯಾಧಿಗಳ ತಪಾಸಣೆ ನಡೆಸುವಾಗ ರೋಗಿಯ ಹೊಟ್ಟೆಯಿಂದ ಮೇಲ್ಭಾಗದ ದೇಹವನ್ನು ಸಂಪೂರ್ಣ ವಿವಸ್ತ್ರಗೊಳಿಸುವುದು ಅನಿವಾರ್ಯ. ಒಂದು ಮೊಲೆಯಲ್ಲಾಗಿರಬಹುದಾದ ಬದಲಾವಣೆಯನ್ನು ಇನ್ನೊಂದರೊಡನೆ ಹೋಲಿಸಿ ಲಕ್ಷ್ಯವಿಟ್ಟು ನೋಡಬೇಕಾಗುತ್ತದೆ. ರೋಗಿ ಕುಳಿತುಕೊಂಡು ತನ್ನೆರಡೂ ಕೈಗಳನ್ನು ಮೇಲೆತ್ತಿ ಹಿಡಿದುಕೊಳ್ಳಬೇಕಾಗುತ್ತದೆ. ಸೊಂಟದ ಮೇಲೆ ಎರಡೂ ಕೈಗಳನ್ನು ಬಿಗಿಯಾಗಿ ಒತ್ತಿ ಹಿಡಿಯಬೇಕಾಗುತ್ತದೆ. ವೈದ್ಯರೂ ರೋಗಗ್ರಸ್ತ ಸ್ತನವನ್ನೇ ಅಲ್ಲದೆ ಇನ್ನೊಂದನ್ನೂ ಸ್ಪರ್ಶಿಸಿ ಗಡ್ಡೆಯ ಗಾತ್ರ ಆಕಾರ ಮಿತಿ, ಎದೆಗೂಡು ಅಥವಾ ಚರ್ಮಕ್ಕೆ ಅಂಟಿಕೊಂಡಿದೆಯೆ ಎಂಬುದನ್ನು ಅರಿತುಕೊಳ್ಳಬೇಕಾಗುತ್ತದೆ. ಗಡ್ಡೆಯ ಸಾಂದ್ರತೆ ಮೆದು, ಗಡಸು, ಮೊಲೆತೊಟ್ಟಿನಲ್ಲಿ ದ್ರವ ಬರುವುದೇ ಇತ್ಯಾದಿಗಳನ್ನು ಖಚಿತಪಡಿಸಿಕೊಳ್ಳಬೇಕು. ಕಂಕುಳಲ್ಲಿ ಹಾಲ್ರಸ ಗ್ರಂಥಿಗಳು ಊದಿಕೊಂಡಿರುವುದನ್ನು ಪರೀಕ್ಷಿಸಿ ತಿಳಿಯಬೇಕು. ಇತರ ಕಡೆ ಕ್ಯಾನ್ಸರ್ ಹರಡಿರಬಹುದಾದ ಲಕ್ಷಣಗಳನ್ನು ಅರಿತುಕೊಳ್ಳಲು ವಿಶೇಷ ತೆರನ ಪರೀಕ್ಷೆಗಳನ್ನು ಕೈಗೊಳ್ಳಬೇಕಾಗಬಹುದು. ಸ್ತ್ರೀ ಸಹಜ ನಾಚಿಕೆಯಿಂದ ಇಂಥ ಪರೀಕ್ಷೆಗಳಿಗೆ ರೋಗಿ ಸಹಕರಿಸದಿರುವುದು ಕೆಲಸಾರಿ ಅವರಿಗೇ ತೊಂದರೆಯಾಗಬಹುದು.

ಹಾಲು ಸ್ರವಿಸುವ ಗ್ರಂಥಿಗಳು ಒಳಪೊರೆಯ ಜೀವಕೋಶಗಳಿಂದಲೇ ಮೂಲ ಭೂತವಾಗಿ ಸ್ತನದ ಎಲ್ಲಾ ವಿಧದ ಕ್ಯಾನ್ಸರ್‌ಗಳು ಉದ್ಭವಿಸುತ್ತವೆ. ಆದರೂ ಅವುಗಳ ಬೆಳವಣಿಗೆಯ ಗತಿ, ಗಾತ್ರ, ಹರಡುವಿಕೆ ಮತ್ತು ರೋಗದ ತೀವ್ರತೆಯ ವಿಚಾರಗಳಲ್ಲಿ ವಿಭಿನ್ನವಾಗಿ ವರ್ತಿಸುವುದು ಕಂಡುಬರುತ್ತದೆ. ಕೆಲವು ಆರಂಭದಿಂದಲೂ ನಿಧಾನಗತಿಯಿಂದ ಬೆಳೆದು ಹೆಚ್ಚಿನ ಪರಿಣಾಮ ಬೀರಲು ಹಲವು ವರ್ಷಗಳೇ ಆಗಬಹುದು. ಮತ್ತೆ ಕೆಲವು ಉದ್ಭವವಾದ ಕೆಲವೇ ತಿಂಗಳಲ್ಲಿ ರೋಗಿಗೆ ಮಾರಕವಾಗುವುದೂ ಉಂಟು. ಗರ್ಭಿಣಿ ಮತ್ತು ಬಾಣಂತಿಯರಲ್ಲಿ ಉದ್ಭವಿಸುವ ಕ್ಯಾನ್ಸರ್‌ಗಳು ಅತ್ಯಂತ ಮಾರಕವಾದವೆಂದು ಭಾವಿಸಲಾಗಿದೆ.

ಮೊಲೆಗಳಲ್ಲಿ ಕ್ರಮವರಿತು ಜರುಗುತ್ತಿರುವ ಜೈವಿಕ ಪರಿಣಾಮಗಳ ವ್ಯತ್ಯಾಸಗಳಿಂದುಟಾಗುವ ಇತರ ವ್ಯಾಧಿಗಳನ್ನು ಸ್ತನದ ಕ್ಯಾನ್ಸರ್‌ನಿಂದ ಬೇರ್ಪಡಿಸುವುದು ಅತ್ಯವಶ್ಯಕ. ಕ್ಯಾನ್ಸರ್ ಬೆಳವಣಿಗೆ ಮತ್ತು ಅದರ ಚಿಕಿತ್ಸೆಗಳಿಂದಾಗಬಹುದಾದ ವಿಕಾರ ಮತ್ತು ಅಂತಿಮ ಪರಿಣಾಮಗಳ ಬಗೆಗೆ ಅನೇಕ ಮಹಿಳೆಯರಲ್ಲಿ ಈಗ ಸಾಕಷ್ಟು ತಿಳುವಳಿಕೆ, ಕೆಲವರಲ್ಲಿ ಅನಾವಶ್ಯಕ ಆತಂಕಗಳಿಲ್ಲದಿಲ್ಲ. ಜೊತೆಗೆ ಕುಟುಂಬದವರ ಕುತೂಹಲವೂ ಸೇರಿ ಮೊಲೆಯಲ್ಲಿ ಯಾವ ತರಹದ ಗಡ್ಡೆ ಕಾಣಿಸಿದರೂ ಗೊಂದಲಮಯ ಪರಿಸ್ಥಿತಿಯುಂಟಾಗುವುದನ್ನು ನೋಡುತ್ತೇವೆ. ಈ ದಿಸೆಯಲ್ಲಿ ಸ್ತನಗಳ ಗಡ್ಡೆಗಳ ರೋಗನಿರ್ಣಯ ಅತ್ಯಂತ ಜವಾಬ್ದಾರಿಯ ಪ್ರಶ್ನೆಯಾಗಿದೆ.

ಹದಿಹರೆಯದ ಕೆಲವು ಯುವತಿಯರ ಸ್ತನಗಳಲ್ಲಿ ಕೆಲ ಸಾರಿ ಅವರೆ ಕಾಳು ಗಾತ್ರದಿಂದ ಸಣ್ಣ ನಿಂಬೆ ಹಣ್ಣಿನಷ್ಟು ದಪ್ಪಗಿರುವ ಗಡ್ಡೆಗಳು ಉದ್ಭವಿಸುತ್ತವೆ. ಅವು ಸ್ತನದ ಚರ್ಮದಡಿಯಲ್ಲಿ ಅಡೆತಡೆಯಿಲ್ಲದೆ ಚಲಿಸುವುದಲ್ಲದೆ ಅಷ್ಟೇನೂ ನೋವುಂಟುಮಾಡುವುದಿಲ್ಲ. ಫೈಬ್ರೊ ಅಡಿನೋಮ ಎನ್ನಲಾಗುವ ಈ ಗಡ್ಡೆಗಳು ಕ್ಯಾನ್ಸರ್‌ಕಾರಕಗಳಲ್ಲದಿದ್ದರೂ ಅವುಗಳನ್ನು ಶಸ್ತ್ರಚಿಕಿತ್ಸೆ ಮಾಡಿ ತೆಗೆದು ಸೂಕ್ಷ್ಮ ಪರೀಕ್ಷೆಗೊಳಪಡಿಸುವುದು ವಿಹಿತ.

ಕೆಲಸಾರಿ ಎರಡೂ ಸ್ತನಗಳಲ್ಲೂ ಒಂದಕ್ಕಿಂತ ಹೆಚ್ಚು ವಿವಿಧ ಗಾತ್ರದ ಗಡ್ಡೆಗಳು ಆಗಾಗ್ಗೆ ಉದ್ಭವಿಸಿ ಋತುಸ್ರಾವದ ಕಾಲದಲ್ಲಿ ಗಾತ್ರ ಹೆಚ್ಚುವುದಲ್ಲದೆ ಸ್ವಲ್ಪ ನೋವನ್ನುಂಟು ಮಾಡಲೂಬಹುದು. ಫೈಬ್ರೋ ಅಡಿನೋಸಿಸ್ ಮ್ಯಾಮರಿ ಡಿಸ್‌ಪ್ಲೇಸಿಯ ಎಂದು ಹೆಸರಿಸಬಹುದಾದ ಈ ಗಡ್ಡೆಗಳು ಅಪರೂಪಕ್ಕೆ ಕ್ಯಾನ್ಸರ್ ಆಗಿ ಪರಿವರ್ತನೆಯಾಗುವ ಸಾಧ್ಯತೆಗಳಿವೆ. ಅವುಗಳನ್ನು ಆಗಿಂದಾಗ್ಗೆ ಪರಿಶೀಲಿಸುತ್ತಿರಬೇಕಲ್ಲದೆ ಕೆಲವನ್ನು ತೆಗೆದೂ ಸೂಕ್ಷ್ಮ

# ಮ್ಯಾಮೋಗ್ರಾಫ್:

*ಅಮೇರಿಕದಲ್ಲಿ ಸ್ತನಗಳ ಕ್ಯಾನ್ಸರ್ ಒಂದು ಮಾರಕ ಪಿಡುಗು. ಹತ್ತರಲ್ಲೊಬ್ಬರಿಗೆ ಈ ರೋಗ ತಗಲುತ್ತದೆ. ಈಗ ಅಲ್ಲಿ ಸುಮಾರು ಒಂದೂವರೆ ಲಕ್ಷ ಮಹಿಳೆಯರು ಸ್ತನ ಕ್ಯಾನ್ಸರ್‌ನಿಂದ ಬಳಲುತ್ತಿದ್ದಾರೆ. ಅದರಲ್ಲಿ ನಲವತ್ತೆರಡು ಸಾವಿರ ರೋಗಿಗಳಾದರೂ ಕ್ಯಾನ್ಸರ್‌ಗೆ ಆಹುತಿಯಾಗಬಹುದು. ಐವತ್ತರ ನಂತರದ ಮಹಿಳೆಯರಲ್ಲಿ ಈ ರೋಗ ಹೆಚ್ಚು. ಇತ್ತೀಚೆಗೆ ಎಳೆಯರಲ್ಲೂ ಇದು ಕಂಡುಬರುತ್ತಿದೆ. ಅಸಹನೀಯ ಯಾತನೆ, ಅಂಗಭೇದ, ಕೆಲವೊಮ್ಮೆ ಸಾವಿಗೂ ಕಾರಣವಾಗುವ ಸ್ತನ ಕ್ಯಾನ್ಸರ್ ಬಗ್ಗೆ ಆತಂಕ ಸಹಜ.*

*'ಮ್ಯಾಮೋಗ್ರಫಿ' ಎನ್ನುವ ರೇಡಿಯೇಶನ್ ವಿಧಾನದಿಂದ ಪ್ರಾಥಮಿಕ ಹಂತದಲ್ಲೇ ಸ್ತನ ಕ್ಯಾನ್ಸರ್ ಪತ್ತೆ ಹಚ್ಚುವುದು ಸಾಧ್ಯ. ಆದರೆ ಇಲ್ಲಿ ಬಳಸುವ ರೇಡಿಯೇಶನ್‌ನಿಂದಲೇ ಕ್ಯಾನ್ಸರ್ ಬರುವ ಸಾಧ್ಯತೆ ಇದೆ ಎಂದು ಅಲ್ಲಿನ ಮಹಿಳೆಯರು ಹೆದರುತ್ತಾರೆ. ಅಲ್ಲದೇ, ಇತ್ತೀಚೆಗೆ ಕೆಲವು ವೈದ್ಯರೂ ಈ ವಿಧಾನದ ಸಫಲತೆಯ ಬಗ್ಗೆ ಅನುಮಾನ ವ್ಯಕ್ತಪಡಿಸುತ್ತಿದ್ದಾರೆ.*

*ಐವತ್ತಕ್ಕಿಂತ ಕಡಿಮೆ ವಯಸ್ಸಿನ ಮಹಿಳೆಯರಿಗೆ ಇದರಿಂದ ಉಪಯೋಗವೇನಿಲ್ಲ ಎನ್ನುವುದು ಅವರ ಅಭಿಪ್ರಾಯ. ಒಂದು ಸಲದ ಪರೀಕ್ಷೆಗೆ ನೂರು ಡಾಲರ್ ವೆಚ್ಚ. ಇದೊಂದು ಬಹು ದೊಡ್ಡ ಹೊರೆ. ಆದ್ದರಿಂದ ನಲವತ್ತರಿಂದ ನಲವತ್ತೊಂಬತ್ತು ವರ್ಷದೊಳಗೆ ಯಾವಾಗಲಾದರೂ ಒಮ್ಮೆ 'ಮ್ಯಾಮೋಗ್ರಫಿ' ಪರೀಕ್ಷೆ ಮಾಡಿಸಿಕೊಂಡರೆ ಸಾಕು ಎಂದು ಅವರ ಅಭಿಪ್ರಾಯ. ಜನರನ್ನು ಎಕ್ಸ್-ರೇ ಕಿರಣಗಳಿಗೆ ಪದೇ ಪದೇ ಒಡ್ಡುವುದೂ ಅಪಾಯಕಾರಿ ಎನ್ನುತ್ತಾರೆ ಅವರು.*

*ಕೆಲವೊಮ್ಮೆ ಮ್ಯಾಮೋಗ್ರಾಫ್‌ನಿಂದ ಲಾಭವೂ ಇದೆ. ಕ್ಯಾನ್ಸರ್ ಪತ್ತೆ ಸಾಧ್ಯವಾದ್ದರಿಂದ, ಪ್ರಥಮ ಹಂತದಲ್ಲೇ ಚಿಕಿತ್ಸೆ ನಡೆಸಿ ರೋಗಿಯನ್ನು ಉಳಿಸಿಕೊಳ್ಳಬಹುದು.*

*ಕೆಲವೊಮ್ಮೆ ಮ್ಯಾಮೋಗ್ರಾಫ್ ಪರೀಕ್ಷೆಗಳು ಹಾದಿ ತಪ್ಪಿಸುತ್ತವೆ. ಕ್ಯಾನ್ಸರ್ ಇದ್ದಲ್ಲಿ ಇಲ್ಲವೆಂದು ಸೂಚನೆ ನೀಡಿಬಿಡುವ ಗ್ರಾಫ್ ದೋಷ ರೋಗಿಗೆ ಕುತ್ತಾಗಿ ಬಿಡುತ್ತದೆ. ಇಂಥ ವಿಫಲತೆ ಶೇಕಡಾ ಇಪ್ಪತ್ತು. ಹತ್ತು ಸಾವಿರ ಪರೀಕ್ಷೆಗಳಿಂದ ಇಪ್ಪತ್ತೆರಡು ಜನರನ್ನು ಉಳಿಸಬಹುದು ನಿಜ. ಆದರೆ ಅದಕ್ಕೆ ವೆಚ್ಚ ಅತಿದುಬಾರಿ ಎಂದು ಅಲ್ಲಿನ ತಜ್ಞರ ಮತ.* *

ಪರೀಕ್ಷೆಗೊಳಪಡಿಸಬೇಕಾಗುತ್ತದೆ.

ಮೊಲೆಯುಣಿಸುವ ಅವಧಿಯಲ್ಲಿ ಹಾಲು ಹರಿಯುವ ನಾಳಗಳಲ್ಲಿ ಆಗಾಗ್ಗೆ ಸ್ವಲ್ಪ ಉಳಿದು ಕೆಲಕಾಲಾನಂತರ ಗಡ್ಡೆಯಾಗಿ ಉದ್ಭವಿಸಬಹುದು. ಅದರಿಂದ ನೋವಾಗುವುದಲ್ಲದೆ ಮೊಲೆ ಕುರದಂತೆ ಆದಾಗ ಜೀವಿನಿರೋಧಕ ಮದ್ದುಗಳನ್ನು ನೀಡಿದಾಗ ಕೆಲಮಟ್ಟಿಗೆ ಕುರದ ಗಾತ್ರ ಕುಗ್ಗಲೂಬಹುದು. ಮೊಲೆ ತೊಟ್ಟಿನಲ್ಲಿ ತಿಳಿಯಾದ ದ್ರವ ಸಹಾ ಸುರಿಯಬಹುದು. ಮ್ಯಾಮರಿಡಕ್ಟ್ ಎಕ್ಟೇಸಿಯಾ ಎನ್ನಲಾದ ಈ ಗಡ್ಡೆಯನ್ನು ಸಹ ಹೊರತೆಗೆದು ಪರೀಕ್ಷೆಗೊಳಪಡಿಸಬೇಕಾಗುತ್ತದೆ.

ಕೆಲಸಾರಿ ಸ್ತನಕ್ಕೆ ಏಟು ತಗಲಿದಾಗ ಕೊಬ್ಬಿನ ಅಂಶ ಮುದ್ದೆಗಟ್ಟಿ ಕ್ಯಾನ್ಸರ್‌ನಂಥ ಗಡ್ಡೆ ಉದ್ಭವಿಸುತ್ತದೆ. ಅದನ್ನು ಸಹ ಹೊರತೆಗೆದು ಪರೀಕ್ಷಿಸಬೇಕಾಗುತ್ತದೆ.

ಇನ್ನು ಗರ್ಭಾವಸ್ಥೆ ಮತ್ತು ಬಾಣಂತನದಲ್ಲಿ ಹಾಲು ಸರಿಯಾಗಿ ಹೊರಗೆ ವಿಸರ್ಜನೆಯಾಗದಿದ್ದಾಗ ರೋಗಾಣುಗಳ ಸೋಂಕಿನಿಂದ ಮೊಲೆಕುರುಗಳಾಗಿರುತ್ತವೆ. ಸೂಕ್ತ ರೀತಿಯ ಜೀವಿರೋಧಕ ಮದ್ದುಗಳನ್ನು ನೀಡುವುದರಿಂದ ಮುಂದಿನ ಬೆಳವಣಿಗೆಯನ್ನು ತಡೆಯಬಹುದು. ಆದರೆ ಮುಂದುವರಿದ ಪ್ರಕರಣಗಳಲ್ಲಿ ಶಸ್ತ್ರಚಿಕಿತ್ಸೆ ಮಾಡಿ ಕೀವನ್ನು ಹೊರಗೆ ತೆಗೆಯುವುದು ಅನಿವಾರ್ಯ. ಈ ಅವಧಿಗಳಲ್ಲೇ ಅಪರೂಪಕ್ಕೆ ಉದ್ಭವವಾಗುವ ಸ್ತನದ ಕ್ಯಾನ್ಸರನ್ನು ಸಕಾಲದಲ್ಲಿ ಗುರುತಿಸಿ ಚಿಕಿತ್ಸೆಗೊಳಪಡಿಸುವುದು, ಸ್ತನದ ವ್ಯಾಧಿಗಳ ರೋಗ

ನಿರ್ಣಯದಲ್ಲಿ ಅತ್ಯಂತ ಜಟಿಲವಾದ ಸಮಸ್ಯೆ. ವೈದ್ಯರ ಅನುಭವ ಪ್ರಕಟವಾಗುವ ಚಿಹ್ನೆಗಳ ಸರಿಯಾದ ವಿವೇಚನೆ ಈ ದಿಸೆಯಲ್ಲಿ ಸಹಾಯಕ.

ಸ್ತನಗಳಲ್ಲಿ ಯಾವುದೇ ತೆರನ ಅನುಮಾನಾಸ್ಪದ ಗಡ್ಡೆ ಕಂಡುಬಂದಲ್ಲಿ ಅದನ್ನು ಶಸ್ತ್ರಚಿಕಿತ್ಸೆಯಿಂದ ಹೊರತೆಗೆದು ಪರೀಕ್ಷೆ ಮಾಡುವ ವಿಧಾನ ಈಗ ಎಲ್ಲೆಡೆ ಪ್ರಚಾರದಲ್ಲಿದೆ. ಸ್ಥಳೀಯವಾಗಿ ನೀಡುವ ಅರಿವಳಿಕೆಯ ಇಂಜಕ್ಷನ್ನಿನಿಂದ ಪೂರ್ತಿ ಗಡ್ಡೆಯನ್ನು ತೆಗೆಯಲು ಸಾಧ್ಯವಾಗದಿದ್ದರೆ ಅದರ ಒಂದು ತುಣುಕನ್ನಾದರೂ ತೆಗೆದು ಸೂಕ್ಷ್ಮದರ್ಶಕ ಯಂತ್ರದಲ್ಲಿ ಪರೀಕ್ಷೆ ಮಾಡಿ ಗಡ್ಡೆಯ ಗುಣಲಕ್ಷಣಗಳನ್ನು ಒಂದೆರಡು ದಿನಗಳಲ್ಲಿ ತಿಳಿಯಲು ಸಾಧ್ಯ. ತುಣುಕನ್ನು ತೆಗೆದ ಅರ್ಧತಾಸಿನೊಳಗೇ ಈ ರೀತಿಯ ಪರೀಕ್ಷೆಗೊಳಪಡಿಸುವ ಸೌಲಭ್ಯ ಈಗ ಕೆಲವು ದೊಡ್ಡ ಆಸ್ಪತ್ರೆಗಳಲ್ಲಿ ಲಭ್ಯವಿದೆ. ಗಡೆಯಲ್ಲಿ ಕ್ಯಾನ್ಸರ್ ಇರುವುದು ಖಚಿತವಾದರೆ ಆಗಿಂದಾಗಲೇ ಅದಕ್ಕೆ ತಕ್ಕುದಾದ ಶಸ್ತ್ರಚಿಕಿತ್ಸಾ ವಿಧಾನವನ್ನು ಮುಂದುವರಿಸಲು ಸಾಧ್ಯವಾಗುತ್ತದೆ.

ಮೊಲೆಯೊಳಗಿನ ಗಡೆ ಒಂದೆರಡು ಸೆಂಟಿಮೀಟರುಗಳಷ್ಟಿದ್ದು ಕೈಗೆ ಸಿಗುವಂತಿದ್ದರೆ ಅದರೊಳಗೆ ವಿಶೇಷ ತೆರನ ಸೂಜಿಯನ್ನು ತೂರಿಸಿ, ಅದರಿಂದ ಹೊರಬರುವ ಜೀವಕೋಶಗಳನ್ನು ಪರೀಕ್ಷೆಗೊಳಪಡಿಸಿ ಕ್ಯಾನ್ಸರ್‌ನ ಅನುಮಾನವನ್ನು ಸ್ಥಿರಪಡಿಸುವ ವಿಧಾನ ನುರಿತ ತಜ್ಞರ ಕೈಯಲ್ಲಿ ಒಳ್ಳೆಯ ಫಲಿತಾಂಶ ನೀಡುತ್ತಲಿದೆ. ಇದೇ ರೀತಿ ಮೊಲೆ ತೊಟ್ಟಿನಿಂದ ಹೊರಬರುವ ರಸವನ್ನು ಪರೀಕ್ಷೆಗೊಳಪಡಿಸಿ ರೋಗ ನಿರ್ಣಯ ಮಾಡಬಹುದು.

ಸೌಮ್ಯ ರೀತಿಯ ಎಕ್ಸರೇ ಕಿರಣಗಳನ್ನು ಮೊಲೆಗಳ ಮೂಲಕ ಹಾಯಿಸಿ ತೆಗೆಯುವ ಎಕ್ಸರೇ ಚಿತ್ರಗಳಿಂದ ಸ್ತನಗಳಲ್ಲಿ ಅತಿ ಸಣ್ಣ ಗಾತ್ರದ ಗಡ್ಡೆಗಳನ್ನು ಗುರುತಿಸುವ ವಿಧಾನ ಈಗ (Mammography) ಒಳ್ಳೆಯ ಫಲಿತಾಂಶ ನೀಡುತ್ತಿದೆ. ಕ್ಯಾನ್ಸರ್ ಉದ್ಭವಿಸಬಹುದಾದ ಸಾಧ್ಯತೆಯಿರುವ ಮಹಿಳೆಯರನ್ನು ಈ ವಿಧಾನದಿಂದ ಆಗಿಂದಾಗ್ಗೆ ಪರೀಕ್ಷೆಗೊಳಪಡಿಸಿ ಕ್ಯಾನ್ಸರಿನ ಆರಂಭದ ಹಂತದಲ್ಲೇ ಗುರುತಿಸಬಹುದು. ಮತ್ತು ಆ ಸಮಯದಲ್ಲೇ ಸೂಕ್ತ




ಇದು ಸಮಾಜವಾದದತ್ತ ನಮ್ಮ ದೇಶದ ಒಂದು ದೊಡ್ಡ ಹೆಜ್ಜೆ.

ರೀತಿಯ ಚಿಕಿತ್ಸೆ ನೀಡಿದರೆ ಕಾಯಿಲೆಯನ್ನು ಸಂಪೂರ್ಣ ಗುಣಪಡಿಸಲು ಸಾಧ್ಯ.

### ಸ್ತನಗಳ ಸ್ವಯಂ ಪರೀಕ್ಷೆ

ಮಹಿಳೆಯರು ತಮ್ಮ ಸ್ತನಗಳನ್ನು ಆಗಿಂದಾಗ್ಗೆ ಕ್ರಮವರಿತು ಮುಟ್ಟಿ ಪರೀಕ್ಷೆ ಮಾಡಿ ಗಡ್ಡೆಗಳನ್ನು ಪತ್ತೆಮಾಡುವ ವಿಧಾನ ಈಗ ಎಲ್ಲಾ ಕಡೆ ಪ್ರಚಾರಕ್ಕೆ ಬರುತ್ತಿದೆ. ಇಪ್ಪತ್ತು ವರ್ಷಕ್ಕೆ ಮೇಲ್ಪಟ್ಟ ಮಹಿಳೆಯರೆಲ್ಲರೂ ಕನ್ನಡಿಯ ಮುಂದೆ ನಿಂತಕೊಂಡು ತಿಂಗಳಿಗೊಂದಾವರ್ತಿಯಾದರೂ ಈ ರೀತಿ ಪರೀಕ್ಷಿಸಿಕೊಳ್ಳುವುದು ಒಳ್ಳೆಯದು. ಈ ರೀತಿಯ ಸ್ವಯಂ ಪರೀಕ್ಷೆಯ ಬಗೆಗೆ ವೈದ್ಯರು ಇಲ್ಲವೆ ದಾದಿಯರಿಂದ ಮಾಹಿತಿ ದೊರಕಿಸಿಕೊಳ್ಳಬಹುದು. ಎರಡು ಕೈಗಳನ್ನು ಮೇಲೆತ್ತಿ ಪಕ್ಕದಲ್ಲಿ ಇಳಿಬಿಟ್ಟು, ನಂತರ ಸೊಂಟ ಪಕ್ಕದಲ್ಲಿ ಗಟ್ಟಿಯಾಗಿ ಒತ್ತಿ ಹಿಡಿದು ಸ್ತನಗಳ ಗಾತ್ರ ಮೊಲೆ ತೊಟ್ಟಿನ ಆಕಾರ ಅವುಗಳಲ್ಲಿ ಒಂದು ಒಂದೆ ಸರಿದುಕೊಂಡಿದೆಯೇ ಸ್ತನಗಳಲ್ಲಿ ಗಡೆ ಕಾಣಿಸುವುದೇ ಯಾವುದಾದರೂ ಭಾಗದ ಚರ್ಮದಲ್ಲಿ ವ್ಯತ್ಯಾಸಗಳು ಕಂಡುಬರುತ್ತಿವೆಯೇ ಎಂಬುವನ್ನು ಮೊದಲು ಕನ್ನಡಿಯ ಎದುರು

ಪರೀಕ್ಷಿಸಬೇಕು. ಮೊಲೆಗಳನ್ನು ಕ್ರಮವಾಗಿ ಸ್ಪರ್ಶಿಸಿಕೊಂಡು ಗಡ್ಡೆಗಳು ಕೈಗೆಟುಕುತ್ತವೆಯೇ ಅವುಗಳಿಗೆ ನೋವಾಗದೆ ಚಲಿಸುತ್ತದೆಯೇ, ಮೆದು ಅಥವಾ ಗಡುಸಾಗಿದೆಯೇ ಎಂಬುದನ್ನು ಅರಿಯಲು ಪ್ರಯತ್ನಿಸಬೇಕು. ನಂತರ ಹಾಸಿಗೆಯಲ್ಲಿ ಮಲಗಿ ಬೆನ್ನಿನ ಕೆಳಗೆ ಸಾಧಾರಣ ಗಾತ್ರದ ದಿಂಬನ್ನಿರಿಸಿಕೊಂಡು ಎರಡೂ ಸ್ತನಗಳನ್ನು ಮೇಲಿನಂತೆ ಪರೀಕ್ಷೆ ಮಾಡಿಕೊಳ್ಳಬೇಕು. ಈ ರೀತಿಯ ಸ್ವಯಂ ಪರೀಕ್ಷೆಯ ಸಮಯದಲ್ಲಿ ಸ್ತನಗಳಲ್ಲಿ ಯಾವುದೇ ವ್ಯತ್ಯಾಸವಾದ ಅನುಮಾನ ಕಂಡುಬಂದಲ್ಲಿ ಕೂಡಲೇ ವೈದ್ಯರನ್ನು ಸಂಪರ್ಕಿಸಿ ಸರಿಯಾದ ರೋಗ ನಿರ್ಣಯ ಮಾಡಿಸಿಕೊಳ್ಳುವುದು ಒಳ್ಳೆಯದು. ವಿದೇಶಗಳಲ್ಲಿ ಈ ರೀತಿಯ ಸ್ತನಗಳ ಸ್ವಯಂ ಪರೀಕ್ಷೆಯಿಂದ 1980ರ ಸಮಯದಲ್ಲಿ ಶೇ. 25ರಷ್ಟು ಮೊದಲ ಹಂತದಲ್ಲೆ ಸ್ತನದ ಕ್ಯಾನ್ಸರನ್ನು ಪತ್ತೆ ಹಚ್ಚುತ್ತಿದ್ದರು. ಈಗ ಬಹಳಷ್ಟು ಮಹಿಳೆಯರು ಈ ವಿಧಾನವನ್ನು ಅನುಸರಿಸುವುದರಿಂದ ಸುಮಾರು ಶೇ.50-60 ರಷ್ಟನ್ನು ಮೊದಲ ಹಂತದಲ್ಲೆ ಪತ್ತೆ ಹಚ್ಚಲು ಸಾಧ್ಯವಾಗುತ್ತದೆಂದು ಅಂದಾಜು ಮಾಡಿದ್ದಾರೆ.

### ಚಿಕಿತ್ಸಾ ವಿಧಾನಗಳು

ಸ್ತನಗಳ ಕ್ಯಾನ್ಸರ್ ಚಿಕಿತ್ಸೆಗೆ ಈಗ ಹಲವು ವಿಧಾನಗಳಿವೆ. ನಿಯೋಜಿತ ರೋಗಿಗೆ ತಕ್ಕ ಚಿಕಿತ್ಸಾ ವಿಧಾನವನ್ನು ಅಳವಡಿಸುವ ಮೊದಲು ರೋಗ ಯಾವ ಹಂತವನ್ನು ತಲುಪಿದೆಯೆಂಬುದನ್ನು ನಿರ್ಣಯಿಸುವುದು ಅತ್ಯವಶ್ಯಕ. ಸ್ತನದ ಕ್ಯಾನ್ಸರಿನ ಬೆಳವಣಿಗೆ ಮತ್ತು ಅದು ಹರಡಿದ ರೀತಿಯನ್ನನುಸರಿಸಿ ನಾಲ್ಕು ಹಂತಗಳನ್ನು ಗುರುತಿಸಲು ಸಾಧ್ಯ.

**ಒಂದನೆ ಹಂತ:** ಗಡ್ಡೆ ಸ್ತನಕ್ಕೆ ಸೀಮಿತವಾಗಿದ್ದು ಗಾತ್ರದಲ್ಲಿ ಎರಡು ಸೆಂಟಿಮೀಟರಿಗಿಂತಲೂ ಕಿರಿದಾಗಿರುವುದು. ಸ್ತನದ ಹೊರಗಡೆ ಕಂಕುಳ ಹಾಲ್ರಸ ಗ್ರಂಥಿಗಳಿಗಾಗಲಿ ಇತರ ಅವಯವಗಳಿಗಾಗಲೀ ಹರಡದಿರುವುದು.

**ಎರಡನೆ ಹಂತ:** ಐದು ಸೆಂಟಿಮೀಟರಿಗಿಂತ ಕಿರಿದಾದ ಗಾತ್ರ ಕಂಕುಳಿನ ಹಾಲ್ರಸ ಗ್ರಂಥಿಗಳಿಗೆ ಹರಡಿದ್ದರೂ ಗ್ರಂಥಿಗಳು ಚಲಿಸುವಂತಿರಬೇಕು.

**ಮೂರನೆ ಹಂತ:** ಐದು ಸೆಂಟಿಮೀಟರಿಗಿಂತ ಹಿರಿದಾದ ಗಾತ್ರ ಸ್ತನದ ಚರ್ಮ ಮತ್ತು ಎದೆಗೂಡಿನ ಸ್ನಾಯುಗಳಿಗೆ ಅಂಟಿಕೊಂಡು ಚಲನೆ ಮಿತಿಗೊಂಡಿರುವುದು.

**ನಾಲ್ಕನೆ ಹಂತ:** ಮೇಲಿನ ಎಲ್ಲಾ ಲಕ್ಷಣಗಳ ಜತೆಗೆ ಅವರ ಶ್ವಾಸಕೋಶ, ಮೂಳೆ ಮುಂತಾದ ಅವಯವಗಳಿಗೆ ರೋಗ ಹರಡಿದ ಲಕ್ಷಣಗಳಿರುವುದು.

ಸ್ತನ ಕ್ಯಾನ್ಸರ್ ಆರಂಭದಿಂಲೂ ಅತುಗ್ರ ರೀತಿಯ ಬೆಳವಣಿಗೆ ಮತ್ತು ಹರಡುವಿಕೆಗೆ ಹೆಸರಾಗಿದೆ. ಅದರ ಪತ್ತೆಯಾದ ಸಮಯದಲ್ಲಿ ವ್ಯಾಪಕ ಶಸ್ತ್ರಚಿಕಿತ್ಸೆ ಮತ್ತಿತರ ಉಗ್ರಕ್ರಮಗಳನ್ನು ರೋಗಗ್ರಸ್ತ ಮೊಲೆಯನ್ನು ಸಂಪೂರ್ಣವಾಗಿ ತೆಗೆಯುವುದಲ್ಲದೆ ಎದೆಯ ಸ್ನಾಯುಗಳು ಕಂಕುಳಗಡ್ಡೆಗಳನ್ನು ತೆಗೆಯುವಂತಹ (Radical Mastectomy, Extended Radical Mastectomy) ವ್ಯಾಪಕ ಶಸ್ತ್ರಚಿಕಿತ್ಸೆಗಳನ್ನು ಹಿಂದೆ ಜರುಗಿಸುತ್ತಿದ್ದರು. ಹಾರ್ಮೋನುಗಳ ಪ್ರಭಾವವನ್ನು ಮಿತಗೊಳಿಸಲು ಅಂಡಾಶಯಗಳನ್ನು ತೆಗೆಯುವುದು, ಸ್ಥಳೀಯವಾಗಿ ಹಾಗು ಕ್ಯಾನ್ಸರ್ ಹರಡಿದ ಕಡೆ ಡೀಪ್ ಎಕ್ಸರೆ ಚಿಕಿತ್ಸೆ ಮುಂತಾದುವುಗಳನ್ನು ಕೈಗೊಳ್ಳಲಾಗುತ್ತಿತ್ತು. ಸ್ತನದ ಕ್ಯಾನ್ಸರ್‌ನ ರೋಗಿ ಒಂದು ರೀತಿಯಲ್ಲಿ ಅಂಗವಿಕಲಳಾದಂತಾಗುತ್ತಿದ್ದಳಲ್ಲದೆ ತೀರಾ ಅಸ್ವಸ್ಥಳಾಗುತ್ತಿದ್ದಳು. ಸ್ತನದ ಕ್ಯಾನ್ಸರ್‌ನ ಗುಣಾವಗುಣಗಳ ಬಗೆಗೆ ಇತ್ತೀಚಿನ ವರ್ಷಗಳಲ್ಲಿ ಹೆಚ್ಚಿನ ಅರಿವುಂಟಾಗಿದೆ. ಯಾವುದೇ ವಿಧಾನಗಳ ಚಿಕಿತ್ಸೆಯನ್ನು ಜಾರಿಗೊಳಿಸಿದರೂ ಅಂತಿಮ ಪರಿಣಾಮಗಳಲ್ಲಿ ಹೆಚ್ಚಿನ ವ್ಯತ್ಯಾಸಗಳು ಆಗಲಾರವೆಂಬ ಅಭಿಪ್ರಾಯ ಈಗ ಹಲವು ತಜ್ಞರ ಅಭಿಪ್ರಾಯವಾಗುತ್ತಿದೆ. ಪ್ರಸಕ್ತ ಸಮಯದಲ್ಲಿ ಮೊಲೆ ಹೆಚ್ಚು ವಿಕಾರಗೊಳ್ಳದಂತಹ ಸೌಮ್ಯ ರೀತಿಯ ಚಿಕಿತ್ಸಾ ವಿಧಾನಗಳತ್ತ ಬಹುಪಾಲು ತಜ್ಞರ ಒಲವಿರುವಂತಿದೆ. ಈಗ ಪ್ರಚಾರವಾಗಿರುವ ಚಿಕಿತ್ಸಾ ವಿಧಾನಗಳನ್ನು ಈ ಕೆಳಗಿನ ರೀತಿಯಲ್ಲಿ ಕ್ರೋಢೀಕರಿಸಬಹುದು.

ಒಂದು ಮತ್ತು ಎರಡನೇ ಹಂತದ ಸ್ತನದ ಕ್ಯಾನ್ಸರ್ ಆದವರ ಗಡ್ಡೆ ಮತ್ತು ಅದರ ಸುತ್ತಲ ಒಂದೆರಡು ಸೆಂಟಿಮೀಟರಿನ ಸ್ತನದ ಕಣ ಜಾಲ

ವನ್ನು ತೆಗೆದು ಹಾಕುವ ವಿಧಾನ ಈಗ ಪ್ರಚಲಿತ ವಿದೆ. ಕಂಕುಳಲ್ಲಿ ಗಡ್ಡೆಗಳಿದ್ದರೆ ಅವುಗಳನ್ನು ಪ್ರತ್ಯೇಕವಾಗಿ ತೆಗೆಯಲಾಗುತ್ತದೆ ಈ ಚಿಕಿತ್ಸಾ ವಿಧಾನಕ್ಕೆ ಪೂರಕವಾಗಿ ಎಕ್ಸ್‌ರೆ ಚಿಕಿತ್ಸೆಯನ್ನು ಕೊಡಬೇಕೆಂಬ ಅಭಿಪ್ರಾಯಕ್ಕೆ ಹಲವರ ಬೆಂಬಲವಿದೆ. ಗಡ್ಡೆ ಇಡೀ ಮೊಲೆಯನ್ನಾವರಿಸಿದ್ದು ಇನ್ನೂ ಚಲಿಸುವ ಸ್ಥಿತಿಯಲ್ಲಿರುವವರ ಪೂರ್ಣ ಸ್ತನವನ್ನು ತೆಗೆಯಲಾಗುತ್ತದೆ.

ಮೂರನೆ ಹಂತ ತಲುಪಿದ ಸ್ತನದ ಕ್ಯಾನ್ಸರಿಗೆ ಹಿಂದೆ ಜರುಗಿಸುತ್ತಿದ್ದ ವ್ಯಾಪಕ ಶಸ್ತ್ರ ಚಿಕಿತ್ಸೆ ಪೂರ್ತಿ ಮೊಲೆಯನ್ನಲ್ಲದೆ ಎದೆಗೂಡಿನ ಎರಡೂ ಸ್ನಾಯುಗಳು ಕಂಕುಳಿನ ಗಡ್ಡೆಗಳನ್ನು ಸಹಾ ಒಂದೇ ಸಾರಿ ತೆಗೆದು ಹಾಕುವ ವಿಧಾನಕ್ಕೆ ಈಗ ಹಲವು ತಜ್ಞರ ಅಭಿಮತ ವಿಲ್ಲ. ಪೂರ್ಣ ಸ್ತನ ಮತ್ತು ಒಂದು ಚಿಕ್ಕ ಎದೆಯ ಸ್ನಾಯುವನ್ನು ತೆಗೆದು ಹಾಕುವ ಚಿಕಿತ್ಸೆ ಈಗ ವ್ಯಾಪಕವಾಗಿ ಆಚರಣೆಯಲ್ಲಿದೆ. ಕಂಕುಳಿನ ಗಡ್ಡೆಗಳನ್ನು ತೆಗೆದು ಹಾಕುವುದಲ್ಲದೆ ಡೀಪ್ ಎಕ್ಸರೆ ಚಿಕಿತ್ಸೆಯನ್ನೂ ಈ ವಿಧಾನದಲ್ಲಿ ಅಳವಡಿಸಲಾಗುತ್ತದೆ.

ಒಂದು ಎರಡು ಮತ್ತು ಮೂರನೆ ಹಂತದಲ್ಲಿರುವ ಸ್ತನದ ಕ್ಯಾನ್ಸರ್ ರೋಗಕ್ಕೆ ಸಕಾಲದಲ್ಲಿ ಸೂಕ್ತ ಚಿಕಿತ್ಸಾ ವಿಧಾನಗಳನ್ನು ಜಾರಿಗೊಳಿಸಿದರೆ ಶೇ.50-60ರಷ್ಟು ರೋಗಿಗಳು ಮುಂದಿನ 5 ವರ್ಷಗಳವರೆಗೆ ಬದುಕಿ ಸುಖಿ ಜೀವನ ನಡೆಸುತ್ತಾರೆನ್ನಬಹುದು. ನಾಲ್ಕನೆ ಹಂತ ತಲುಪಿದ ರೋಗಿಗಳಿಗೆ ಮೇಲೆ ನಮೂದಿಸಿದ ಎಲ್ಲಾ ತೆರನ ಚಿಕಿತ್ಸಾ ವಿಧಾನಗಳನ್ನು ಕೆಲವು ಸಂದರ್ಭಗಳಲ್ಲಿ ಜಾರಿಗೊಳಿಸಲು ಸಾಧ್ಯವಾಗಬಹುದಾದರೂ ಅವೆಲ್ಲಾ ಬರೀ ಶ್ರಮದ ಚಿಕಿತ್ಸೆಗಳಷ್ಟೆ. ಮೂರು ಮತ್ತು ನಾಲ್ಕನೆಯ ಹಂತದಲ್ಲಿರುವ ಸ್ತನದ ಕ್ಯಾನ್ಸರ್ ರೋಗಿಗಳಿಗೆ ಈಗ ಲಭ್ಯವಿರುವ ಅತ್ಯಂತ ಪರಿಣಾಮಕಾರಿ ಕ್ಯಾನ್ಸರ್ ಮಾರಕ ಮದ್ದುಗಳ (Anti cancer drugs) ಪ್ರಯೋಗವು ರೋಗ ಹರಡುವುದನ್ನು ಮಿತಿಗೊಳಿಸಬಲ್ಲದಲ್ಲದೆ ಅವರ ಜೀವನವನ್ನು ಕೆಲಕಾಲ ಸುಖಮಯವಾಗಿ ಕಳೆಯುವಂತೆ ಮಾಡಲು ಸಹಾಯಕಾರಿಯಾಗುತ್ತವೆ.

ಸ್ತನಗಳ ಕ್ಯಾನ್ಸರ್ ಬರದಂತೆ ಎಚ್ಚರ ವಹಿಸಬೇಕಾದರೆ ದೀರ್ಘಕಾಲ ಶಿಶುಗಳಿಗೆ ಮೊಲೆಯುಣಿಸಬೇಕು. ಪದೇ– ಪದೇ ಕ್ಯಾನ್ಸರ್ ಉಂಟಾಗುತ್ತಿರುವ ರಕ್ತ ಸಂಬಂಧಿಗಳೊಡನೆ ವಿವಾಹವಾಗಬಾರದು. ಕ್ಯಾನ್ಸರನ್ನು ಆರಂಭದಲ್ಲೆ ಕಂಡುಹಿಡಿಯುವ ವಿಧಾನಗಳನ್ನು ಅನುಸರಿಸಬೇಕು. ಅಲ್ಲದೆ ಸೌಮ್ಯರೀತಿಯ ಸ್ಥಳೀಯ ಚಿಕಿತ್ಸಾ ವಿಧಾನಗಳು ಹೊಸಹೊಸ ಚಿಕಿತ್ಸಾ ವಿಧಾನಗಳ ಉದಯ ಇವುಗಳೆಲ್ಲ ಸ್ತನದ ಕ್ಯಾನ್ಸರ್ ಬಗೆಗೆ ಈಗಿರುವ ನಿರಾಶಾಭಾವನೆಯನ್ನೂ ಹೋಗಲಾಡಿಸುವುದರಲ್ಲಿ ಸಂದೇಹ ವಿಲ್ಲ. ಜತೆಗೆ ಸ್ತನದ ಕ್ಯಾನ್ಸರಿನ ಸಾಧ್ಯತೆ ಇರುವವರನ್ನು ಸರಕಾರ ಅಥವಾ ವೈದ್ಯ ವೃತ್ತಿನಿರತರು ವೈಯಕ್ತಿಕವಾಗಿ ಅಥವಾ ಸಾಮೂಹಿಕ ಶಿಬಿರಗಳ ಮೂಲಕ ಪತ್ತೆಹಚ್ಚುವ ಪರೀಕ್ಷೆಗಳಿಗೆ ಆಗಿಂದಾಗ್ಗೆ ಒಳಪಡಿಸುವ ಯೋಜನೆ ಹಾಕಿಕೊಂಡು ಕಾರ್ಯ ಪ್ರವೃತ್ತರಾದರೆ ಈ ರೋಗದ ಬಗೆಗಿನ ಅನಾವಶ್ಯಕ ಆತಂಕಗಳನ್ನು ನಿವಾರಿಸಬಹುದಲ್ಲದೆ ಬಹಳಷ್ಟು ಮಹಿಳೆಯರಿಗೆ ಕ್ಯಾನ್ಸರ್ ಮೊಳಕೆಯೊಡೆಯುವುದರಲ್ಲೇ ಪರಿಣಾಮಕರ ಚಿಕಿತ್ಸೆ ನೀಡಲು ಸಾಧ್ಯ. *



ಸೋಲು; ಎಲ್ಲೋ ಏನೋ ತಪ್ಪಿದೆ ಎಂಬ ಮುನ್ನೆಚ್ಚರಿಕೆ ಅಷ್ಟೆ. ತಪ್ಪಿನ ಮೂಲ ಹುಡುಕತೊಡಗಿದರೆ, ನಮ್ಮ ಸೋಲಿನ ಅನುಭವವೇ ವಿಜಯದ ಮೆಟ್ಟಿಲಾಗುತ್ತದೆ.

● ವಾಲ್ಮೀಕಿ

# ಉರುಳಿನ ಮೇಲುರುಳು

ನಗರದ ಹೃದಯದ ಮೇಲೆ
ಬುಳ ಬುಳ ಹರಿವ ಕಾಲುಗಳು-
ಸಾವಿರ ಸಾವಿರ
ರೈಲು ಗಾಲಿಗಳಂತೆ ನಿರಂತರ ಉರುಳು;

ಸರ ಸರ ಸರಿದು
ಇಲಿಯ ಬಿಲಗಳಂಥ ಮನೆಗಳ ಸೇರಿ
ಕೀ ಕೊಟ್ಟ ಯಂತ್ರದಂತೆ
ಉಂಡು ತಿಂದು ಮುದುಡಿ ಮಲಗಿ
ವ್ಯಥೆಯ ನೆನಸೋ ಬವಣೆ ಬಿರುಸೋ
ರತಿಯ ಕನಸೋ ಯಾತನೆ ತುರುಸೋ...
ಅಂತು, ಇರುಳ ನೂಕಿ ಹಗಲು ಕಣ್ತೆರೆಯಲು
ಬಲವಂತ ಎದ್ದು
ತುದಿಗಾಲ ಮೇಲ್ನಿಂತು
ನಿತ್ಯ ಕರ್ಮಗಳ ಮುಗಿಸಿ
ಮತ್ತದೇ ಸಳ ಸಳ ಹರಿಯುವ
ದುಡಿಮೆಗೆ ಹೆಗಲೊಡ್ಡುವ
ತುತ್ತಿಗಾಗಿ ಹೋರಾಟದ ಹಾದಿ ಹಿಡಿವ-
ಸಾವಿರ ಸಾವಿರ ಹೆಜ್ಜೆ ಸವೆಸುವ
ಉರುಳಿನ ಮೇಲು ಉರುಳು!

ದೊಡ್ಡ ರಂಗೇಗೌಡ

# ಅನುಭವದ ಬೆಲೆ

● ಎಸ್.ಕೆ. ರಮಾದೇವಮ್ಮ ●

**ಕೆ**ಲಸ ಮಾಡಲಾಗದ ವೃದ್ಧರನ್ನು ಕೊಂದು ಹಾಕಬೇಕು ಎಂದು ಆ ದೇಶದ ಶಾಸನ. ಜನ ವೃದ್ಧರಾಗಿ, ಕೆಲಸ ಮಾಡುವ ಶಕ್ತಿ ಕುಂದಿದಾಗ, ಅವರನ್ನು ಕಾಡಲ್ಲಿ ಬಿಟ್ಟು ಬರುತ್ತಿದ್ದರು. ಅಲ್ಲಿ ಅವರು ಕಾಡು ಪ್ರಾಣಿಗಳಿಗೆ ಆಹಾರವಾಗುತ್ತಿದ್ದರು. ವಯಸ್ಸಾದ ತಂದೆ ತಾಯಿಗಳನ್ನು ಇಟ್ಟುಕೊಳ್ಳಲೂ ಜನ ಹೆದರುತ್ತಿದ್ದರು. ಯಾಕೆಂದರೆ ಚಾಡಿಕೋರರ ಭಯ.

ಹಾಗಿರುವಾಗ; ಒಬ್ಬ ವೃದ್ಧನಿಗೆ ಕಾಡಿಗೆ ಹೋಗುವ ಸಮಯ ಬಂತು. ಅವನಿಗೊಬ್ಬ ಮಗ, ಮೊಮ್ಮಗ ಇದ್ದರು. ದುಃಖವಾದರೂ ಅನಿವಾರ್ಯತೆಯಿಂದ ತಂದೆಯನ್ನು ಕಾಡಿಗೆ ಬಿಟ್ಟುಬರಲು ಮಗ ಸಿದ್ಧನಾದ. ಮುದಿ ತಂದೆಯನ್ನು ಕಾಡಿಗೆ ಒಯ್ಯಲು ತಳ್ಳುವ ಸಣ್ಣ ಬಂಡಿಯೊಂದನ್ನು ಸಿದ್ಧಮಾಡಿದ. ಮಗ ಹೊರಟಾಗ, ಮೊಮ್ಮಗನೂ ಜೊತೆ ಸೇರಿದ. ಮೂವರೂ ಕಾಡು ಸೇರಿದರು. ಎಲ್ಲೆಡೆ ದಟ್ಟ ಹಿಮ ಸುರಿದಿತ್ತು.

ಸಣ್ಣ ಬಂಡಿಗೆ ಬಿಗಿದು ಕೂರಿಸಿದ್ದ ವೃದ್ಧನನ್ನು ಬಿಟ್ಟು ಮನೆಗೆ ಹೊರಡುವ ಸಮಯವಾಯಿತು. ಮೊಮ್ಮಗ "ಸಣ್ಣ ಬಂಡಿ ಬೇಕು" ಒಂದೇ ಸಮ ಹಟ ಮಾಡಿದ. ತಂದೆ ಏನು ಹೇಳಿದರೂ ಅವನು ಸುಮ್ಮನಾಗಲಿಲ್ಲ. ಏನೇನೋ ಸಮಾಧಾನ ಮಾಡುತ್ತ ಮಗನನ್ನು ಎತ್ತಿಕೊಂಡ ತಂದೆ ಕೇಳಿದ,

"ಅಲ್ಲ ಮರಿ, ನಿನಗ್ಯಾಕೆ ಬೇಕು ಹೇಳು ಆ ಬಂಡಿ?"

"ನಿನಗೆ ವಯಸ್ಸಾದಾಗ ಹೀಗೇ ಕರಕೊಂಡು ಬರೋಕೆ ನನಗೆ ಬಂಡಿ ಬೇಡವಾ?" ಮಗುವಿನ ಸರಳ ಉತ್ತರ ಕೇಳಿ ತಂದೆಯ ಎದೆಯೊಡೆಯಿತು. ತನಗೆ ಬರಬಹುದಾದ ಇದೇ ಗತಿಯನ್ನು ನೆನೆಸಿಕೊಂಡೇ ತಲ್ಲಣ ಹುಟ್ಟಿತು.

ಕೊನೆಗೂ ಮಗನನ್ನು ಸಮಾಧಾನ ಮಾಡಿದ ಅವನು, ಕತ್ತಲಾದ ಮೇಲೆ ಯಾರಿಗೂ ತಿಳಿಯದಂತೆ, ವೃದ್ಧ ತಂದೆಯನ್ನು ವಾಪಸು ಕರೆದು ತಂದು ಅಕ್ಕಪಕ್ಕದವರಿಗೆ ಗೊತ್ತಾಗದಿರಲೆಂದು ಮನೆಯ ನೆಲಮಾಳಿಗೆಯಲ್ಲಿ ಇಟ್ಟು ಸಾಕತೊಡಗಿದ.

ಹೀಗಿರುತ್ತಾ ಒಂದು ಸಲ ಊರಲ್ಲಿ ಸಾಕು ಪ್ರಾಣಿಗಳಿಗೆ ಬೇನೆ ತಗುಲಿತು. ಇದ್ದಕ್ಕಿದ್ದಂತೆ ಪ್ರಾಣಿಗಳು ಸಾಯಲಾರಂಭಿಸಿದವು. ಮಗನ ಚಿಂತೆಯಿಂದ ಬಾಡಿದ ಮುಖ ನೋಡಿ ವಿಷಯ ತಿಳಿದುಕೊಂಡ ವೃದ್ಧ ಅದಕ್ಕೆ ಪರಿಹಾರವನ್ನು ಸೂಚಿಸಿದ. ತಂದೆಯ ಮಾತಿನಂತೆ ಅವನು ನಡೆದುದರಿಂದ ಹೆಚ್ಚಿನ ಹಾನಿಯೇನೂ ಅವನಿಗಾಗಲಿಲ್ಲ. ಎಲ್ಲ ಸಾಕುಪ್ರಾಣಿಗಳನ್ನೂ ಕಳೆದುಕೊಂಡ ನೆರೆಹೊರೆಯವರಿಗೋ ಭಾರಿ ಆಶ್ಚರ್ಯ. ಆತನ ಅದೃಷ್ಟವನ್ನು ಕೊಂಡಾಡಿದ್ದೂ ಕೊಂಡಾಡಿದ್ದೇ.

ಆ ದೇಶದ್ದು ಒಂದು ಸಂಪ್ರದಾಯ. ಶರತ್ಕಾಲದಲ್ಲಿ ಒಂದು ದೇವರ ಉತ್ಸವ ನಡೆಯುತ್ತಿತ್ತು. ಆದಷ್ಟು ಹೆಚ್ಚು ಸಂಖ್ಯೆಯಲ್ಲಿ ಪ್ರಾಣಿಗಳನ್ನು ಬಲಿಕೊಟ್ಟು ದೇವರ ಕೃಪೆ ಪಡೆಯುವುದು ಅಲ್ಲಿನ ವಾಡಿಕೆ. ಮಗನಿಗೆ ಮತ್ತೆ ಯೋಚನೆಯಾಯಿತು. ಇದ್ದ ಕೆಲವೇ ಪ್ರಾಣಿಗಳನ್ನು ಬಲಿ ಇತ್ತರೆ ಮುಂದಕ್ಕೆ ಏನು ಮಾಡುವುದು? ದಿಕ್ಕು ತೋಚದಂತಾಗಿ ತಂದೆಯನ್ನೇ ಹೋಗಿ ಸಲಹೆ ಕೇಳಿದ.

"ಇರೋ ಕೆಲವೇ ಪ್ರಾಣಿಗಳನ್ನು ಬಲಿಕೊಟ್ಟರೆ ಮುಂದೆ ತೊಂದರೆ. ಹಾಗೆ ಮಾಡಬೇಡ" ಎಂದ ಮುದುಕ. ಊರವರು ಇದ್ದ ದನ, ಕುರಿ, ಕುದುರೆ ಎಲ್ಲ ಬಲಿಕೊಟ್ಟು, ವಿಜೃಂಭಣೆಯಿಂದ

ಉತ್ಸವ ಮಾಡಿದರು. ಮಗ ಮಾತ್ರ ಸುಮ್ಮನಿದ್ದ. ಮಳೆ ಬಂದಾಗ ಉಳೋದಕ್ಕೂ ಎತ್ತಿಲ್ಲದೇ ಜನರೆಲ್ಲ ಕೈ ಚೆಲ್ಲಿ ಕುಳಿತರು. ದೇಶಕ್ಕೇ ಕ್ಷಾಮ ಬಂತು. ಮುಂದಿನ ಮಳೆಗಾಲಕ್ಕೆ ಬಿತ್ತಲು ಬೀಜವೂ ಇಲ್ಲದಂಥ ಸ್ಥಿತಿ.

ಮಗ ಮತ್ತೆ ತಂದೆಯ ಬಳಿ ಹೋಗಿ ಸಲಹೆಗಾಗಿ ಕೋರಿದ. ಮಾಡಿಗೆ ಹೊದಿಸಿದ ಹುಲ್ಲು ಬಡಿದರೆ ಬಿತ್ತನೆಗಾಗುವಷ್ಟು ಬೀಜ ಸಿಗುತ್ತದೆ ಎಂದ ಮುದುಕ. ಹಾಗೇ ಮಾಡಿ ಹೊಲದಲ್ಲಿ ಬೀಜ ಬಿತ್ತಿ ಬಂದ ಮಗ. ಜನಕ್ಕೆಲ್ಲ ಆಶ್ಚರ್ಯ. ಹೊಟ್ಟೆಗೇ ಗತಿಯಿಲ್ಲದ ಈ ಕಾಲದಲ್ಲಿ ಇವನೊಬ್ಬನ ಹತ್ತಿರ ಬಿತ್ತನೆಗೆ ಹ್ಯಾಗೆ ಕಾಳು ಬಂತು! ಬಹುಶಃ ಯಾವುದೋ ಭೂತ ಇವನಿಗೆ ಸಹಾಯ ಮಾಡುತ್ತಿರಬೇಕು ಎಂದು ಜನ ತರ್ಕಿಸಿದರು. ಅದನ್ನು ಪತ್ತೆ ಹಚ್ಚಬೇಕೆಂದು ಕಾವಲು ನಿಂತರು. ಹಾಗೆ ಕಾವಲು ಕಾಯುತ್ತಿದ್ದಾಗ, ವೃದ್ಧನನ್ನು ನೆಲಮಾಳಿಗೆಯಲ್ಲಿಟ್ಟು ಮಗ ಸಾಕುತ್ತಿದ್ದ ವಿಷಯ ಅವರಿಗೆ ಗೊತ್ತಾಗಿಬಿಟ್ಟಿತು. ದೇಶದ ದೊರೆಗೂ ಸುದ್ದಿ ಮುಟ್ಟಿತು. ರಾಜ ಮಗನಿಗೆ ಹೇಳಿ ಕಳುಹಿಸಿದ.

"ಮೊದಲೇ ದೇಶದಲ್ಲೆಲ್ಲ ಕ್ಷಾಮ. ಅಂಥದರಲ್ಲಿ ಕೆಲಸ ಮಾಡಲಾಗದ ಮುದಿ ಮನುಷ್ಯನನ್ನು ಮನೆಯಲ್ಲಿಟ್ಟುಕೊಂಡು ಸಾಕಲು ನಿನಗೆಷ್ಟು ಧೈರ್ಯ?" ರಾಜ ಸಿಟ್ಟಿನಿಂದ ಗದರಿದ.

"ಮನುಷ್ಯನಿಗೆ ಕೆಲಸ ಅಷ್ಟೇ ಅಲ್ಲ ಬುದ್ಧಿಯ ಅವಶ್ಯಕತೆಯೂ ಇದೆ ಸ್ವಾಮಿ" ಎಂದು ನಯ ವಿನಯಗಳಿಂದಲೇ ತಂದೆಯಿಂದಾದ ಉಪಕಾರ ಗಳನ್ನು ಮಗ ಹೇಳಿದ.

"ಓ ದೊರೆಯೆ, ಒಂದಷ್ಟು ಜನ ವೃದ್ಧರಿಗೆ ಅನ್ನ ಹಾಕುವುದಕ್ಕಿಂತ ಒಳ್ಳೆಯ ಬುದ್ಧಿ ಹೆಚ್ಚು ಬೆಲೆಯುಳ್ಳದ್ದು..." ಎಂದು ಮಾತು ಮುಗಿಸಿದ.

ರಾಜನಿಗೆ ನಿಜಸ್ಥಿತಿಯ ಅರಿವಾಯಿತು. ಅಂದಿನಿಂದ ವೃದ್ಧರನ್ನು ಕೊಲ್ಲುವ ಶಾಸನವನ್ನೇ ರದ್ದುಪಡಿಸಿದ. ಅಷ್ಟೇ ಅಲ್ಲ, "ತಂದೆ ತಾಯಂದಿರ ಕೊನೆಯುಸಿರಿನವರೆಗೂ ಮಕ್ಕಳು ಅವರನ್ನು ವೃದ್ಧಾಪ್ಯದಲ್ಲಿ ಜೋಪಾನವಾಗಿ ನೋಡಿಕೊಳ್ಳಬೇಕು" ಎಂದೂ ಆದೇಶ ಹೊರಡಿಸಿದ. *



## ಗುರಿ ಮತ್ತು ಸಾಧನ

*ಫ್ಯಾನು ಹಾಗೂ ಗಾಳಿಗಳು ಪರಸ್ಪರ ವಾದಿಸತೊಡಗಿದ್ದವು. ಫ್ಯಾನು ಹೇಳಿತು, "ನೀನೀಗ ಪ್ರಯೋಜನಕ್ಕೆ ಬರುವುದು ನನ್ನ ಕಾರ್ಯಾಚರಣೆಯಿಂದಾಗಿ."*

*ಗಾಳಿ ಮರು ನುಡಿಯಿತು, "ಅರೆ! ನಾನಿಲ್ಲದಿರುತ್ತಿದ್ದರೆ ನೀನೆಲ್ಲಿರುತ್ತಿದ್ದೆ?!" ಫ್ಯಾನಿಗೆ ಏನು ಹೇಳಬೇಕೋ ತೋಚಲಿಲ್ಲ. ಸುಮ್ಮನೆ ಯೋಚಿಸುತ್ತ ನಿಂತುಬಿಟ್ಟಿತು. ಕೆಳಗೆ ಕುಳಿತಿದ್ದ ಮನುಷ್ಯನಿಗೆ ಸೆಖೆ ತಡೆಯಲಾಗಲಿಲ್ಲ. ಆತ, "ಫ್ಯಾನು! ಫ್ಯಾನು!" ಎಂದು ಅರಚಿದ. ಇದನ್ನು ಕೇಳಿದಾಕ್ಷಣ ಫ್ಯಾನಿನ ತಲೆ ಓಡಿತು. ಅದು ಗಾಳಿಗೆ ಹೇಳಿತು, "ನೋಡು! ಆತ ನನ್ನನ್ನು ಧ್ಯಾನಿಸುತ್ತಾನೆಯೇ ಹೊರತು ನಿನ್ನನ್ನಲ್ಲ!"*

*ಗಾಳಿ ಮರುತ್ತರಿಸಿತು, "ಆತನೊಬ್ಬ ದಡ್ಡ. ಅವನಿಗೆ ಬೇಕಾಗಿರುವುದು ನಾನು; ಅವನು ಕೂಗುತ್ತಿರುವುದು ನಿನ್ನನ್ನು! ಇಂತಹ ದಡ್ಡರ ಮಾತೇನು?" ಗಾಳಿಯ ಈ ಮಾತಿಗೆ ಫ್ಯಾನು ತಲೆದೂಗಿತು. ತನ್ನ ಬುದ್ಧಿಶಕ್ತಿಗೆ ಗಾಳಿ ತಾನೇ ಬೀಗಿತು.*

*ಆದರೆ, 'ಗುರಿಯೆನ್ನುವುದು ಹೇಗೂ ಇರುತ್ತದೆ; ಅದನ್ನು ಮುಟ್ಟಲು ಬಳಸಬೇಕಾದ ಸಾಧನದ ಕಡೆಗೆ ಗಮನವೀಯಬೇಕಾದ್ದು ಮುಖ್ಯ;' ಎಂಬ ಲೋಕ ಸತ್ಯವನ್ನು ಅರಿತುಕೊಂಡಿರುವ ಚಾಣಾಕ್ಷ ಆ ಮನುಷ್ಯ ಎಂಬುದು ದಡ್ಡ ಗಾಳಿಗೆ ಗೊತ್ತಾಗಲೇ ಇಲ್ಲ!* *

● ಎಚ್. ಆನಂದರಾಮ ಶಾಸ್ತ್ರಿ ●

ಧಾರ್ಮಿಕ ವಿಭಾಗ

# ಬದುಕಲು ಕಲಿಯಿರಿ



PATIL

ಸ್ವಾಮಿ ಜಗದಾತ್ಮಾನಂದ

ಸಂಗ್ರಹ

ಎಲ್. ಜಿ. ಮೊಕ್ತಾಲಿ

# ಬದುಕಲು ಕಲಿಯಿರಿ

'ಬದುಕಲು ಕಲಿಯಿರಿ'ಯ ಮೊದಲ ಭಾಗ 1977ರ ಫೆಬ್ರವರಿ 'ಕಸ್ತೂರಿ' ಸಂಚಿಕೆಯಲ್ಲಿ ಸಂಗ್ರಹಗೊಂಡು ಪ್ರಕಟವಾಗಿ ಬೀರಿದ ಪರಿಣಾಮ ಅತ್ಯದ್ಭುತ. ಅಸಂಖ್ಯಾತ ಓದುಗರು "ಅದರಲ್ಲಿಯ ಸೂತ್ರಗಳನ್ನು ಅಳವಡಿಸಿಕೊಂಡು ನಿರಾಶೆಯ ಬದುಕಿಗೆ ಬೆಳಕನ್ನು ಕಂಡುಕೊಂಡೆ"ವೆಂದು ಅಭಿಪ್ರಾಯಪಟ್ಟರು.

ಇದೀಗ 'ಬದುಕಲು ಕಲಿಯಿರಿ'ಯ ಎರಡನೆಯ ಭಾಗವನ್ನು ನಿಮಗೆ ನೀಡುತ್ತಿದ್ದೇವೆ. ಪುಟಗಳ ಮಿತಿಯನ್ನರಿತು ಈ ಭಾಗದ ಮೂರು ಅಧ್ಯಾಯಗಳನ್ನು ಮಾತ್ರ ಸಂಗ್ರಹಿಸಿ ಇಲ್ಲಿ ಪ್ರಕಟಿಸುತ್ತಿದ್ದೇವೆ.

'ಬದುಕಲು ಕಲಿಯಿರಿ'ಯ ಮೊದಲ ಮತ್ತು ಎರಡನೆ ಭಾಗ ಸೇರಿದ ಸಂಯುಕ್ತ ಪರಿಷ್ಕೃತ ಆವೃತ್ತಿಯೊಂದು * ಇತ್ತೀಚೆಗೆ ಪ್ರಕಟಗೊಂಡಿದೆ.

## : ಅಧ್ಯಾಯ ಒಂದು :

ಚಿಂತೆಯ ಚಿತೆಯಿಂದ ದೂರಾಗಿ: ಚಿಂತಾಕ್ರೋಶ ಭಯ ಉದ್ವೇಗಗಳ ಸಂಕ್ಷಿಪ್ತ ರೂಪವೇ "ಚಿಂಕ್ರೋಭ". ಇದು ಏನು ಮಾಡೀತು? ರಕ್ತ ಸಂಚಾರ, ಹೃದಯ, ಗ್ರಂಥಿಗಳು ಹಾಗೂ ಸಂಪೂರ್ಣ ನರವ್ಯೂಹ-ಇವುಗಳ ಮೇಲೆ ತನ್ನ ಪ್ರಬಲ ಪ್ರಭಾವವನ್ನು ಬೀರಿ ಆರೋಗ್ಯವನ್ನು ಹಾಳು ಮಾಡೀತು.

ಮಾನಸಿಕ ವ್ಯಾಧಿಯು ಕ್ಷಯ ಅಥವಾ ಕ್ಯಾನ್ಸರ್ ರೋಗಕ್ಕಿಂತಲೂ ಹೆಚ್ಚಿನ ದುಃಖವನ್ನು ತಂದು ಕೊಟ್ಟೀತು. ಚಿತೆಯು ನಿರ್ಜೀವವನ್ನು ಸುಟ್ಟರೆ ಚಿಂತೆಯು ಜೀವಂತ ವ್ಯಕ್ತಿಯನ್ನು ಸುಡುತ್ತದೆ. ಆದ್ದರಿಂದ ಚಿಂತೆಯನ್ನು ದೂರಕ್ಕೆ ಎಸೆಯಿರಿ. ಕ್ರೋಧದಿಂದ ತುಂಬಿದ ಸರ್ಪವು ಕಚ್ಚಿ ಕೊಲ್ಲುವಂತೆ ಚಿಂತೆಯು ಮನುಷ್ಯನನ್ನು ನಾಶಮಾಡುತ್ತದೆ.

ವೈಜ್ಞಾನಿಕ ಯುಗದ ವೇಗ ಅವಸರ ಗೊಂದಲಗಳ ಮಧ್ಯದಲ್ಲಿ ಸಿಲುಕಿ ರಾಜಕೀಯ ರಾಗದ್ವೇಷಗಳ ಸುತ್ತಿನಲ್ಲಿ ಸಿಕ್ಕು ಬದುಕಿಗಾಗಿ, ಧನಾರ್ಜನೆಗಾಗಿ ಕೊರಳಿರಿಯುವ ತೀವ್ರ ಸ್ಪರ್ಧೆಯ ಸುಳಿಯಲ್ಲಿ ಸುತ್ತುತ್ತಿದ್ದೇವೆ. ವಿಭಿನ್ನ ಜಾತಿ ಮತ ಪಥ ಪಂಥ ಪಕ್ಷ ಪಂಗಡಗಳೊಳಗಿನ ಗುಪ್ತ, ವ್ಯಕ್ತ, ವಿದ್ವೇಷ ಭಾವನೆಗಳ ಪ್ರವಾಹದಲ್ಲಿ ತೇಲುತ್ತಿದ್ದೇವೆ. ಮೌಲ್ಯಗಳ ಕುಸಿತ, ಸಂಕುಚಿತ ಸ್ವಾರ್ಥತೆ ಹಾಗೂ ನೈತಿಕ ಅಧಃಪತನಗಳನ್ನು ಸರ್ವತ್ರ ಕಾಣುತ್ತಿದ್ದೇವೆ. ಇಂಥ ಪರಿಸ್ಥಿತಿಯಲ್ಲಿ ಜನರು ತಮ್ಮ ಆಂತರಿಕ ಶಾಂತಿಯನ್ನು ಸಮತೋಲನವನ್ನು ಚಿತ್ತಸ್ವಾಸ್ಥ್ಯವನ್ನೂ ಕಾಪಾಡಿಕೊಳ್ಳುವ ವಿಧಾನವನ್ನು ತಿಳಿಯದಿದ್ದರೆ ನರಮಂಡಲದ ದೌರ್ಬಲ್ಯ ಹಾಗೂ ನಾನಾ ತೆರನಾದ ಮಾನಸಿಕ, ದೈಹಿಕ, ವ್ಯಾಧಿಗ್ರಸ್ಥನಾಗುವುದು ಖಂಡಿತ ಎಂದು ಕಂಡುಬಂದಿದೆ.

* 'ಬದುಕಲು ಕಲಿಯಿರಿ' ಬೆಲೆ ರೂ. 30
ಸ್ವಾಮಿ ಜಗದಾತ್ಮಾನಂದ
ವಿವೇಕ ಪ್ರಕಾಶನ, ಕೃಷ್ಣ ಕುಟೀರ, ಸಾಲಿಗ್ರಾಮ-576 225 ದ.ಕ.

**ಏನು, ಎಂಥದು? ಏಕೆ, ಹೇಗೆ?:** ನಗರದ ಶಾಲೆಯ ಮೇಲ್ವಿಚಾರಕರೊಬ್ಬರಿಗೆ ಇದ್ದಕ್ಕಿದ್ದಂತೆ ಗಿರ್ ಎಂದು ತಲೆ ತಿರುಗಲು ಆರಂಭವಾಯ್ತು. ಇವರು ಶಾಂತಚಿತ್ತ ವ್ಯಕ್ತಿ ಎನಿಸಿಕೊಂಡಿದ್ದರೂ ಮಲಗಿಕೊಂಡೇ ಇದ್ದರೆ ತಲೆ ತಿರುಗುತ್ತಿರಲಿಲ್ಲ. ಎದ್ದು ಕುಳಿತುಕೊಳ್ಳಲು ಪ್ರಯತ್ನಿಸಿದರೆ ತಲೆತಿರುಗುವ ಜೊತೆಗೆ ವಾಂತಿಯೂ ಪ್ರಾರಂಭವಾಗುತ್ತಿತ್ತು. ಹಲವು ದಿನಗಳ ವಿಶ್ರಾಂತಿಯ ನಂತರ ತನಗೆ ಆದ ಕಾಹಿಲೆ ಚಿಂತಾ ಭಯೋದ್ವೇಗಗಳಿಂದಲೇ ಉಂಟಾದುದೆಂದು ತನ್ನ ಡಾಕ್ಟರಿಗೆ ತಿಳಿಸಿದ.

ಅದು ಹೇಗೆ ಎಂದು ಕೇಳಿದಾಗ ತನ್ನ ಆಪ್ತ ಗೆಳೆಯನೊಬ್ಬ ಸಂಸ್ಥೆಯೊಂದರಿಂದ ಸಾಲ ಪಡೆಯುವಾಗ ತನಗೆ ಜಾಮೀನಾಗಲು ಕೇಳಿದ್ದ. ಮೊದಲಿಗೆ ನಿರಾಕರಿಸಿದರೂ ಕೊನೆಗೆ ಜಾಮೀನಾಗಿದ್ದ. ಮುಂದೆ ಕೆಲವು ದಿನಗಳ ನಂತರ ಅವರು ಆರೈಕೆಗಾಗಿ ಆಸ್ಪತ್ರೆಯನ್ನು ಸೇರಬೇಕಾಯ್ತು. ಆತನ ವ್ಯವಹಾರದ ಜೊತೆಗೆ ನನ್ನ ಹಣವೂ ಮುಳುಗಿತು ಎಂದೆನಿಸಿದ ಚಿಂತೆಯು ಬಾಧಿಸತೊಡಗಿತು. ಆ ಕಾರಣದಿಂದಲೇ ತಲೆ ತಿರುಗು, ವಾಂತಿ ಪ್ರಾರಂಭವಾಯ್ತು.

ಅದೇ ಕಾರಣವೆಂದು ಹೇಗೆ ಹೇಳುವಿ? ಎಂದು ಕೇಳಿದಾಗ ತಾನು ಮನೆಯಲ್ಲಿ ಮಲಗಿಕೊಂಡಾಗ ತನ್ನನ್ನು ನೋಡಬಂದವನು ಬ್ಯಾಂಕಿಗೆ ಹಣ ಹಿಂದಿರುಗಿಸಿದ ವಿಚಾರ ತಿಳಿಸಿದ. ಮಾರನೇ ದಿನವೇ ಸ್ವಸ್ಥನಾಗಿ ನಾನು ಶಾಲೆಗೆ ಹಿಂದಿರುಗಿದೆ ಎಂದು ಹೇಳಿದ.

**ಪ್ರಾಣ ಹಿಂಡುತಿ:** ಈ ಉದಾಹರಣೆಯಲ್ಲಿ ರೋಗಿಗೆ ಎಪ್ಪತ್ತು ಮೂರು ವರ್ಷ. ಅವನಿಗೆ ಅತಿ ವಿಚಿತ್ರವಾದ ಚರ್ಮರೋಗ. ಅರವತ್ತೆಂಟನೇ ವಯಸ್ಸಿನಲ್ಲಿ ತನ್ನ ವಯಸ್ಸಿನವಳೊಬ್ಬಳನ್ನು ಮದುವೆಯಾದ. ಅವರು ಮಧುವಿಹಾರಕ್ಕೆಂದು ಹೋದಾಗಲೇ ಚರ್ಮರೋಗ ಆರಂಭವಾಯ್ತು. ಯಾವುದೋ ಕಾರ್ಯಕ್ಕಾಗಿ ನೂರಾರು ಮೈಲು ದೂರದ ಊರಿಗೆ ಹೋದಾಗ ಅವನ ಚರ್ಮ ಸ್ವಚ್ಛವಾಗಿ ಬಿಡುತ್ತಿತ್ತು. ಅವನ ಹೆಂಡತಿಯು ಒಂದು ವಾರ ತನ್ನ ತವರೂರಿಗೆ ಹೋದಾಗ ಚರ್ಮರೋಗ ಕಾಣದಾಗಿತ್ತು.

ಇದರ ಕಾರಣವನ್ನು ತಿಳಿಯಲು ಪ್ರಯತ್ನಿಸಿದಾಗ ತನ್ನ ಹೆಂಡತಿ ಬಹಳಷ್ಟು ಅಧಿಕಾರ ಮನೋಭಾವದವಳು. ಅದು ತನಗೆ ಅಸಹ್ಯವೆನಿಸುತ್ತಿತ್ತು ಎಂದ. ಅವನ ಪತ್ನಿಗೆ ತಿಳಿಸಿ ಹೇಳಿದಾಗ ಅವಳು ಸ್ವಭಾವವನ್ನು ಬದಲಿಸಿಕೊಂಡಳು. ನಂತರ ಚರ್ಮರೋಗದ ಹೆಸರಿಲ್ಲದಾಯ್ತು.

**ಕಾರ್ಯಭಾರ ತಲೆಭಾರ:** ಅನಂತರಾವ್ ಎಂಬುವವರು ಕಾರ್ಯ ಕುಶಲತೆಯಿಂದ ಬಡತಿ ಹೊಂದಿ ದೊಡ್ಡ ಸಂಸ್ಥೆಯ ಮ್ಯಾನೇಜರರಾದರು. ಅಂದಿನಿಂದ ಹದಿನೈದು ದಿವಸಗಳೊಳಗೆ ಹೃದಯದ ಬಡಿತ, ಭಯ ಸಂಕಟಗಳಿಂದ ರಾತ್ರಿ ಗಂಟೆಗಳ ಕಾಲ ಎಚ್ಚೆತ್ತು ಸುಮ್ಮನೆ ಕುಳಿತಿರುತ್ತಿದ್ದರು. ಏಕೆಂದು ವಿಚಾರಿಸಿದಾಗ ಆ ಸ್ಥಾನದ ಕಾರ್ಯನಿರ್ವಹಣೆ ದೊಡ್ಡ ಭಾರವಾಗಿದೆ ಎಂದರು. ಕೆಲಕಾಲ ರಜೆ ತೆಗೆದುಕೊಳ್ಳುವಂತೆ ಸೂಚನೆ ನೀಡಿದಾಗ ಕಡಿಮೆ ಎನಿಸಿತು. ತಿರುಗಿ ಕೆಲಸಕ್ಕೆ ಹಾಜರಾದಾಗ ತಮ್ಮ ಭಾರ ಕಡಿಮೆಯಾಗುವಂತೆ ಮತ್ತೊಬ್ಬ ಅಧಿಕಾರಿ ಬಂದ ಕಾರಣವಾಗಿ ಅವರು ತಮ್ಮ ತೊಂದರೆಗಳಿಂದ ಮುಕ್ತರಾದರು.

**ಮೂಕವೇದನೆ:** ಸುಸಂಸ್ಕೃತ ಮನೆತನದ ಹುಡುಗಿ ಸುಜಾತಾ. ಮದುವೆಯಾದ ಅಲ್ಪ ಅವಧಿಯಲ್ಲಿಯೇ ತನ್ನ ಪತಿಯು ಕುಡಿತದ ಚಟಕ್ಕೆ ಬಲಿಯಾಗಿದ್ದಾನೆ ಎಂದು ತಿಳಿದು ಬಂತು. ಅವಳು ಎಷ್ಟು ಪ್ರಯತ್ನ ಮಾಡಿದರೂ ಅವನನ್ನು ಆ ಚಟದಿಂದ ದೂರಮಾಡಲಾಗಲಿಲ್ಲ. ನೆರೆಹೊರೆಯವರ ನಿಂದೆ ತಿರಸ್ಕಾರಗಳನ್ನು ಸಹಿಸಲಾಗಲಿಲ್ಲ. ಅವಳಿಗೆ ಜೀವ ಬೇಸರವಾಯ್ತು. ಉತ್ಸಾಹ ಕಡಿಮೆಯಾಯ್ತು. ಸುಸ್ತಾದಳು. ಮರೆವು ಹೆಚ್ಚಾಯ್ತು. ಬಳಲುತ್ತಿದ್ದಳು.

**ಬಾಯಿ ಮುಚ್ಚು ಎದುರಾಡಬೇಡ:** ಅಧಿಕಾರವಾಣಿಯಿಂದ ಆಡಿದ ಮಾತು ಮುಗ್ಧ ನಿಸ್ಸಹಾಯಕರಾದ ವ್ಯಕ್ತಿಗಳ ಮೇಲೆ ಆಗುವ ಪರಿಣಾಮ ಒಂದು ಬಗೆಯ ಕಾಯಿಲೆಯ ರೂಪಗೊಳ್ಳುತ್ತದೆ. ಹೀಗೆ ವ್ಯಕ್ತಿಯೊಬ್ಬನ ಮನಸ್ಸಿನಲ್ಲಿ ಚಿಂತೆ ಉದ್ವೇಗಗಳುಂಟು ಮಾಡುವ ಯೋಚನೆ, ಭಾವನೆಗಳನ್ನು ಬಿತ್ತಿದಾಗ ರೋಗಾಣುಗಳಿಂದ ನಮ್ಮನ್ನು ರಕ್ಷಿಸುವ ರಕ್ತಪ್ರವಾಹದಲ್ಲಿಯ ಅನೇಕ ಬಿಳಿಯ ಕಣಗಳು ನಾಶವಾಗುವವು. ಚಿಂತಾಕ್ರೋಶ ಭಯೋದ್ವೇಗಗಳಿಂದ ನಮ್ಮ ಆರೋಗ್ಯಕ್ಕೆ ನಾವೇ ಕಲ್ಲು ಹಾಕಿಕೊಳ್ಳುತ್ತೇವೆ.

ಅದರಂತೆ ಹೊಟ್ಟೆ ಹುಣ್ಣಿನ ರೋಗ ಉದ್ವೇಗಗೊಳ್ಳುವುದು ಮಾನಸಿಕ ಚಿಂತಾಭಯೋದ್ವೇಗ ಗಳ ಏರುಪೇರುಗಳಿಂದ ಎಂದು ಕಂಡುಬಂದಿದೆ.

ಕಾರಣ ನಮ್ಮ ಉತ್ಸಾಹ, ಧೈರ್ಯ, ಕಾರ್ಯಕುಶಲತೆ ಆನಂದಗಳನ್ನು ಬೆಳೆಯಿಸಿಕೊಳ್ಳಬೇಕು. ಅದ ರಿಂದ ನಮ್ಮ ಜೀವನವು ನಂದನವನವಾಗುವದಲ್ಲದೆ ಎಲ್ಲರ ಬದುಕನ್ನು ಆನಂದವನವಾಗಿ ಮಾರ್ಪಡಿಸುತ್ತದೆ.

**ಮುಖಂಡರ ಮೌಢ್ಯ:** ಸದ್ಯದ ಶಿಕ್ಷಣ ಪದ್ಧತಿಯಲ್ಲಿ ಹಾಗೂ ಸಾಮಾಜಿಕ ನಡವಳಿಕೆಗಳಲ್ಲಿ ಮೂಲ ಮೌಲ್ಯಗಳನ್ನು ಮರೆತುಬಿಟ್ಟಂತಿದೆ. ಶಿಕ್ಷಕರು, ಬರಹಗಾರರು ಇದರ ಅರ್ಥ ಮಾಡಿಕೊಳ್ಳುವ ಸ್ಥಿತಿ ಯಲ್ಲಿಲ್ಲ. ಕ್ರಾಂತಿಕಾರ ಮುಖಂಡರಿಗೆ ಸೇವಾಕಾರ್ಯ ಅಸಾಧ್ಯವೆನಿಸಿದೆ. ತಮಗಿಂತ ಆರ್ಥಿಕವಾಗಿ ಸಾಮಾಜಿಕವಾಗಿ ಮೇಲಿರುವವರನ್ನು ಖಂಡಿಸುವುದು ರೂಢಿಯಾಗಿದೆ. ರಾಜಕೀಯ ಪಕ್ಷಗಳು ತಮ್ಮ ತಮ್ಮ ಶ್ರೇಷ್ಠತೆಯನ್ನು ಹೇಳಿಕೊಳ್ಳುವ ಪಿಡುಗು ಬಂದಿದೆ. ಆದುದರಿಂದ ಸಾಮಾನ್ಯ ಹಳ್ಳಿಯ ಸರಳ ವ್ಯಕ್ತಿಗಳಿಗಿಂತಲೂ ಬುದ್ಧಿವಂತ ವಿದ್ಯಾವಂತರೆನಿಸಿಕೊಂಡ ಜನಗಳೇ ಮಾನಸಿಕ ತಳಮಳ, ಚಿಂತಾ ಭಯೋದ್ವೇಗಗಳ ರೋಗಕ್ಕೆ ತುತ್ತಾಗಿದ್ದು ಕಂಡು ಬಂದಿದೆ.

ಈ ಕೋಪತಾಪ ಚಿಂತಾಭಯೋದ್ವೇಗಗಳು ಉಂಟು ಮಾಡುವ ದುಷ್ಪರಿಣಾಮಗಳನ್ನು ಕಂಡು ಹಿಡಿಯಲು ವೈದ್ಯವಿಜ್ಞಾನವು ಹೆಚ್ಚು ಹೆಚ್ಚಾಗಿ ಇತ್ತೀಚೆಗೆ ಪ್ರಯತ್ನಿಸುತ್ತಿದೆ.

**ಏಕೆ ಹೇಳುತ್ತಿಲ್ಲ:** ಈ ವಿಚಾರವನ್ನು ಯಾವ ಡಾಕ್ಟರರೂ ಹೇಳುತ್ತಿಲ್ಲ, ಏಕೆ? ಎಂದಾಗ ಆ ಡಾಕ್ಟರರು ಔಷಧ ಕೊಡಲು ಬೇಸರಪಟ್ಟು ಹಾಗೆ ಇದೆಲ್ಲ ರಿಲಾಕ್ಸ್ ಮಾಡಿಕೊಂಡರೆ ಶಾಂತಚಿತ್ತ ರಾದರೆ ಮತ್ತು ಉದ್ವೇಗ ರಾಗ-ದ್ವೇಷಗಳನ್ನು ಕಡಿಮೆ ಮಾಡಿಕೊಂಡಾಗ ಈ ರೋಗವು ಗುಣವಾಗು ತ್ತದೆ ಎಂಬ ತಪ್ಪು ತಿಳುವಳಿಕೆ ಮಾಡಿಕೊಡುತ್ತಾರೆ. ಅಲ್ಲದೇ ಆ ಡಾಕ್ಟರನು ಜಾಣನಲ್ಲನೆಂಬ ನಿರ್ಣಯಕ್ಕೆ ಬರುತ್ತಾರೆ.

**ರೋಗವನ್ನು ಮಾತ್ರವಲ್ಲ ರೋಗಿಯನ್ನು:** ಕಾರಣ ರೋಗವನ್ನು ಮಾತ್ರವಲ್ಲ ರೋಗಿಯನ್ನು ಚಿಕಿತ್ಸೆ ಗೊಳಪಡಿಸುವ ಕಾರ್ಯವನ್ನು ವೈದ್ಯರು ಕೈಗೊಳ್ಳಬೇಕಾಗಿದೆ. ರೋಗಿಯ ಕೌಟುಂಬಿಕ ಹಾಗೂ ಸಾಮಾಜಿಕ ಆರ್ಥಿಕ ಪರಿಸ್ಥಿತಿ ಆತನ ನಂಬಿಕೆ, ದೃಷ್ಟಿಕೋನ, ಬಾಲ್ಯದ ಅನುಭವಗಳನ್ನು ತಿಳಿದು ಅವುಗಳ ಪರಿಣಾಮ ಸದ್ಯದ ಪರಿಸ್ಥಿತಿಗೆ ಹೇಗೆ ಕಾರಣ ಎಂಬುದನ್ನು ತಿಳಿಸಿ ಹೇಳಿ ಮಾರ್ಗದರ್ಶನ ಮಾಡಿ ಸರಿಯಾದ ಚಿಕಿತ್ಸೆ ಮಾಡಬೇಕಾಗುವದು.

**ಬದಲಿ ಚಿಕಿತ್ಸಾ ವಿಧಾನ:** ಹಿಂದಿನ ಯುಗದಲ್ಲಿ ಮೈಯಲ್ಲಿ ಭೂತ ಮೆಟ್ಟಿಕೊಂಡಿರುವುದೇ ಅನಾರೋಗ್ಯಕ್ಕೆ ಕಾರಣ ಎಂಬ ತಿಳಿವಳಿಕೆ ಇತ್ತು. ಅದಕ್ಕಾಗಿ ನಾಟಕೀಯವೆನಿಸಿದ ಉಪಾಯಗಳೂ ಸೂಚನೆಗಳೂ ರೂಢಿಯಲ್ಲಿದ್ದವು. ಮುಂದೆ ಮಧ್ಯ ಯುಗದಲ್ಲಿ ರೋಗಗಳಿಗೆ ಧಾತು ವಿಕಾರ ಕಾರಣ ಎನ್ನುತ್ತಿದ್ದರು. ಶರೀರದಿಂದ ರಕ್ತವನ್ನು ತೆಗೆದು ಬಿಟ್ಟರೆ ಧಾತುಗಳು ಸಮತೋಲನವನ್ನು ಪಡೆದು ಆರೋಗ್ಯ ಸಿಗುತ್ತದೆ ಎಂದು ಚಿಕಿತ್ಸೆ ನೀಡುತ್ತಿದ್ದರು. ಕೆಲಮಂದಿ ಆಧುನಿಕ ವೈದ್ಯಕೀಯ ಪಂಥ ದವರು ಬೆನ್ನೆಲುಬಿನ ಅಥವಾ ಎಲುಬುಗಳ ಸ್ಥಾನ ಪಲ್ಲಟದಿಂದ ಅನಾರೋಗ್ಯ ಉಂಟಾಗುತ್ತದೆ. ಅದನ್ನು ಬೆನ್ನಿನ ಮೇಲೆ ಹಸ್ತ ಪರಿಚಾಲನಾ ವಿಧಾನದಿಂದ ಸರಿಪಡಿಸಬಹುದು ಎನ್ನುತ್ತಾರೆ. ಇಂದಿನ ವೈದ್ಯಕೀಯ ತಜ್ಞರು ಈ ಬದಲಿ ರೋಗವನ್ನು ವಿಧಾನವನ್ನು 'ರಕ್ತದ ಏರೊತ್ತಡ' 'ಲೋ ಬೇಸಲ್ ಮೆಟಬಾಲಿಕ್ ರೇಟ್' 'ಎಡ್ರೆನಲ್ ಕಾರ್ಟಿಕಲ್ ಇನ್‌ಸಫೀಷಿಯನ್ಸಿ' 'ಸ್ಲಗ್ಗಿಷ್ ಲೀವರ್' ಎಂದು ಹೆಸರಿಸುತ್ತಾರೆ. ರೋಗದ ಲಕ್ಷಣದ ಪ್ರಕಾರ ಈ ಹೆಸರು ನಿಜವೆನಿಸಬಹುದು. ಆದರೆ ರೋಗ ನಿಧಾನ ಅಥವಾ ಕಾರಣ ಅವು ಅಲ್ಲವೆಂಬುದೇ ತಿಳಿಯಬೇಕಾದ ಅಂಶ. ಸ್ವಲ್ಪಮಟ್ಟಿಗೆ ರೋಗದ ಉಪಶಮನವು ಬದಲಿ ಚಿಕಿತ್ಸೆ ಎನಿಸಿಕೊಳ್ಳುತ್ತದೆ. ರೋಗದ ಕಾರಣವನ್ನು ದೂರಕ್ಕೆಸೆಯುವದೇ ನಿಜವಾದ ಚಿಕಿತ್ಸೆಯು. ಇಂಥ ಬದಲಿ ಚಿಕಿತ್ಸೆಗಳು ರೋಗಿಯನ್ನು ಸಂಪೂರ್ಣವಾಗಿ ಮುಕ್ತ ಗೊಳಿಸದೇ ಅದರ ಭಯವೇ ರೋಗಿಯ ನರಳಾಟದ ತೀವ್ರತೆಯನ್ನು ಹೆಚ್ಚಿಸುತ್ತಿದೆ.

ಬದಲಿ ಚಿಕಿತ್ಸೆಯಿಂದ ಕೆಲವು ತಿಂಗಳ ಕಾಲ ಗುಣಮುಖರನ್ನಾಗಿ ಮಾಡಬಹುದು. ಅದರಿಂದ

# ಅಮರನಾದ ಜೀವಾತ್ಮ

IMMORTAL ENTITY










ಶಾಶ್ವತ ಪರಿಹಾರ ದೊರೆಯದೇ ಅದು ಸ್ಥಾಯಿಯಾಗಿ ಅವರನ್ನು ಅಂಟಿಕೊಳ್ಳುತ್ತದೆ. ಅದನ್ನು ಹೇಳಲಾರದೆಯೇ ಕೆಲವು ಡಾಕ್ಟರುಗಳು ರೋಗಿಯಲ್ಲಿ ಅಸಂಗತ ಕಾಲ್ಪನಿಕ ಭಯವನ್ನುಂಟು ಮಾಡುವ ರೋಗದ ಹೊಸ ಹೆಸರನ್ನು ಹೇಳುವ ರೂಢಿಯಾಗಿದೆ.

**ಮಾನಸಿಕ ಮೂಲ:** ಮಾನಸಿಕ ಮೂಲವಾದರೂ ಚಿಂಕ್ರೋಭದಿಂದ ನರಳುವವರಲ್ಲಿ ರೋಗದ ದೈಹಿಕ ಲಕ್ಷಣಗಳೆಲ್ಲ ಸ್ಪಷ್ಟವಾಗಿ ಗೋಚರಿಸುವವು. ಇವುಗಳ ಶತಾಂಶಗಳನ್ನು ನೋಡಬಹುದು.

| ಬೇನೆಗಳು | ಶತಾಂಶಗಳಲ್ಲಿ |
|---|---|
| ಕತ್ತಿನ ಹಿಂದೆ ಉಂಟಾಗುವ ಬೇನೆ | 75 |
| ಗಂಟಲಿನಲ್ಲಿ ಗಡ್ಡೆಯ ಅನುಭವ | 90 |
| ಹೊಟ್ಟೆಯ ಹುಣ್ಣಿನ ನೋವು | 50 |
| ಗಾಲ್ ಬ್ಲ್ಯಾಡರ್ ನೋವು | 50 |
| ವಾಯು ತೊಂದರೆ | 99 |
| ತಲೆ ತಿರುಗು | 80 |
| ತಲೆನೋವು | 80 |
| ಮಲಬದ್ಧತೆ | 70 |
| ಬಳಲಿಕೆ | 90 |

ಚಿಂತಾಕ್ರೋಶ ಭಯೋದ್ವೇಗಗಳು ನಮ್ಮ ದೇಹದಲ್ಲಿ ರಾಸಾಯನಿಕ ಬದಲಾವಣೆಗಳನ್ನು ಉಂಟುಮಾಡುತ್ತವೆ ಎಂಬುದನ್ನು ಸುಲಭವಾಗಿ ತಿಳಿದುಕೊಳ್ಳಬಹುದು. ಕೋಪ ಬಂದಾಗ ಹುಬ್ಬು ಗಂಟು ಇಕ್ಕುತ್ತೇವೆ. ಕಣ್ಣು ಕೆಂಪಗಾಗುತ್ತವೆ. ಧ್ವನಿಯಲ್ಲಿ ಬದಲಾವಣೆಯಾಗುತ್ತದೆ, ಸ್ವಲ್ಪ ನಡುಕ ಉಂಟಾಗುತ್ತದೆ. ಹಾವ ಭಾವದಲ್ಲಿ ಏರುಪೇರು ಇತ್ಯಾದಿ ಆಗುತ್ತದೆ. ಇವು ಹೊರಗಿನ ಲಕ್ಷಣಗಳಾದರೆ ದೇಹದಲ್ಲಿ ರಕ್ತದ ಒತ್ತಡ ಹೆಚ್ಚಾಗುವದು, ಎದೆ ಬಡಿತ ಜೋರಾಗುವದು. ಅದರಿಂದ ರಕ್ತಸ್ರಾವ ಉಂಟಾಗಬಹುದು. ರಕ್ತನಾಳ ಸಂಕುಚಿತಗೊಳ್ಳಬಹುದು. ಒಮ್ಮೊಮ್ಮೆ ಪ್ರಾಣಾಂತಿಕ ಆಘಾತ ಉಂಟಾಗಬಹುದು. ಕೆಲವರು ಇದನ್ನು ಹೊರಗೆ ತೋರಿಸಿಕೊಳ್ಳದಿದ್ದರೂ ಅಂತರ್ಮನಸ್ಸಿನಲ್ಲಿ ತೀವ್ರವಾಗಿ ನೊಂದುಕೊಂಡು ಬಳಲುತ್ತಾರೆ. ಇದು ಆರೋಗ್ಯಕ್ಕೆ ಮಾರಕವಾಗುತ್ತದೆ.

ಇಂದಿನ ವೇಗದ ಯುಗದಲ್ಲಿ ತಾಳ್ಮೆ ಮತ್ತು ಶಾಂತಿಗಳನ್ನು ಉಳಿಸಿಕೊಳ್ಳುವದು ಬಹಳ ಕಷ್ಟದ ವಿಷಯ. ಆದರೂ ಮನುಷ್ಯ ಶರೀರದಲ್ಲಿ ಪರಿಸ್ಥಿತಿಗೆ ಹೊಂದಿಕೊಳ್ಳುವ ಚಾತುರ್ಯ ಇದ್ದ ಕಾರಣ ಅಂಥ ಅನೇಕ ಸನ್ನಿವೇಶಗಳನ್ನು ಎದುರಿಸಿ ನಿಲ್ಲುತ್ತಾನೆ. ಅವುಗಳನ್ನೆಲ್ಲ ಮರೆತು ಹೇಗೋ ಮನಸ್ಸು ಹೊಂದಿಕೊಳ್ಳುತ್ತಿದೆ. ಮರೆವೇ ಮನುಷ್ಯನ ಪಾಲಿಗೆ ಇಲ್ಲಿ ನೆರವಾಗುತ್ತದೆ.

**ಬೇರೆ ಬೇರೆ ಸಂದರ್ಭಗಳಲ್ಲಿ:** ಜೀವನದಲ್ಲಿ ಎದುರಿಸಬೇಕಾದ ತೀವ್ರ ಕಷ್ಟಕಂಟಕಗಳು ಎಲ್ಲರನ್ನು ಒಂದೇ ರೀತಿಯಾಗಿ ಕಂಗೆಡಿಸುತ್ತವೆ ಎನ್ನಲಾಗದು. ಕೆಲವರಿಗೆ ಸಣ್ಣ ಪುಟ್ಟ ತೊಂದರೆಗಳಿದ್ದರೆ ಕೆಲವರಿಗೆ ನೀಗಲಾಗದ ತೊಂದರೆಗಳು ಎದುರಾಗುತ್ತವೆ: ಪ್ರೀತಿ ಪಾತ್ರರ ಸಾವು ಅಗಲಿಕೆಯ ಮರಣ ರೋಗರುಜಿನಗಳ ವೇದನೆ ಇತ್ಯಾದಿ. ಇಂಥವುಗಳು ಜನರ ಮನಸ್ಸಿಗೆ ನೋವನ್ನು ಆಘಾತವನ್ನು ಉಂಟುಮಾಡಿ ಒತ್ತಡಕ್ಕೊಳಪಡಿಸುವ ಘಟನೆಗಳನ್ನು ಪಟ್ಟಿಮಾಡಿ ವ್ಯಕ್ತಿಯು ಮೇಲೆ ಉಂಟು ಮಾಡುವ ಅದರ ಹಾನಿಕಾರಕ ಪರಿಣಾಮದ ಪ್ರಮಾಣವನ್ನು ಸೂಚಿಸುವ ಅಂಕಗಳನ್ನು ನೀಡುತ್ತಾರೆ. ಆ ಘಟನೆಗಳ ಹಾನಿಕಾರಕ ಪರಿಣಾಮದ ತೀವ್ರತೆಯನ್ನು ಸೂಚಿಸುವ ಅಂಕಗಳು ಹೀಗಿವೆ. ಇವು ವಿದೇಶೀಯರವು ಇದ್ದು ಭಾರತದವರಿಗೂ ಹೆಚ್ಚು ಕಡಿಮೆ ಅನ್ವಯಿಸಬಹುದೆಂದು ಇಲ್ಲಿ ಕೊಟ್ಟಿದ್ದಾರೆ.

| | |
|---|---|
| ಗಂಡ ಹೆಂಡಿರಲ್ಲಿ ಒಬ್ಬರ ಸಾವು | 100 |
| ವಿವಾಹ ವಿಚ್ಛೇದ | 73 |
| ವಿರಸ ದಾಂಪತ್ಯ | 65 |
| ಹತ್ತಿರದ ಬಂಧು ಒಬ್ಬನ ಮರಣ | 63 |
| ಆಘಾತ ಗಾಯ ಅಸೌಖ್ಯ | 53 |
| ಮದುವೆಗೆ ಸಂಬಂಧಿಸಿದಂತೆ | 50 |
| ಕೆಲಸ ಕಳೆದುಕೊಂಡಾಗ | 50 |

(ಭಾರತದಲ್ಲಿ ಕೆಲಸ ಹೋದಾಗ ಆಗುವ ಆಘಾತದ ತೀವ್ರತೆಗೆ 50 ಅಂಕಗಳಲ್ಲಿ: 90 ಕೊಡಬೇಕು)

| | |
|---|---|
| ಕೆಲಸದಿಂದ ನಿವೃತ್ತಿ | 45 |
| ಗರ್ಭಧಾರಣೆಗೆ ಸಂಬಂಧಿಸಿದಂತೆ | 40 |
| ಲೈಂಗಿಕ ತೊಂದರೆಗಳು | 40 |
| ವ್ಯಾಪಾರ ವ್ಯವಹಾರದ ಮರುಹೊಂದಾಣಿಕೆ | 39 |
| ಆರ್ಥಿಕ ಸ್ಥಿತಿಯಲ್ಲಿ ಬದಲಾವಣೆ | 38 |
| ಆಪ್ತ ಸ್ನೇಹಿತರ ಮರಣ | 37 |
| ಉದ್ಯೋಗದ ಬದಲಾವಣೆ | 37 |
| ಉದ್ಯೋಗದ ಸ್ಥಾನ ಹಾಗೂ ಜವಾಬ್ದಾರಿಯ ಬದಲಾವಣೆ | 29 |
| ಹೆಂಡತಿ ಮಕ್ಕಳ ಅವಿಧೇಯತೆಯ ಆಘಾತ | 26 |
| ಮನೆಯ ಬದಲಾವಣೆ | 20 |
| ರಜಾ ದಿನಗಳು | 13 |
| ನಿಯಮಗಳ ಉಲ್ಲಂಘನೆ | 11 |

ಹೀಗೆ ಅನೇಕ ತರಹದ ಚಿಂತೆಗಳು ಇದ್ದೇ ಇವೆ. ಕೆಲವರು ಅವುಗಳನ್ನು ಮೆಟ್ಟಿ ನಿಲ್ಲುತ್ತಾರೆ. ಮತ್ತೆ ಕೆಲವರು ಬಳಲುತ್ತಾರೆ. ಒಂದೊಂದು ಸಲ ಆತ್ಮಹತ್ಯೆಯನ್ನು ಮಾಡಿಕೊಳ್ಳುತ್ತಾರೆ.

**ದಾರಿ ಯಾವುದು:** ಸಮಸ್ಯೆಗಳು ಯಾವ ರೀತಿಯಲ್ಲಿದ್ದರೂ ಅಂತರಂಗದ ಬದಲಾವಣೆಗಳಿಂದ ಅವುಗಳನ್ನು ಎದುರಿಸಬೇಕು? ನಮ್ಮ ದೃಷ್ಟಿಕೋನ ಬದಲಾಗಬೇಕು. ಯೋಚನಾ ವಿಧಾನ ಬದಲಾಗಬೇಕು. ನಡತೆಯು ಬದಲಾಗಬೇಕು. ಅದು ಆಗದಿದ್ದರೆ ಕೊನೆಯವರೆಗೂ ಶಾಂತಿ ಸಂತೃಪ್ತಿಗಳು ಸಿಗಲಾರವು. ಅವಕ್ಕೆ ತಕ್ಕ ಸದ್ಗುಣಗಳನ್ನು ಬೆಳೆಯಿಸಿಕೊಳ್ಳಬೇಕು.

**ನಮ್ಮ ಮನಸ್ಸಿಗೆ ಎಷ್ಟೊಂದು ಅದ್ಭುತ ಶಕ್ತಿ ಇದೆ?:** ಮನಸ್ಸು ರೋಗಗಳನ್ನು ಸೃಷ್ಟಿಸಬಲ್ಲುದು. ಅದರಂತೆಯೇ ಗುಣಪಡಿಸಲೂಬಲ್ಲದು. ಆದಕಾರಣ ತಾಳ್ಮೆ, ಪ್ರೀತಿ, ಕರುಣೆ, ದಾನಬುದ್ಧಿ, ನಿಸ್ವಾರ್ಥ ಸೇವಾ ಮನೋಭಾವಗಳನ್ನು ಬೆಳೆಯಿಸಿಕೊಳ್ಳಬೇಕು. ಉತ್ಸಾಹವು ಆರೋಗ್ಯಕರವಾಗುತ್ತದೆ. ಸಂತೋಷ ತೃಪ್ತಿ ಸೃಜನಶೀಲ ಪ್ರವೃತ್ತಿಗಳು ಹೆಚ್ಚಾಗುತ್ತವೆ. ಅದೇ ನಿಷೇಧಮಯ ಭಾವನೆಗಳಾದ ಭಯ ಚಿಂತೆ ದ್ವೇಷ ಅಸೂಯೆ ಸೋಲಿನ ಮನೋಭಾವ ಹಾಗು ಸಂಕುಚಿತ ಸ್ವಾರ್ಥದ ನಾನಾ ಅವತಾರಗಳು ದೇಹಕ್ಕೆ ಮತ್ತು ಅಂಗಾಂಗಕ್ಕೆ ಕೆಡಕನ್ನುಂಟುಮಾಡಿ ರೋಗಕ್ಕೆ ಕಾರಣವಾಗುತ್ತವೆ. ಹೀಗಾಗಿ ಮನುಷ್ಯನ ಬಂಧನಕ್ಕೂ ಮೋಕ್ಷಕ್ಕೂ ಮನಸ್ಸೇ ಕಾರಣವಾಗುತ್ತದೆಂದು ನಮ್ಮ ಪೂರ್ವಜರೂ ಹೇಳುತ್ತ ಬಂದಿದ್ದಾರೆ.

ಆದುದರಿಂದ ಜೀವನದಲ್ಲಿ ಒಂದು ಉನ್ನತ ಮುಖ್ಯ ಗುರಿಯನ್ನು ಹೊಂದಲು ಸಾಧ್ಯವಾಗುವಂತೆ ನಮ್ಮ ಯೋಚನೆ ಕಲ್ಪನೆ ಭಾವನೆಗಳನ್ನು ರೂಪಿಸಿಕೊಳ್ಳುವ ಅಭ್ಯಾಸ ಅತ್ಯಂತ ಅವಶ್ಯಕ.

ಕಂಪ್ಯೂಟರಿಸಿಂದ ಆಧುನಿಕ ಯಂತ್ರಗಳನ್ನು ಅವಲಂಬಿಸದೇ ಪರಮ ಅದ್ಭುತವಾದ ಮನಸ್ಸಿಗೆ "ಒಳ್ಳೆಯ ಯೋಚನೆ ಮತ್ತು ಒಳ್ಳೆಯ ಆದರ್ಶಗಳನ್ನು ಕ್ರಮವರಿತು" ಫೀಡ್ ಮಾಡಿದರೆ ನಾವು ಪಡೆಯಬಹುದಾದ ಸಂತೋಷ ಶಾಂತಿ, ಸಂತೃಪ್ತಿ, ಸದ್ಭಾವನೆಗಳನ್ನು ಅಲುಗಾಡಿಸಲು ಯಾರಿಂದಲೂ ಸಾಧ್ಯವಾಗಲಾರದು. ನಿಸರ್ಗದಲ್ಲಿ ಋತುಮಾನಗಳನ್ನು ಅನುಸರಿಸಿದರೆ ಕ್ರಮ ನಿಯಮ ವ್ಯವಸ್ಥೆಗಳು ನಮ್ಮ ಬದುಕನ್ನು ಯಶಸ್ವಿಯಾಗಿ ಮಾಡುತ್ತವೆ.

ಕಾಹಿಲೆಯನ್ನು ಓಡಿಸುವ ಪುರಾತನ, ಸಾರ್ವಕಾಲಿಕ ಸರಳ ಸೂತ್ರಗಳು ಹೀಗಿವೆ

*1. ಎಲ್ಲ ಜೀವಿಗಳಲ್ಲಿ ಅನುಕಂಪ ದಯೆ*

*2. ನಿಸ್ವಾರ್ಥತೆ, ಕಾರ್ಯ ತತ್ಪರತೆ, ವಿಶಾಲ ಮನೋಭಾವ*

*3. ಬಿಗುವನ್ನು ತೊರೆದು ನಗುವನ್ನು ಹೊರಸೂಸು. ಆತ್ಮ ವಿಶ್ವಾಸವನ್ನು ಹೆಚ್ಚಿಸಿಕೋ.*

*4. ಪರೋಪಕಾರ ಗುಣ ಉದಾರತೆ ಹಾಗೂ ಸಹಕಾರ ಮನೋಭಾವ ಉಳಿಸಿ ಬೆಳೆಸಿಕೋ.*

*5. ತನ್ನಂತೆ ಇತರರು ಎಂಬ ವಿಶ್ವಭ್ರಾತೃತ್ವಭಾವ*

*6. ತಾಳಿದವ ಬಾಳಿಯಾನು ಎಂಬ ಸಹನೆ*

7. ಮಾತು ಕಡಿಮೆ ಜಾಸ್ತಿ ದುಡಿಮೆ ಎಂಬ ತತ್ವದ ಅನುಕರಣ
8. ಪೂರ್ವಾಪರ ವಿಮರ್ಶೆ ಹಾಗೂ ವಿವೇಕ ಉಳಿಸಿ ಬೆಳೆಸಬೇಕು.
9. ದಿನನಿತ್ಯದ ಕ್ರಮಬದ್ಧ ಪ್ರಾರ್ಥನೆ.

ಪ್ರಸನ್ನವಾದ ಮನಸ್ಸು ಯಾವುದೇ ಔಷಧ ಟಾನಿಕ್ಕುಗಳಿಗಿಂತ ಹೆಚ್ಚಿನ ಆರೋಗ್ಯವನ್ನು ನೀಡುತ್ತದೆ. ಕಾರಣ ಆಧ್ಯಾತ್ಮಿಕತೆಗಿಂತಲೂ ಮಾನಸಿಕ ದಾರ್ಢ್ಯ ಮತ್ತು ಶಾಂತಿಯನ್ನು ಕಾಪಾಡಿ ಕೊಳ್ಳುವ ರಹಸ್ಯವನ್ನು ಮನನ ಮಾಡಬೇಕು. ಇದನ್ನು ಸಾಧಿಸುವುದು ಆಧುನಿಕ ಕಾಲದಲ್ಲಿ ಬಹಳ ಕಠಿಣವಾಗಿದೆ. ಆದರೂ ಧರ್ಮವನ್ನು ರಕ್ಷಿಸಿದರೆ ದಿವ್ಯವಾದುದನ್ನು ಪಡೆಯುವ ಪಥದಲ್ಲಿ ಅದು ನಮ್ಮನ್ನು ರಕ್ಷಿಸುತ್ತದೆ ಎಂಬ ವಿಶ್ವಾಸ ಬೇಕು. ಆದುದರಿಂದ ಮನಸ್ಸನ್ನು ಸರಿಯಾಗಿಟ್ಟುಕೊಳ್ಳ ಬೇಕು. ಅದನ್ನು ಸರಿಯಾಗಿಟ್ಟುಕೊಳ್ಳಲು ಔಷಧವೇ ಕಾರಣವಲ್ಲ. ಅದರಲ್ಲಿ ಮಾಡುವ ಯೋಚನೆ ಭಾವನೆಗಳನ್ನು ಶುದ್ಧವಾಗಿರಿಸಬೇಕು. ಹೀಗೆ ಸರಿಯಾಗಿಟ್ಟುಕೊಳ್ಳಲು ಅನುಕೂಲವಾಗುವ ನಿಯಮಗಳನ್ನು ಯೋಗಶಾಸ್ತ್ರದಲ್ಲಿ ಹೇಳಿದೆ. ಎಲ್ಲ ಧರ್ಮಗಳೂ ಅಹಿಂಸೆ, ಸತ್ಯ ಆಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ, ಶೌಚ, ಸಂತೋಷ, ತಪಸ್ಸು, ಸ್ವಾಧ್ಯಾಯ, ಈಶ್ವರ, ಪ್ರಣಿದಾನ ಹತ್ತು ಮೌಲ್ಯಗಳನ್ನು ಸಾರಿ ಸಾರಿ ಹೇಳುತ್ತವೆ.

**ಅವೈಜ್ಞಾನಿಕವೆ?:** ಕೌಟುಂಬಿಕ, ಸಾಂಘಿಕ, ಸಾಮಾಜಿಕ ಹಿತಚಿಂತನೆ ಮಾಡುವ ವ್ಯಕ್ತಿಯಲ್ಲಿ ಸತ್ಯ ಪ್ರಿಯತೆ, ನ್ಯಾಯ ಪರಾಯಣತೆ, ಪರೋಪಕಾರ ಬುದ್ಧಿ, ಆತ್ಮ ಸಂಯಮನದಂಥ ಗುಣಗಳು ಅಗತ್ಯವಾಗಿವೆ. ಇದನ್ನು ಯಾವ ಧರ್ಮವೂ ಅಲ್ಲಗಳೆದಿಲ್ಲ.

ಅದಲ್ಲದೇ ಜೀವನ ಉತ್ತಮವಾಗಬೇಕಾದರೆ ನಿತ್ಯವು ವ್ಯಕ್ತಿಯಲ್ಲಿ ಮೊದಲು, ಆ ಬಳಿಕ ಕುಟುಂಬದಲ್ಲಿ, ಅನಂತರ ಶಾಲೆ-ಕಾಲೇಜುಗಳಲ್ಲಿ ಸಾಮಾಜಿಕ ಜೀವನದಲ್ಲಿ ಆಚರಣೆಯಲ್ಲಿ ಬರ ಬೇಕು. ಪ್ರಾಮಾಣಿಕತೆಯು ಅದರಂತೆಯೇ ಇದೆ. ಅದರ ಪರಿಣಾಮವಾಗಿ ವ್ಯಕ್ತಿಯಲ್ಲಿ ಶಾಂತಿ ನೆಲೆಸುತ್ತದೆ. ಅಸಂಗತ ಭೀತಿ ದೂರಾಗುತ್ತದೆ. ಕೃತಜ್ಞತೆಯ ಭಾವನೆ ಬರುತ್ತದೆ. ಅದರಿಂದ ಯುಕ್ತಾಯುಕ್ತ ವಿವೇಚನಾ ಶಕ್ತಿ ಬೆಳೆಯುತ್ತದೆ. ಹೀಗಾಗಿ ಸಾಮಾಜಿಕ ಒತ್ತಡ ಒತ್ತಾಸೆಗೆ ಒಳ ಗಾಗದೇ ಜನರ ವಿಶೇಷ ಪ್ರೀತಿ, ವಿಶ್ವಾಸ, ಸಹಕಾರಗಳನ್ನು ಸಹಜವಾಗಿ ಪಡೆಯುತ್ತಾನೆ. ಆದುದ ರಿಂದ ಅವನು ಯಾವಾಗಲೂ ಆನಂದದಿಂದಲೇ ಇರುತ್ತಾನೆ. ಹೀಗೆ ಮೇಲೆ ಹೇಳಿದ ಹತ್ತು ಮೌಲ್ಯಗಳ ಮಹತ್ವವನ್ನು ತಿಳಿದು ನಡೆದುಕೊಂಡರೆ ಚಿಂಕ್ಷೋಭದಿಂದ ಉಂಟಾಗುವ ರೋಗಗಳು ಪಲಾಯನ ಸೂತ್ರ ಪಠಿಸುತ್ತವೆ.

ಈ ಎಲ್ಲ ಸದ್ಗುಣಗಳನ್ನು ಪರಿಪೂರ್ಣವಾಗಿ ಪಡೆಯಲು ಆಧ್ಯಾತ್ಮಿಕ ಪಥವು ನಮ್ಮ ಸಹಾಯಕ್ಕೆ ಬರುತ್ತದೆ. ಅದೇ ನೇರವಾದ ಉಪಾಯವೆನಿಸಿದೆ. ಆದುದರಿಂದ ಪ್ರತಿಯೊಬ್ಬರೂ ವರ್ತಮಾನ ದಲ್ಲಿ ಕಾರ್ಯನಿರತರಾಗಬೇಕು. ಭೂತ ಭವಿಷ್ಯಗಳ ಚಿಂತೆಯನ್ನು ಬಿಡಬೇಕು. ಭಗವಂತನಲ್ಲಿ ಶರಣಾಗಬೇಕು. ಅವರವರ ಕೆಲಸವನ್ನು ಭಿನ್ನಭಾವ ಮರೆತು ಒಗ್ಗಟ್ಟಾಗಿ ಸರಿಯಾಗಿ ಮಾಡಬೇಕು. ಶ್ರದ್ಧೆಯೇ ಜೀವನ. ಶ್ರದ್ಧೆಯಿಂದಲೇ ಜೀವನ ಸಾರ್ಥಕ್ಯ. ಅದಕ್ಕಾಗಿ ಪರಿತಪಿಸಬೇಕು. ಅದು ಪೂರ್ಣವಾಗಿ ಮೈಗೂಡಬೇಕು. ಅಲ್ಪಸ್ವಲ್ಪದರಿಂದ ಮಹಾತ್ಕಾರ್ಯ ಆಗದು.

**ಭಯ ಬೇತಾಳ:** ಮನುಷ್ಯರಲ್ಲಿ ಹೆಚ್ಚಿನ ಜನ ಒಂದಲ್ಲ ಒಂದು ತೆರನಾದ ಭಯದಿಂದ ಪೀಡಿತ ರೆಂದರೆ ತಪ್ಪಾಗದು. ಈ ಭಯ ನಮ್ಮ ಹೊರ ಮನಸ್ಸಿನಲ್ಲಿ ಅಷ್ಟೊಂದು ಕಾಣಿಸಿಕೊಳ್ಳದಿದ್ದರೂ ಅಜ್ಞಾತವಾಗಿ ಒಳಗೊಳಗೆಯೇ ತನ್ನ ಕೊರೆತವನ್ನು ನಡೆಯಿಸುವುದುಂಟು. ಅದು ನಮ್ಮೆಲ್ಲ ಶಕ್ತಿ ಸಾಮರ್ಥ್ಯದ ಅಭಾವವನ್ನು ತೋರಿಸುತ್ತದೆ. ದೈಹಿಕ, ಮಾನಸಿಕ ಮತ್ತು ಆಧ್ಯಾತ್ಮಿಕ ಅನಾ ರೋಗ್ಯವೇ ಅಥವಾ ಶಕ್ತಿಯ ಅಭಾವವೇ ಎಲ್ಲ ಭಯಗಳಿಗೂ ಮೂಲ. ಅಜ್ಞಾನವು ಇವೆಲ್ಲಕ್ಕೂ ಆದಿಮೂಲ.

ಭೂತ ಅಥವಾ ಪಿಶಾಚಿಗಳ ಕಾಟದ ಭಯ ಮುಂತಾದವುಗಳು ಅಸಂಗತ ಭಯದ ಉತ್ಪತ್ತಿಗೆ ಕಾರಣಗಳಾಗುತ್ತವೆ. ಭಯವು ಹುಟ್ಟುವುದು ಮನಸ್ಸಿನಲ್ಲೇ. ನಿರ್ಭೀತಿಯ ಜನನವೂ ಮನಸ್ಸಿ

ನಲ್ಲಿಯೇ. ಕಾರಣ ಭಯದ ಭಾವನೆಗಳನ್ನು ಕಿತ್ತೆಸೆದು ನಿರ್ಭೀತಿಯ ಭಾವನೆಗಳನ್ನು ಧೈರ್ಯ ಸ್ಥೈರ್ಯ ಶಕ್ತಿ ಸಹನೆಯ ಭಾವನೆಗಳನ್ನು ನಮ್ಮ ಮನಸ್ಸಿನಲ್ಲಿ ಬಿತ್ತಿ ಬೆಳೆಸಲು ಸಾಧ್ಯವಿದೆ. ದುಃಖ ದುರಂತಕ್ಕೂ ಮನಸ್ಸೇ ಕಾರಣ ಎನ್ನುವುದು ನಿತ್ಯ ನೂತನವಾದ ಸತ್ಯ. ತೀವ್ರ ತರದ ಭಯದ ಪರಿಣಾಮಗಳನ್ನು ತಿಳಿಯಬೇಕು.

**ಬೆಚ್ಚಿದರೆ ಬೆದರಿದರೆ:** ಉದಾಹರಣೆಗಾಗಿ ನಾಗರಹಾವಿನ ಬಿಚ್ಚಿದ ಹೆಡೆಯನ್ನು ನೋಡಿದಾಗ, ಹುಲಿಯ ಕ್ರೂರ ದೃಷ್ಟಿಗೆ ಸಿಲುಕಿದಾಗ, ಕತ್ತಲಲ್ಲಿ ಏನನ್ನೋ ಅಸ್ಪಷ್ಟವಾಗಿ ಕಂಡಾಗ, ಆಗುವ ಭಯಾನಕ ಕಲ್ಪನೆಗಳು.

ನಮ್ಮ ಹಲವಾರು ಭಯದ ಭಾವನೆಗಳು ಬಾಲ್ಯದಿಂದಲೇ ನಮ್ಮ ಕೂಡ ಬೆಳೆದಿರುತ್ತವೆ. ಅವುಗಳನ್ನು ಬಿಟ್ಟು ಬಿಡುವುದು ಸಾಧ್ಯವಾಗುವದಿಲ್ಲ. ಸುಮ್ಮನೇ ಕುಳಿತರೂ ಅಜ್ಞಾತವಾಗಿ ನಮ್ಮನ್ನು ತೊಂದರೆಗೆ ಒಡ್ಡುತ್ತವೆ. ವಾಹನಗಳನ್ನು ನಡೆಯಿಸುವಾಗ ಎದುರು ಬಂದ ವಾಹನವನ್ನು ತಪ್ಪಿಸಲು ಪ್ರಯತ್ನಿಸಿ ಕೆಳಗೆ ಬೀಳುವುದೇ ಹೆಚ್ಚು. ಪರೀಕ್ಷೆಗೆ ಕುಳಿತಾಗ ಎಲ್ಲಿ ಮರೆತು ಹೋಗುವದೋ ಎಂದು ಚೆನ್ನಾಗಿ ಓದಿದ್ದರೂ ಆ ಕಾಲಕ್ಕೆ ಎಲ್ಲವೂ ಮರೆತುಹೋಗುವಿಕೆ. ಹೀಗಾಗಿ ಭಯ ಉದ್ವೇಗಗಳು ಸೇರಿಕೊಂಡಾಗ ನಾವು ಕಲ್ಪಿಸಿಕೊಳ್ಳುವ ಅಪಾಯದ ಚಿತ್ರಗಳು ಕಾರ್ಯರೂಪಕ್ಕೆ ಬಂದು ಬಿಡುತ್ತವೆ.

ಅದರಂತೆ ಒಳ್ಳೆಯ ಸಂಭಾಷಣಕಾರನು ಈ ಭಯದಿಂದ ಎಲ್ಲ ಸಿದ್ಧತೆಗಳನ್ನು ಮಾಡಿಕೊಂಡೂ ಸಭೆಯ ಮುಂದೆ ಮೂಕನಾಗುತ್ತಾನೆ. ಏಕೆ? ಮಾಡುವ ಯಾವುದೇ ಕೆಲಸ ಭಯದಿಂದಲೇ ಅಸ್ತವ್ಯಸ್ತವಾಗುವದು, ಹಾಳಾಗುವದು. ಎಲ್ಲಿಯಾದರೂ ಕಾಣದೇ ಮುಳ್ಳು ಚುಚ್ಚಿದಾಗ ಮುಂದೆ ಬಂದ ನಾಗರಹಾವನ್ನು ಕಂಡಾಗ ಅದೇ ಕಡಿದಿರಬಹುದೆಂಬ ಭಯ ಹುಟ್ಟುತ್ತದೆ. ಪರಿಣಾಮ ಸಾವನ್ನು ಎದುರಿಸಬೇಕಾಗಬಹುದು.

ಒಮ್ಮೆ ಯಮರಾಜನು ತನ್ನ ದೂತರಿಗೆ ನಾಲ್ಕುನೂರು ಮಂದಿಯನ್ನು ತರಲು ಹೇಳಿದನಂತೆ. ಅವರು ಎಂಟುನೂರು ಮಂದಿಯನ್ನು ತಂದರಂತೆ. ಏಕೆ? ಎಂದು ಕೇಳಿದಾಗ ತಾವು ಕೊಂದ ನಾಲ್ಕುನೂರು ಮಂದಿಯು ಕೂಡ ಭಯದಿಂದ ಸತ್ತ ನಾಲ್ಕುನೂರು ಮಂದಿ ಬಂದಿದ್ದಾರೆ ಎಂದು ಹೇಳುವ ಅರ್ಥಪೂರ್ಣ ಕಥೆಯೇ ಇದಕ್ಕೆ ಉದಾಹರಣೆ.

ಭಯದ ಸ್ವರೂಪ, ಸ್ವಭಾವ ಮತ್ತು ಅದೇ ನಮ್ಮನ್ನು ದುರಂತಕ್ಕೆ ಎಳೆಯುವ ವಿಧಾನ ಹೀಗಿದೆ:

**ಭಯ ತರುವ ಬವಣೆ:** ಆಗ ಎದೆ ಬಡಿತ ಹೆಚ್ಚಾಗುತ್ತದೆ. ಉಸಿರಾಡಲು ಕಷ್ಟವೆನಿಸುತ್ತದೆ. ನಡುಕ ಉಂಟಾಗುತ್ತದೆ. ಮೈ ಬೆವರುತ್ತದೆ. ಶೌಚಗೃಹಕ್ಕೆ ಹೋಗಬೇಕೆನಿಸುತ್ತದೆ. ವಿಚಾರ ಶಕ್ತಿಯು ಮೊಟಕುಗೊಳ್ಳುತ್ತದೆ. ಕರ್ತವ್ಯ ಮೂಢರನ್ನಾಗಿ ಮಾಡುತ್ತದೆ. ದೈಹಿಕವಾಗಿ ಮಾನಸಿಕವಾಗಿ ನಮ್ಮನ್ನು ದುರ್ಬಲಗೊಳಿಸುತ್ತದೆ. ಆತ್ಮವಿಶ್ವಾಸವನ್ನು ಅಲುಗಾಡಿಸುತ್ತದೆ. ಸ್ಮೃತಿ ಶಕ್ತಿ ಕುಗ್ಗುತ್ತದೆ. ಸದ್ಭಾವನೆ, ಪ್ರೀತಿ, ವಿಶ್ವಾಸ, ಸ್ನೇಹ, ಕರುಣೆಗಳು ಇಲ್ಲದಾಗುತ್ತವೆ. ನಿದ್ರಾಹೀನತೆ, ಬುದ್ಧಿಭ್ರಮೆ, ರಕ್ತದ ಒತ್ತಡ ಮೊದಲಾದ ರೋಗಗಳಿಗೆ ಕರೆ ಕೊಡುತ್ತದೆ. ಅಲ್ಲದೆ ವಿಪರೀತ ವರ್ತನೆಗಳನ್ನು ಉಂಟುಮಾಡುತ್ತದೆ.

ಆದುದರಿಂದ ಭಯಗ್ರಸ್ತರಾದ ಜನ ಮಾಡದ ಪಾಪವಿಲ್ಲ. ಅದರಿಂದ ಕೊಲೆ ಸುಲಿಗೆ ಮಾಡುತ್ತಾನೆ. ಇಂದಿನ ಜಗತ್ತಿನಲ್ಲಿ ನಡೆದ ಯುದ್ಧಗಳಿಗೆ ಭಯವೇ ಮೂಲ ಕಾರಣ. ಅಮೇರಿಕಕ್ಕೆ ರಶಿಯದ ಭೀತಿ, ರಶಿಯಕ್ಕೆ ಅಮೇರಿಕದ ಭೀತಿ. ಅರಬರಿಗೆ ಯಹೂದಿಗಳ ಭೀತಿ, ಯಹೂದಿಗಳಿಗೆ ಅರಬರ ಭೀತಿ. ಬಿಳಿ ಜನರಿಗೆ ಕರಿ ಜನರ ಭೀತಿ, ಕರಿ ಜನರಿಗೆ ಬಿಳಿ ಜನರ ಭೀತಿ. ಹೀಗೆ ಭಯದಿಂದ ಸಂಶಯ, ಸಂಶಯದಿಂದ ಕೋಪ, ಕೋಪದಿಂದ ಹಿಂಸೆ, ಹಿಂಸೆಯಿಂದ ಸರ್ವನಾಶಕ ದುರಂತಗಳು. ಇವೆಲ್ಲ ಶತಮಾನಗಳಿಂದ ರೂಢಿಸಿಕೊಂಡು ಬಂದ ಉದಾತ್ತ ಗುಣಗಳನ್ನು ನಾಶ ಮಾಡಿಬಿಡುತ್ತ ಮನುಷ್ಯನನ್ನು ಪಶುವಿಗಿಂತಲೂ ಕೆಳಕ್ಕೆ ಎಳೆಯುತ್ತವೆ.

**ಸಾಮಾಜಿಕ, ವೈಯಕ್ತಿಕ:** ರಾಜನು ಕಾಲಕ್ಕೆ ಕಾರಣನಾಗುತ್ತಾನೆ ಎಂಬುದು ಸತ್ಯವಿದೆ. ಅವನು ಜನರ ಬದುಕಿನಲ್ಲಿ ಬದಲಾವಣೆಗಳನ್ನು ತರಬಲ್ಲನು. ಜನಮಾನಸದಲ್ಲಿ ಸಮರಸ, ಸಹಕಾರದ ಭಾವನೆಗಳನ್ನು, ನಿರ್ಭೀತಿ ಭಾವನೆಗಳನ್ನು ಬಿತ್ತಬಲ್ಲನು. ಆದರೆ ಪಟ್ಟಭದ್ರ ಹಿತಾಸಕ್ತಿಯ, ದೂರ

ದೃಷ್ಟಿ ಇಲ್ಲದ, ದೀನ ದಲಿತರ ಬಗೆಗೆ ಕಳಕಳಿ ಇಲ್ಲದ, ನಾನಾ ತರಹದ ಒತ್ತಡಗಳಿಗೆ ಒಳಗಾದ ಮುಖಂಡರು ದೇಶದ ಜನತೆಯ ಅವನತಿಗೆ ಕಾರಣರಾಗುವರು.

ವೈಯಕ್ತಿಕ ನೆಲೆಯಲ್ಲಿ ಭೀತಿ ಒಂದಿಲ್ಲಒಂದು ಪ್ರಮಾಣದಲ್ಲಿ ಹೇಗೆ ಎಲ್ಲರನ್ನು ಬಾಧಿಸುತ್ತದೆ ಎಂಬುದನ್ನು ಈ ಮುಂದೆ ಕೊಟ್ಟ ಪಟ್ಟಿಯು ತೋರಿಸುತ್ತದೆ.

ನಾನಾ ತರದ ರೋಗಗಳ ಭಯ
ವಿಷ ಜಂತುಗಳ ಭಯ
ಭೂತ, ಪ್ರೇತ, ಪಿಶಾಚಿಗಳ ಭಯ
ಮಡಿ ಮೈಲಿಗೆ ಭಯ
ಮಂತ್ರ ಮಾಟಗಳ ಭಯ
ಬಡತನ ದೈನ್ಯಾವಸ್ಥೆಗಳ ಭಯ
ಪ್ರೀತಿಪಾತ್ರ ವ್ಯಕ್ತಿಗಳ ಅಗಲಿಕೆಯ ಭಯ
ವ್ಯಾಪಾರ ಉದ್ಯಮಗಳಲ್ಲಿ ಸೋಲಿನ ಭಯ
ವಿದ್ಯಾರ್ಥಿಗಳಿಗೆ ಪರೀಕ್ಷೆಯ ಭಯ
ರಹಸ್ಯವಾಗಿ ಮಾಡಿದ ತಪ್ಪು ಇತರರಿಗೆ ತಿಳಿದೀತೆಂಬ ಭಯ
ನಂಬಿದವರು ಮೋಸ ಮಾಡಿದರೆ ಎಂಬ ಭಯ
ವಿರೋಧಿಗಳು ಯಾವ ಹೊತ್ತಿನಲ್ಲಿ ಸೇಡು ತೀರಿಸಿಕೊಳ್ಳುತ್ತಾರೋ ಎಂಬ ಭಯ
ಸಾಲಗಾರನಾಗಿ ಬಿಡುವ ಭಯ
ಸಾಲದ ಭಾರದಿಂದ ಪಾರಾಗಲು ಸಾಧ್ಯವಿಲ್ಲವೆಂಬ ಭಯ
ಸಂಪತ್ತನ್ನು ಸರಕಾರವು ಕಿತ್ತುಕೊಳ್ಳಬಹುದೆಂಬ ಭಯ
ದರೋಡೆಗಾರರು ಮತ್ತು ಕಳ್ಳಕಾಕರ ಭಯ
ಯುದ್ಧ ಮತ್ತು ಭೀಕರ ಅಸ್ತ್ರಗಳ ಭಯ
ಪರಿಸರ ಮಾಲಿನ್ಯದ ಭಯ
ಸಾವಿನ ಭಯ, ನರಕದ ಭಯ ಇತ್ಯಾದಿ
ಇನ್ನು ನಾನಾ ತರಹದ ಭಯಗಳು.

**ಭಯ ಬೇಕು, ಭಯ ಬೇಡ:** ಆರೋಗ್ಯಕರವಾದ ಭೀತಿಯು ನಮ್ಮನ್ನು ಜಾಗರೂಕರನ್ನಾಗಿ ಮಾಡುತ್ತದೆ. ಆದರೆ ಅತಿರಂಜಿತ, ಕಾಲ್ಪನಿಕ ಹಾಗೂ ನಿಷೇಧಾತ್ಮಕ ಭಯ ಕೆಟ್ಟದ್ದು. ಅಪಾಯದ ಅರಿವು ಆ ಅಪಾಯವನ್ನು ದಾಟುವ ವಿಧಾನವನ್ನು ಹುಡುಕಲು ನಮ್ಮನ್ನು ಪ್ರೇರಿಸುವಂತಿರಬೇಕು. ಈ ನಿಟ್ಟಿನಲ್ಲಿ ಭಯ ನಮಗೊಂದು ಸವಾಲಾಗಿದೆ. ಅದು ನಮ್ಮ ಅಂತಃಶಕ್ತಿಯನ್ನು ಎಚ್ಚರಿಸಲು ಒಂದು ಅವಕಾಶ ಎಂದು ತಿಳಿಯಬೇಕು.

**ದೇವರ ಭಯ:** ದೇವರ ಭಯವೇ ಜ್ಞಾನದ ಆರಂಭ ಎನ್ನುವ ಗಾದೆಯ ಮಾತಿದೆ. ಅವನ ವಿಷಯವಾಗಿ ಭಯಪಡಬೇಕಿಲ್ಲ. ಅವನು ಪರಮ ಪ್ರೇಮ ಸ್ವರೂಪ. ಆದಾಗ್ಯೂ ಅವನ ವಿಷಯವಾಗಿ ಭಯವೇಕೆ? ಎಂದಾಗ ಅವನು ಸರ್ವಜ್ಞ, ಸರ್ವಶಕ್ತ ಅವನಿಗೆ ಮೋಸ ಮಾಡುವದು ಸಾಧ್ಯವಿಲ್ಲ. ಈ ವಿಶ್ವ ಬ್ರಹ್ಮಾಂಡವೆಲ್ಲ ಒಂದು ವ್ಯವಸ್ಥಿತ ರೀತಿಯಲ್ಲಿ ನಿಯಮಪೂರ್ವಕವಾಗಿ ನಡೆಯುತ್ತಿದೆ. ಅದರಲ್ಲಿ ನಮ್ಮ ಜೀವನವೂ ಯಾವುದೋ ಒಂದು ಸೂಕ್ಷ್ಮ ನಿಯಮವನ್ನನುಸರಿಸಿ ನಡೆಯುತ್ತಿದೆ ಎಂಬುದನ್ನು ತಿಳಿದುಕೊಳ್ಳುವದು ಅಗತ್ಯ.

ಈ ನಿಯಮದ ಹಿನ್ನೆಲೆಯಲ್ಲಿ ನಿಯಾಮಕನಿದ್ದಾನೆ. ನಮ್ಮ ಜೀವನ ಸಾರ್ಥಕವಾಗಬೇಕಾದರೆ ಆ ಎಲ್ಲ ನೈತಿಕ ನಿಯಮಗಳನ್ನು ನಾವು ಪಾಲಿಸಬೇಕು. ಆರೋಗ್ಯದ ನಿಯಮಗಳನ್ನು ಪಾಲಿಸಿ ಆರೋಗ್ಯ ಪಡೆಯುವಂತೆ ನೈತಿಕ ನಿಯಮಗಳನ್ನು ಪಾಲಿಸಿ ಮನೋಸ್ಥೈರ್ಯ ಪಡೆದು ನಿಜವಾದ ಮಾನವರಾಗಬೇಕು. ನಿಯಮ ಭಂಗದಿಂದ ನಮಗೂ ನಮ್ಮ ಸುತ್ತಲಿನ ಜನರಿಗೂ ಕೆಡುಕಾಗುತ್ತದೆ ಎಂಬ ಪ್ರಜ್ಞೆ ಇದ್ದರೆ ಜಾಗರೂಕತೆ ಅಥವಾ ಮುನ್ನೆಚ್ಚರಿಕೆ ಎನ್ನುವ ಭಯ ಉಂಟಾಗುತ್ತದೆ. ಈ

ಭಯ ಬೇಕಾದದ್ದೆ. ಇದು ನಿಜವಾಗಿಯೂ ಭಯವಲ್ಲ. ಅದು ಹಿತಮಾಡುವ ಎಚ್ಚರಿಕೆ. ಆ ದೇವನು ತಪ್ಪು ಮಾಡಿದವನಿಗೆ ಭಯಂಕರನು. ಸಜ್ಜನರ ಭಯವನ್ನು ದೂರಮಾಡುವನು. ದೇವರು ಮಾಡಿದ ನಿಯಮಗಳನ್ನು ಸರಿಯಾಗಿ ತಿಳಿದುಕೊಂಡು ಅವುಗಳನ್ನು ಚಾಚೂ ತಪ್ಪದೇ ಅನುಸರಿಸಬೇಕೆಂಬ ಅರಿವೇ ಜ್ಞಾನ. ಅಂಥ ಕ್ರಿಯೋನ್ಮುಖ ಜ್ಞಾನದಿಂದಲೇ ಜೀವನದ ಸಾರ್ಥಕ್ಯ. ಇಂಥ ಅರಿವಿನಿಂದ ಉದಿಸುವ ಎಚ್ಚರಿಕೆಯೇ ಜ್ಞಾನಕ್ಕೆ ಸಾಧನ.

ದೇವರ ಬಗೆಗೂ ನಾನಾ ತೆರನಾದ ಭಯಗಳನ್ನು ಬೆಳೆಸಿಕೊಳ್ಳಬಾರದು. ಉದಾಹರಣೆಗಾಗಿ ಬಸ್ಸಿನಲ್ಲಿ ಕೂತ ಪ್ರಯಾಣಿಕನ ರೋಗಗಳಿಗೆ ಬಸ್ಸಿನ ಡ್ರಾಯವರ್ ಹೊಣೆಗಾರನಾಗಲಾರ, ಬಸ್ಸು ಕಾರಣವಲ್ಲ. ಕಾರಣ ಭಕ್ತನೆನಿಸಿಕೊಂಡವನು ತನ್ನ ಅಜ್ಞಾನ ಮೂರ್ಖತನ ಮೂಢ ನಂಬಿಕೆಗಳಿಂದ ತೊಂದರೆಗಳನ್ನು ಆಮಂತ್ರಿಸಿಕೊಳ್ಳಬಹುದು.

**ದೇವಪ್ಪನ ದಿಗಿಲು:** ದೇವಪ್ಪನೆಂಬ ಒಬ್ಬ ಕೂಲಿಕಾರನಿಗೆ ಯಾರೋ ಅವನ ವಂಶಸ್ಥರು ಕ್ಷಯ ರೋಗದಿಂದ ಅಸುನೀಗಿದರು ಎಂದು ಹೇಳಿ, ಅವನಿಗೂ ಒಂದಿಲ್ಲ ಒಂದು ದಿನ ಕ್ಷಯ ತಗಲು ಬಹುದೆಂದರು. ಗಟ್ಟಿಯಾಗಿ ಆರೋಗ್ಯವಂತನಾಗಿದ್ದ ಅವನ ಸಂಶಯ ಹೆಚ್ಚಾಗಿ ಮುಂದೆ ಕೆಮ್ಮು ಜ್ವರ ಬಂದಾಗ ಹೆದರಿದ. ಡಾಕ್ಟರರು ಪರೀಕ್ಷೆ ಮಾಡಿ ಅವನ ಮನವೊಲಿಸಿದಾಗ ಮೊದಲಿನಂತೆ ಆರೋಗ್ಯವಂತನಾದ.

ಹೀಗೆ ಭಯ ಕಾರ್ಯರೂಪವಂತಾಗುವುದರ ರಹಸ್ಯವೇನು? ಎಂದು ಕೇಳಿದಾಗ ನಾವು ಯೋಚಿಸಿದ ಅಪಾಯದ ಚಿತ್ರದೊಂದಿಗೆ ಭಯದ ಭಾವನೆಯೂ ಸೇರಿಕೊಂಡು ಸುಪ್ತ ಮನಸ್ಸನ್ನು ಪ್ರವೇಶಿಸುತ್ತದೆ. ಭಾವನೆಯ ಜೊತೆಗೆ ಸೇರಿಕೊಂಡ ಚಿತ್ರ ತೀವ್ರತರದ ಸ್ಪಂದನದೊಂದಿಗೆ ಸುಪ್ತ ಮನಸ್ಸನ್ನು ಸೇರಿ ಆ ಭಾವನೆಯೇ ಪೋಷಕ ಜಲವಾಗಿ ಕಾಲ್ಪನಿಕ ಚಿತ್ರ ಕಾರ್ಯರೂಪಕ್ಕೆ ಬಂದು ಬಿಡುತ್ತದೆ.

**ಏಕೆ? ಹೇಗೆ?:** ದೇವಪ್ಪನು ಹಾಗೆಯೇ ಮಾಡಿದ. ವಾಹನ ಚಾಲಕನೂ ಅನಾಹುತ ತಪ್ಪಿಸುವುದಕ್ಕೆ ಅದೇ ಮಾಡಿದ. ಅದರಂತೆ ಕೆಡಕುಗಳನ್ನು ದೋಷಗಳನ್ನೂ ತೀವ್ರತರದ ಭಾವೋದ್ವೇಗದಿಂದ ಯೋಚಿಸುತ್ತಿದ್ದರೆ ಅವು ನಮ್ಮ ಸುಪ್ತ ಮನಸ್ಸಿನಲ್ಲಿ ಮುದ್ರಿತವಾಗಿ, ಮೆಲ್ಲನೆ ಅಂಕುರಿಸಿ ಫಲರೂಪ ವಾಗಿ ಅನಾರೋಗ್ಯ ತೊಂದರೆಗಳನ್ನು ಆಮಂತ್ರಿಸುತ್ತಿವೆ.

**ಗುಂಡ ಗುಂಡು ಸೂಜಿಯನ್ನು ನುಂಗಿದ:** ಸೊಟ್ಟಗಾಗಿದ್ದ ಗುಂಡು ಸೂಜಿಯನ್ನು ಶ್ರೀಮಂತ ಯುವಕ ಗುಂಡ ಆಕಸ್ಮಿಕವಾಗಿ ನುಂಗಿದ ಎಂಬ ಉದಾಹರಣೆಯಲ್ಲಿ ಅವನಿಗೆ ಬಂದ ಭಯ, ಸಂಕಟಗಳ ಚಿತ್ರ ಹೆದರಿಕೆಯಿಂದಲೇ ಆ ಸೂಜಿ ಅವನ ಕರುಳನ್ನು ಚುಚ್ಚುತ್ತಿತ್ತು.

**ಗಾಳಿಯೊಡನೆ ಗುದ್ದಾಟ:** ಬಿರುಗಾಳಿ ಬೀಸಿದಾಗ ಮನೆಯ ಮಾಡು ಹಾರಿಹೋದರೇನು ಗತಿ? ಎಂದು ಚಿಂತಿಸುತ್ತಿದ್ದ ಒಬ್ಬ ಯುವಕ. ಸಿಡಿಲು ಬಡಿದಾಗ ನಾನು ಸಾಯುವದು ನಿಶ್ಚಯವೆಂದು ಮತ್ತೊಬ್ಬ. ಕೂಡಿ ಕೆಲಸ ಮಾಡುವವರು ನನ್ನ ಕೊಲೆ ಮಾಡಿದರೆ ಹೇಗೆ? ಎಂಬುವನು ಇನ್ನೊಬ್ಬ. ಆ ಹುಡುಗಿಯು ನನ್ನನ್ನು ಮದುವೆಯಾಗಲು ಒಪ್ಪದಿದ್ದರೆ ಏನು ಗತಿ? ಎಂದು ವಿಚಾರಿಸುತ್ತಿದ್ದ ಮತ್ತೊಬ್ಬ. ಅದರಂತೆಯೇ ಹಾವಿನ ಹೆದರಿಕೆಯ ಕತೆ ಕೇಳಿ ಮತ್ತೇನೊ ಕಡಿದಾಗ ಸತ್ತವ ಇನ್ನೊಬ್ಬ.

ಆದರೆ ಎಲ್ಲವೂ ದುರ್ಘಟನೆಗಳಾಗಲಾರವು. ವಿವೇಕ ವಿವೇಚನೆ ನಮ್ಮನ್ನು ಕಾಲ್ಪನಿಕ ಭಯ ದಿಂದ ಮುಕ್ತರನ್ನಾಗಿ ಮಾಡುತ್ತದೆ ಎಂಬುದನ್ನು ತಿಳಿದುಕೊಳ್ಳಬೇಕು.

**ತಂಗಮ್ಮನ ತಳಮಳ:** ಇವಳಿಗೆ ಎರಡು ಮಕ್ಕಳಿದ್ದವು. ಅವರ ರಕ್ಷಣೆಯ ವಿಷಯವಾಗಿ ಅಧಿಕ ಚಿಂತೆಯಾಗಿತ್ತು. ಅವರು ಶಾಲೆಗೆ ಹೋಗುವಾಗ ಜಾಗರೂಕರಾಗಿರಲು ಹೇಳುತ್ತಿದ್ದಳು. ಕೆಲಸ ದಲ್ಲಿದ್ದಾಗಲೂ ಓಡಿ ಬಂದು ಮಕ್ಕಳ ದಾರಿ ಕಾಯುತ್ತಿದ್ದಳು. ಅವಳಿಗೆ ಅಡಿಗೆಯ ಕಡೆಗೆ ಲಕ್ಷ್ಯ ವಿರಲಿಲ್ಲ, ಪತಿಯು ಅವಳಿಗೆ ಸಮಾಧಾನ ಹೇಳುತ್ತಿದ್ದಂತೇ ನಿಧಾನವಾಗಿ ಸಮಾಧಾನ ತಂದು ಕೊಂಡಳು.

ಹೀಗೆ ಕೆಲವರು ಕಾಲ್ಪನಿಕ ಭಯದಿಂದ ಗುದ್ದಾಡಿಯೇ ಕಂಗಾಲಾಗುತ್ತಾರೆ. ರಾತ್ರಿ ಬಸ್ಸಿನಲ್ಲಿ

ಪ್ರಯಾಣ ಮಾಡುವವರು ಕಳ್ಳರ ಭಯದಿಂದ ಬಳಲಿ, ಹೋಗಬೇಕಾದ ಜಾಗವನ್ನು ತಲುಪಿದಾಗ ನಿಟ್ಟುಸಿರುಬಿಡುತ್ತಾರೆ.

**ಸುಪ್ತ ಮನಸ್ಸಿನಲ್ಲಿ ಭಯ:** ತೇಲುತ್ತಿರುವ ಹಿಮಗಡ್ಡೆಯಲ್ಲಿ ನಮಗೆ ಕಾಣಿಸುವ ಅಂಶ ಒಂದು ಭಾಗ ಮಾತ್ರ. ಅದರಂತೆ ನಮ್ಮ ಸುಪ್ತ ಮನಸ್ಸು. ಮುಳುಗಿದ ಅಂಶವೆಲ್ಲ ಸುಪ್ತ ಮನಸ್ಸು. ಇದರ ಮೂಲ ವನ್ನು ಕಂಡುಹಿಡಿದು ಅವುಗಳ ಮೂಲಕ ಬರುವ ತೊಂದರೆಗಳನ್ನು ನಿವಾರಿಸಬಹುದು.

**ಗುಂಪನ್ನು ಕಂಡಾಗ ಮೂಕ:** ಆರೋಗ್ಯವಂತನಾದ ಯುವಕ ಉಗ್ಗು ಇಲ್ಲ ಜಾಣ. ಆದರೆ ಜನರ ಗುಂಪನ್ನು ಕಂಡಾಗ ಮಾತು ಸಂಪೂರ್ಣವಾಗಿ ನಿಂತು ಹೋಗುತ್ತಿತ್ತು. ತಜ್ಞರು ಅದರ ಮೂಲ ಕಾರಣವಾದ ಅವನು ಬಾಲ್ಯದಲ್ಲಿ ಕಂಡ ವಾಹನದ ಅಪಘಾತದ ವಿವರಗಳನ್ನು ತಿಳಿದುಕೊಂಡು ಅವನಲ್ಲಿಯ ಗುಂಪಿನ ಭಯವನ್ನು ಇಲ್ಲದಾಗಿಸಿದರು.

ಅದರಂತೆ ತೊದಲು ನುಡಿಯುವ ಉದಾಹರಣೆ- ಅವಳ ತೊದಲುವಿಕೆಗೆ ಅವಳು ಚಿಕ್ಕವಳಿದ್ದಾಗ ತನ್ನ ತಂದೆ-ತಾಯಿ ಜಗಳವಾಡುತ್ತ ಇದ್ದುದನ್ನೂ, ಒಮ್ಮೆ ತಂದೆ-ತಾಯಿಯನ್ನು ಕ್ರೂರವಾಗಿ ಹೊಡೆದುದನ್ನು ನೋಡಿ ಭಯಗ್ರಸ್ತಳಾಗಿ ಚೆನ್ನಾಗಿ ಮಾತನಾಡಲಾರದುದನ್ನು ಕಂಡುಹಿಡಿದು ಅವಳ ತೊದಲನ್ನು ಗುಣಪಡಿಸಿದರು.

ಇದರಿಂದ ಬೇರೆ ಬೇರೆ ಜಾತಿ ಮತ ಕುಲ ಗೋತ್ರ ಸಂಸ್ಕೃತಿ ಸಂಪ್ರದಾಯಗಳಿಗೆ ಸೇರಿದ ಕುಟುಂಬಗಳಿಂದ ಬರುತ್ತಿರುವ ನಮ್ಮ ದೇಶದ ಮಕ್ಕಳ ಬದುಕು ಎಷ್ಟೊಂದು ಸಂಕೀರ್ಣ ಸಮಸ್ಯೆಗಳಿಂದ ಕೂಡಿದೆ ಎಂಬುದು ಸ್ಪಷ್ಟವಾಗುತ್ತದೆ. ಮಗು ಬೆಳೆಯುತ್ತ ಹೋದಂತೆ ಮನೆ, ಶಾಲೆ ಮತ್ತು ಸಮಾಜ ಈ ಮೂರು ಕ್ಷೇತ್ರಗಳಲ್ಲಿ ತನ್ನ ಸಂಬಂಧವನ್ನು ಯುಕ್ತವಾಗಿಯೋ ಅಯುಕ್ತ ವಾಗಿಯೋ ಬೆಳೆಸಿಕೊಳ್ಳುತ್ತಾರೆ ಎಂಬುದು ಕಂಡುಬರುತ್ತದೆ.

ಮನೆಯಲ್ಲೂ, ಶಾಲೆಯಲ್ಲೂ ನೆರೆಕರೆಯಲ್ಲೂ ಬಾಲಕನು ಒಬ್ಬ ಅವಹೇಳನ, ತಿರಸ್ಕಾರಗಳಿಗೆ ಗುರಿಯಾಗಿ ದುಷ್ಟರ ಸಂಗದಲ್ಲಿ ಸಿಲುಕಿ ನಾನಾ ರೀತಿಯ ಹಿಂಸೆಗಳನ್ನು ಅನುಭವಿಸಿ ಅತ್ಯಾಚಾರ ಕ್ಕೊಳಗಾಗುತ್ತಾನೆ. ಮುಂದೆ ಅವನೇ ಸಮಾಜ ಕಂಟಕನಾಗುತ್ತಾನೆ.

**ಇಂಥವರೂ ಇದ್ದಾರೆ:** ತಮ್ಮ ಮಕ್ಕಳನ್ನು ಹೆದರಿಸಿ, ಹೊಡೆದು-ಬಡಿದು ಬೆಳೆಸುವವರೂ ಇದ್ದಾರೆ. ಅತಿ ಮುದ್ದಿನಿಂದ ಅವರನ್ನು ಬೆಳೆಸುವವರೂ ಇದ್ದಾರೆ. ಅವರನ್ನು ಶಾಲೆಗೆ ಸೇರಿಸಿದ ನಂತರ ತಮ್ಮ ಹೊಣೆಗಾರಿಕೆ ಮುಗಿಯಿತೆಂದು ತಿಳಿದುಕೊಳ್ಳುವವರೂ ಇದ್ದಾರೆ. ಒಮ್ಮೆ ಅತಿ ಪ್ರೀತಿ, ಒಮ್ಮೆ ಅತಿ ಕೋಪ ಮಾಡುವವರೂ ಇದ್ದಾರೆ. ಮಕ್ಕಳಿಗೆ ಬಿಡಿಸಲಾಗದ ಸಮಸ್ಯೆಯಾಗುವವರೂ ಇದ್ದಾರೆ. ತಮ್ಮ ಮಕ್ಕಳನ್ನು ಬುದ್ಧಿವಂತ ಮಕ್ಕಳಿಗೆ ಹೋಲಿಸಿ ಅಪಹಾಸ್ಯ ಮಾಡಿ ಅವರ ಆತ್ಮ ವಿಶ್ವಾಸಕ್ಕೆ ಆಘಾತ ಉಂಟು ಮಾಡುವವರೂ ಇದ್ದಾರೆ. ಮತ್ತೆ ಕೆಲವರು ಮಕ್ಕಳ ಮುಂದೆಯೇ ಗುರುಹಿರಿಯ ರನ್ನು ನಿಂದಿಸಿ, ಅಪಹಾಸ್ಯ ಮಾಡಿ ಅವರ ನೈತಿಕ ಮಟ್ಟವನ್ನೂ ಕಡಿಮೆ ಮಾಡುವರು. ಇದರ ಕೂಡ ಅವರ ಸಾಮರ್ಥ್ಯಕ್ಕೆ ಮೀರಿದ ಪ್ರತಿಭೆಯನ್ನು ನಿರೀಕ್ಷಿಸಿ ಅವರನ್ನು ನಿರಾಶಾವಾದಿಗಳನ್ನಾಗಿ ಮಾಡುವವರೂ ಇದ್ದಾರೆ. ಇದರೊಂದಿಗೆ ತಾವು ಬೆಳೆಸಿಕೊಂಡ ಮೂಢನಂಬಿಕೆಗಳನ್ನು, ಮಲತಾಯಿ ಇದ್ದರೆ ಅವಳ ದೃಷ್ಟಿಕೋನ ಮತಾಚಾರಗಳನ್ನು ಜಾತೀಯ ಕೀಳರಿಮೆ ಮೇಲರಿಮೆ ಹಮ್ಮು ಬಿಮ್ಮುಗಳನ್ನು ರಾಜಕೀಯ ರಾಗದ್ವೇಷಗಳನ್ನು ಅವರಿಗೆ ಕೊಡುವವರೂ ಇದ್ದಾರೆ.

ಕಾರಣ ಸುಸಂಸ್ಕೃತ ಸಜ್ಜನರ ಸಮಾನವಾದ ಶಾಲೆ ಇರಬೇಕು. ಸತ್ಯಸಂಧರು ಗುಣವಂತರು ಆದ ತಂದೆತಾಯಿಗಳಿರಬೇಕು. ಸಧ್ಯದ ಶಿಕ್ಷಣವು ಹಳ್ಳಿಗರ ಮೇಲಿರುವ ಭರಿಸಲಾಗದ ಹೊರೆ ಯಾಗಿದೆ. ಇಂಥ ಗೃಹಗಳ ಅಭಾವವನ್ನು ಸ್ವಲ್ಪ ಮಟ್ಟಿಗಾದರೂ ಈಗಿನ ಶಾಲೆಗಳು ದೂರ ಮಾಡ ಬೇಕೆಂದು ಇಂದಿನ ಭಾರತದಲ್ಲಿ ಬಯಸುವದು ಸ್ವಾಭಾವಿಕವಾಗಿದೆ. ಅದು ಸಾಧ್ಯವಾಗುತ್ತಿಲ್ಲ.

**ಹೀಗೆ ಮಾಡಿದರೆ:** ಇದನ್ನು ಸರಿಪಡಿಲು ಖಂಡಿತ ಸಾಧ್ಯವಿದೆ. ಬಾಲ್ಯದಿಂದ ನಿಷ್ಕಲ್ಮಷ ಪ್ರೀತಿಯನ್ನು ಕಂಡರಿಯದ ಜೀವ ಸಂಕಟಕ್ಕೆ ಸಿಲುಕಿದೆ. ಕಾರಣ ದೀರ್ಘಕಾಲ ತಾಳ್ಮೆಯಿಂದ ಪ್ರೀತಿಯೆಂಬ ಅಮೃತ ತೀರ್ಥ ನೀಡಿದರೆ ಈ ರೋಗ ವಾಸಿಯಾಗುತ್ತದೆ.

ಪಸು ಮಾಡಬೇಕು: ತೀವ್ರತರದ ಭಾವನೆಯ ಸ್ಪಂದನದೊಂದಿಗೆ ಕಲ್ಪಿಸಿಕೊಳ್ಳುವ ಚಿತ್ರವು ಅಂಥ ಅನುಭವಗಳನ್ನೇ ನಮ್ಮ ಸಮೀಪಕ್ಕೆ ಎಳೆಯುವ ಶಕ್ತಿಯನ್ನು ಹೊಂದಿದೆ ಎಂಬುದನ್ನು ನಾವು ತಿಳಿದು ಕೊಂಡು ಭಯಪಡದೇ ಚಿಂತಿಸಬೇಕು. ನಮ್ಮನ್ನು ಬುದ್ಧಿಪೂರ್ವಕವಾಗಿ ರಕ್ಷಿಸಿಕೊಳ್ಳಬೇಕು. ಬುದ್ಧಿಯನ್ನು ಉಪಯೋಗಿಸಿ ಮಾಡುವ ಪ್ರಯತ್ನಗಳು ನಮ್ಮನ್ನು ಕೇಡಿನಿಂದ ರಕ್ಷಿಸುತ್ತಿವೆ. ಭಯದ ಕಲ್ಪನೆಗಳೂ, ಚಿಂತೆಗಳೂ ನಮ್ಮನ್ನು ಸಂಕಟದಲ್ಲಿ ಸಿಲುಕಿಸುತ್ತವೆ. ಭಯಕ್ಕೆ ಕಾರಣವಾದ ಕೆಲವೊಂದು ಸಂಗತಿಗಳ ಸ್ವರೂಪ, ಸ್ವಭಾವಗಳನ್ನು ತಿಳಿದುಕೊಂಡು ಅದರಿಂದ ಪಾರಾಗುವ ವಿಧಾನಗಳನ್ನು ಅನುಸರಿಸಬೇಕು. ಕೆಲವನ್ನು ಎದುರಿಸಬೇಕು. ಕೆಲವುಗಳ ಕಾರಣವನ್ನು ಕಂಡು ಹಿಡಿಯಬೇಕು. ಕೆಲವು ಸಲ ಭಗವಂತನಲ್ಲಿ ಪ್ರಾರ್ಥಿಸಿ ಅವನಿಗೆ ಶರಣಾಗಬೇಕು.

**ಭೂತಗಣದೊಡನೆ ಭೀತಿ ಇಲ್ಲದೆ ಮಾತನಾಡಿದವರು:** ಹೀಗೆ ನಿಜವಾದ ಭೂತಗಣಗಳನ್ನು ಕಂಡು ಮಾತನಾಡಿದವರಿದ್ದಾರೆ. ಅವರಲ್ಲಿ ಶ್ರೀರಾಮಕೃಷ್ಣ ಪರಮಹಂಸರೊಬ್ಬರು.

**ಪ್ರೇತಗಳ ಪೇಚಾಟ:** ಭೂತಪ್ರೇತಗಳಿಗೂ ತಮ್ಮದೇ ಆದ ಸಮಸ್ಯೆಗಳಿರುತ್ತವೆ. ಅವುಗಳನ್ನು ಕಂಡಾಗ ಅವಕ್ಕೆ ಹೆದರದೇ ಅವುಗಳ ಸಮಸ್ಯೆ ತಿಳಿದುಕೊಂಡು "ದೇವರೇ ಅವುಗಳನ್ನು ಅದರಿಂದ ಪಾರುಮಾಡು" ಎಂದು ಪ್ರಾರ್ಥಿಸಬೇಕು. ಅವುಗಳನ್ನು ಎದುರಿಸಬೇಕು. ಎದುರಿಸಲು ಸಾಧ್ಯ. ಅದಕ್ಕೆ ಉಪಾಯಗಳೂ ಇವೆ.

**ಓಡಬೇಡಿ ಎದುರಿಸಿ:** ಇದನ್ನು ಸ್ವಾಮಿ ವಿವೇಕಾನಂದರು ಉದಾಹರಣೆಯಿಂದ ಸ್ಪಷ್ಟಪಡಿಸಿದ್ದಾರೆ. ಭಯ ವಿಹ್ವಲರಾಗದೆ ದೃಢ ನಿಶ್ಚಯದಿಂದ ಎದುರಿಸಿದರೆ, ಪ್ರಕೃತಿಯನ್ನು ಜಯಿಸಿದರೆ ಮಾತ್ರ ನಾವು ಸ್ವತಂತ್ರರಾಗುತ್ತೇವೆ. ಹೇಡಿಗಳು ಎಂದೂ ವಿಜಯಿಗಳಾಗುವದಿಲ್ಲ ಎಂದಿದ್ದಾರೆ.

**ಅವರು ಎದುರಿಸಿದ ವಿಧಾನ–** ಅವರು ತಿರುಗಾಡಲು ಹೊರಟಾಗ ಅಕಸ್ಮಾತ್ ಒಂದು ಗೂಳಿ ಅವರಿಗೆ ಎದುರಾಗಿ ಓಡಿಬರುತ್ತಿತ್ತು. ಅವರು ಅಂಜಿ ಓಡಲಿಲ್ಲ. ಗೂಳಿಯನ್ನು ದಿಟ್ಟಿಸಿ ನೋಡುತ್ತ ನಿಂತರು. ಅದೇ ಸ್ವಲ್ಪ ಹೊತ್ತಿನಲ್ಲಿ ತಲೆ ಅಲ್ಲಾಡಿಸಿ ಹೊರಟು ಹೋಯಿತು. ಇದಕ್ಕೆ ಅವರ ಮಾನಸಿಕ ಸ್ಥಿರತೆಯೇ ಮೂಲ ಕಾರಣ. ಅಂತಹದರಿಂದ ನಾವೂ ನಿರ್ಭೀತರಾಗುತ್ತೇವೆ.

**ಕೆಲವೊಮ್ಮೆ–** ಅಕಸ್ಮಾತ್ ಘಟಿಸಿ ಗೋಚರವಾಗುವ ಪ್ರಸಂಗಗಳನ್ನು ಎದುರಿಸಲು ನಮ್ಮ ಮನೋಸ್ಥೈರ್ಯ ಮತ್ತು ಶಾಂತಿಯನ್ನು ಕಾಪಾಡಿಕೊಳ್ಳಬೇಕು. ಅದು ಬಹಳ ಕಠಿಣ. ಸ್ವಾಮಿ ವಿವೇಕಾನಂದರೇ ಒಂದು ಉದಾಹರಣೆ ಕೊಡುತ್ತಾರೆ. ಅವರು ಹಿಮಾಲಯದಲ್ಲಿ ಆಹಾರವಿಲ್ಲದೇ ಕಳೆಯುತ್ತಿದ್ದಾಗ ಒಂದು ಹುಲಿ ಹಸಿದು ನಿಂತಿದ್ದರೂ ತನ್ನ ಮುಂದೆ ನಿಂತಿದ್ದ ಗಜಗಳನ್ನು ಕೊಲ್ಲದೇ ತಿರುಗಿ ಹೋದದ್ದನ್ನು ಶಾಂತಚಿತ್ತರಾಗಿ ಕಂಡರು. ಕಾರಣವಿಷ್ಟೇ. ದೇವರ ಆಜ್ಞೆ ಇಲ್ಲದೆ ಯಾವ ಕಾರ್ಯವೂ ಆಗಲಾರದೆಂದರು. ದೇವರು ತಮ್ಮನ್ನು ರಕ್ಷಿಸುವ ಅರಿವಾಯಿತು ಎಂದರು.

ಒಬ್ಬ ತರುಣನ ಅನುಭವವಾದರೂ ಹೀಗೆಯೇ ಇತ್ತು. ಕೈಯಲ್ಲಿ ಪಿಸ್ತೂಲ್ ಇಲ್ಲದೇ ದೇವರ ಧ್ಯಾನ ಮಾಡುತ್ತ ಹುಲಿಯ ಮುಂದೆ ನಿಲ್ಲಬೇಕಾಯಿತು. ಕೆಟ್ಟ ದೃಷ್ಟಿಯಿಂದ ಹುಲಿ ಅವನನ್ನು ನೋಡಿ ಹಿಂತಿರುಗಿತು.

ಸರ್ವ ಶಕ್ತನಾದ ಭಗವಂತನ ನೆರವನ್ನು ಪಡೆದು ಅವನೊಂದಿಗೆ ನಮಗಿರುವ ನಿತ್ಯ ಸಂಬಂಧವನ್ನು ನೆನೆದು ಎಂಥ ಕಷ್ಟ ಸಂಕಟಗಳನ್ನು ಎದುರಿಸಲು ಸಾಧ್ಯವೆಂದು ಮಹಾತ್ಮರು ಹೇಳುವ ಮಾತು ಸತ್ಯ. ಆದುದರಿಂದ ಎಲ್ಲ ಸಮಸ್ಯೆಗಳಿಗೂ ಆಧ್ಯಾತ್ಮಿಕ ಶ್ರದ್ಧೆಯಿಂದ ಉತ್ತರ ಪಡೆಯಬಹುದು. ಆ ಶ್ರದ್ಧೆಯು ಸತ್ಸಂಗ ಮತ್ತು ಅಭ್ಯಾಸಗಳಿಂದ ಸಾಧ್ಯವೆಂದು ತಿಳಿಯಬೇಕು.

**ತಾಳ್ಮೆ ಮತ್ತು ಅಭ್ಯಾಸ:** ಸ್ನಾನ ಮಾಡಿ, ಮಾಡಿ ಜನರು ಸ್ನಾನ ಶೀಲರಾಗುತ್ತಾರೆ. ದಾನ ಮಾಡಿ, ದಾನಶೀಲರಾಗುತ್ತಾರೆ. ಕ್ಷಮಿಸಿ, ಕ್ಷಮಿಸಿ ಕ್ಷಮಾಶೀಲರಾಗುತ್ತಾರೆ. ಧ್ಯಾನ ಮಾಡಿ, ಮಾಡಿ ಧ್ಯಾನ ಶೀಲರಾಗುತ್ತಾರೆ. ಚಿಂತಿಸಿ ಚಿಂತಿಸಿ ಚಿಂತಾಶೀಲರಾಗುತ್ತಾರೆ. ದಯೆಯನ್ನು ತೋರಿಸಿ ದಯಾಶೀಲರಾಗುತ್ತಾರೆ. ಪಾಪ ಕೃತ್ಯಗಳನ್ನು ಆಚರಿಸಿ ಪಾಪಶೀಲರಾಗುತ್ತಾರೆ. ಶ್ರದ್ಧೆಯನ್ನು ವೃದ್ಧಿಸಿಕೊಳ್ಳುತ್ತ ಶ್ರದ್ಧಾಶೀಲರಾಗುತ್ತಾರೆ. ಜಯವನ್ನು ಗಳಿಸುತ್ತ, ಗಳಿಸುತ್ತ ಜಯಶೀಲರಾಗುತ್ತಾರೆ. ಭಯಪಡುತ್ತ ಭಯಗ್ರಸ್ಥ ವ್ಯಕ್ತಿಗಳಾಗುತ್ತಾರೆ.

ಕಾರಣ ಯಾವ ನಡತೆಯನ್ನಾದರೂ ಕ್ರಮವರಿತು, ನಿಯಮಿತವಾಗಿ ಮಾಡುತ್ತ ಬಂದರೆ, ಅದೇ ಅಭ್ಯಾಸವಾಗುವದು. ಈ ಅಭ್ಯಾಸಗಳೇ ಶೀಲ ನಿರ್ಮಾಣದ ಅಡಿಗಲ್ಲುಗಳು. ನಿರ್ಭೀತಿಯ ಭಾವನೆಗಳನ್ನು ನಿಯಮಿತ ರೀತಿಯಲ್ಲಿ ಮೆಲುಕಾಡುತ್ತ ನಿಯಮಿತ ರೀತಿಯಲ್ಲಿ ಸಾವಕಾಶವಾಗಿ ಅಭ್ಯಾಸ ಮಾಡಿದರೆ ಭಯಪಡುವ ಸ್ವಭಾವ ಬದಲಾಗುತ್ತದೆ. ಮೆಲ್ಲಮೆಲ್ಲನೇ ಮುಂದುವರಿಯಬೇಕು. ತಾಳ್ಮೆಗೆಟ್ಟರೆ ಯಾವ ಕ್ಷೇತ್ರದಲ್ಲೂ ನಾವು ಪ್ರಗತಿಯನ್ನು ಸಾಧಿಸಲಾರೆವು.

**ಶ್ರದ್ಧೆಯಿಂದ ಭಯವನ್ನು ಗೆಲ್ಲಿರಿ**– ಇಚ್ಛಾಶಕ್ತಿಗೂ ಭಯದ ಕಲ್ಪನೆಗೂ ಸಂಘರ್ಷ ನಡೆದಿದೆ. ಭಯದ ಕಲ್ಪನೆಯೇ ಗೆಲ್ಲುವದು. ಆದರೆ ಇಚ್ಛಾಶಕ್ತಿಗೂ ಕಲ್ಪನೆಗೂ ತಿಕ್ಕಾಟ ಬಂದಾಗ ಇಚ್ಛಾಶಕ್ತಿಯು ಬಲವಾಗಿದ್ದರೆ ಅದು ಗೆಲ್ಲುವದು. ಅದನ್ನೇ ಬಲಪಡಿಸಿಕೊಳ್ಳಬೇಕು. ಪ್ರೀತಿಯಿಂದ ಭೀತಿಯನ್ನು ಗೆದ್ದು ರೀತಿ ನೀತಿಗಳನ್ನು ಬದಲಿಸಿಕೊಳ್ಳಬೇಕು. ಜನಪ್ರಿಯರಾಗಬೇಕೆಂದರೆ ಜನರ ವೈಶಿಷ್ಟ್ಯ, ಸಾಮರ್ಥ್ಯ, ದಕ್ಷತೆಗಳನ್ನು ಗಮನಿಸಿ ಗುರುತಿಸಿ ಹೃತ್ಪೂರ್ವಕವಾಗಿ ಆನಂದಿಸಿರಿ. ಅವರನ್ನು ಪ್ರೋತ್ಸಾಹಿಸಿರಿ. ತಾಳ್ಮೆಯಿಂದ ಅವರ ಹಿತಚಿಂತನೆ ಮಾಡಿರಿ. ಅವರಿಗಾಗಿ ದೇವರಲ್ಲಿ ಪ್ರಾರ್ಥಿಸಿರಿ. ನಿಸ್ವಾರ್ಥ ಪ್ರೀತಿಯನ್ನು ನೀಡಿರಿ. ಅದರಿಂದ ಅವರ ಅಪಾರ ಪ್ರೀತಿಯನ್ನು ಗೆಲ್ಲುವಿರಿ.

ಒಳ್ಳೆಯ ಚಿಂತನಶೀಲ ವ್ಯಕ್ತಿಗಳು ಸಂಶೋಧಕರು ಆಗಲು ಇಚ್ಛಿಸಿದರೆ, ಅಧ್ಯಯನದ ವಿಷಯವನ್ನು ಮನಸಾರೆ ಪ್ರೀತಿಸಿರಿ. ಆರೋಗ್ಯವಂತರಾಗಬೇಕಿದ್ದರೆ ಬಲಶಾಲಿಗಳು ಆಗ ಬೇಕಿದ್ದರೆ ಶುಭೇಚ್ಛೆ ಹಾಗೂ ಪ್ರೀತಿಯ ತರಂಗಗಳನ್ನು ನಿಮ್ಮ ಸುತ್ತಮುತ್ತಲಿನ ಜನ, ಪಶು-ಪಕ್ಷಿ, ಕ್ರಿಮಿ-ಕೀಟಕ, ತರುವೃಕ್ಷ, ಫಲ-ಪುಷ್ಪಗಳೆಡೆಗೆ ಹರಿಸಿರಿ.

ದ್ವೇಷವನ್ನು ಬೆಳೆಸಿ, ಬಿತ್ತರಿಸಿದಿರಾದರೆ ಶರೀರ ಮನಸ್ಸು ವಿಷಯುಕ್ತವಾಗುತ್ತದೆ. ಪ್ರೀತಿಯು ಅತ್ಯಂತ ಹಿತಕರ ಹಾಗೂ ಆರೋಗ್ಯವರ್ಧಕ. ರಸಾಯನಿಕ ಪರಿಣಾಮಗಳನ್ನು ರಕ್ತದಲ್ಲಿ ಉಂಟು ಮಾಡುವದು.

**ಸುಳ್ಳಾದ ಭವಿಷ್ಯ**– ಮಕ್ಕಳು ವಾಸಿಸುವ ವಾತಾವರಣ ಭಯಾನಕವೆನಿಸುವಷ್ಟು ಅಸಹ್ಯವಾದ ಸಂದರ್ಭದಲ್ಲಿ ಅಲ್ಲಿರುವ ಮಕ್ಕಳು ದುಷ್ಟರಾಗಿ ಬೆಳೆದು ಜೈಲುವಾಸ ಮಾಡುತ್ತಾರೆಂಬ ಭವಿಷ್ಯ ಒಮ್ಮೆ ಸುಳ್ಳಾಯ್ತು.

**ಇದರ ರಹಸ್ಯವೇನು?**: ಇದರ ರಹಸ್ಯ ಪ್ರೀತಿಯಿಂದ ಮತ್ತು ಆದರದಿಂದ ಬೆಳೆಯಿಸುವುದು ಎಂದು ಕಂಡುಬಂದಿತು.

ಪ್ರೀತಿಯನ್ನು ಪಡೆದವನೇ ಪ್ರೀತಿಯ ಮಹಿಮೆಯನ್ನು ತಿಳಿಯಬಲ್ಲ ಇತರರಿಗೂ ನೀಡಬಲ್ಲ.

ಪ್ರೀತಿಸುವವನಿಂದ ಪ್ರೀತಿಸಲ್ಪಡುವ ವ್ಯಕ್ತಿ ಆತ್ಮಶ್ರದ್ಧೆಯ ಅನರ್ಘ್ಯ ರತ್ನವನ್ನು ಪಡೆಯುತ್ತಾನೆ. ತನ್ನ ತನವನ್ನು ಉಳಿಸಿಕೊಳ್ಳುತ್ತಾನೆ. ವ್ಯಕ್ತಿತ್ವ ಬೆಳೆಸಿಕೊಳ್ಳುತ್ತಾನೆ.

ಹಿರಿಯರ ಪರಿಶುದ್ಧ ಪ್ರೀತಿ ಉನ್ನತ ಮಟ್ಟದ ನೈತಿಕ ನಿರೀಕ್ಷೆ ಕಿರಿಯರ ಅಂತರ್ಯದಲ್ಲಿನ ಸುಪ್ತ ಶಕ್ತಿಯನ್ನು ಸರಿಯಾದ ಪಥದಲ್ಲಿ ಹರಿಯುವಂತೆ ಮಾಡುತ್ತದೆ. ತಾಯಿಯ ಮಾತನ್ನು ಕೇಳಿ ಮಗುವೂ ಮಾತನ್ನು ಕಲಿಯುತ್ತದೆ.

ನಮ್ಮ ವೈಶಿಷ್ಟ್ಯಗಳನ್ನು ಗುರುತಿಸಿ ಗುಣಗಳನ್ನು ಗ್ರಹಿಸಿ, ತಪ್ಪುಗಳನ್ನು ಕ್ಷಮಿಸಿ, ತಿದ್ದಿ, ನಮ್ಮಲ್ಲಿರುವ ಒಳಿತನ್ನು ಎತ್ತಿ ಹೇಳಿ ನಮ್ಮ ವ್ಯಕ್ತಿತ್ವ ತನ್ನದೇ ಆದ ವೈಶಿಷ್ಟ್ಯದಿಂದ ಬೆಳೆಯುವಂತೆ ಮಾಡಲು ನಿಸ್ವಾರ್ಥ ಪ್ರೇಮದ ಆಸರೆಬೇಕು. ಇಂಥದನ್ನು ಯಾರು ನೀಡಬಲ್ಲರು?

ಪ್ರೀತಿ ಎಂದರೆ ಭಾವಪರವಶತೆಯಲ್ಲ, ಅನುರಾಗದ ಪರವಶತೆಯಲ್ಲ. ಒಬ್ಬನ ಅಭ್ಯುದಯಕ್ಕಾಗಿ ನಿರಂತರ ಶುಭ ಸಂಕಲ್ಪದಿಂದ ದುಡಿಯುವ ಪ್ರವೃತ್ತಿಯದು. ಅಂತಹವರೇ ಅದನ್ನ ನೀಡಬಲ್ಲರು.

ಸೇವೆಯ ದರ್ಪವಿರಬಾರದು. ನಿಜವಾದ ಪ್ರೀತಿ ವ್ಯಕ್ತಿಗೌರವ ಹಾಗೂ ವ್ಯಕ್ತಿ ಸ್ವಾತಂತ್ರ್ಯಕ್ಕೆ ಹಾನಿ ಬರದಂತೆ ಸ್ವಲಾಭ ಸಂಕುಚಿತ ಸ್ವಾರ್ಥಾಭಿಲಾಷೆ ಇಲ್ಲದೇ ವ್ಯಕ್ತವಾಗುತ್ತದೆ. ಇಂಥ ಸ್ವಾರ್ಥರಹಿತ ಪರಿಶುದ್ಧ ಪ್ರೀತಿಗೆ ಅಪಾರ ಶಕ್ತಿ ಇದೆ. ಇದಕ್ಕೆ ಶ್ರೇಷ್ಠ ರಚನಾತ್ಮಕ ಮತ್ತು ರೋಗ ನಿರ್ಮೂಲನ ಶಕ್ತಿ ಇದೆ. ಅಂಥವರು ದೀರ್ಘಾಯುಷಿಗಳಾಗಬಲ್ಲರು. ಇಂಥ ನಿಜವಾದ ಪ್ರೀತಿ ಇರುವಲ್ಲಿಯೇ

ಸ್ವಾತಂತ್ರ್ಯ ಒಳ್ಳೆಯತನ, ಉನ್ನತವಾಗಿರುತ್ತದೆ. ಜನಾಂಗವನ್ನು ಉನ್ನತ ಸ್ತರಗಳಿಗೆ ಏರಿಸಿ ಅವರ ಧ್ಯೇಯ ಉದ್ದೇಶಗಳನ್ನು ಉದಾತ್ತಗೊಳಿಸುತ್ತಿದೆ. ಈ ಪ್ರೀತಿಯನ್ನು ಬಿಟ್ಟು ಮಾರಕಾಸ್ತ್ರಗಳಂಥ ಸಾಧನೆಗಳಿಂದ ಸಧ್ಯದ ಜಗತ್ತನ್ನು ಉಳಿಸುವುದೇ ಸಾಧ್ಯವಿಲ್ಲ.

ಮಕ್ಕಳ ಸರಿಯಾದ ಬೆಳವಣಿಗೆಗೆ ತಾಯಿಯ ಪ್ರೀತಿ ಅತ್ಯಂತ ಅವಶ್ಯ. ಮಮತಾಮಯಿ ಮಾತೆಯ ಪ್ರೀತಿಯ ಅಭಾವವೇ ಅನಾಥಾಲಯಗಳಲ್ಲಿ ಬಹಳ ಮಕ್ಕಳ ಸಾವಿಗೆ ಕಾರಣವೆಂದು ಕಂಡುಬಂದಿದೆ. ಕಾರಣ ಮಾನಸಿಕ ಹಾಗೂ ನೈತಿಕ ಕುಸಿತಗಳನ್ನು ತಡೆಗಟ್ಟಲು, ಸರಿಪಡಿಸಲು ಪ್ರೀತಿಯ ಶಕ್ತಿಯು ಅತ್ಯಂತ ಅವಶ್ಯಕ.

ಆದರೆ ಈ ಪರಿಶುದ್ಧ ಪ್ರೀತಿಯ ಅಭಾವದ ರೋಗ ಅಥವಾ ಬರ ಎಲ್ಲೆಲ್ಲೂ ಹಬ್ಬಿಕೊಂಡಿದ್ದೆ ಕಂಡುಬರುತ್ತಿದೆ. ಪರದೇಶಿ ಮಕ್ಕಳು ತಾಯಿಯ ಪ್ರೀತಿಯನ್ನು ಕಾಣದೇ ಭಿಕ್ಷುಕರಾಗಿ ಹೊಲಸಾಗಿ ದುಷ್ಟರಾಗಿ ಬೀದಿ ಬೀದಿಗಳಲ್ಲಿ ತಿರುಗುವುದು ಕಂಡುಬರುತ್ತಿದೆ.

**ವಿಜ್ಞಾನಿಗಳ ಅಜ್ಞಾನ:** ವಿಜ್ಞಾನಿಗಳು ವಿದ್ಯುಚ್ಛಕ್ತಿ, ಅಣುಶಕ್ತಿ, ಉಗಿಶಕ್ತಿ, ಸೌರಶಕ್ತಿ ಇವುಗಳನ್ನು ಕುರಿತು ಸಾಕಷ್ಟು ಸಂಶೋಧನೆಗಳನ್ನು ಕೈಗೊಂಡು ಜಗತ್ತಿನ ಮುಖವನ್ನು ಬದಲಿಸಿದ್ದಾರೆ. ಆದರೆ ನಿಸ್ವಾರ್ಥ ಪ್ರೇಮದ ಶಕ್ತಿಯನ್ನು ಕುರಿತು ಸಂಶೋಧನೆಗಳನ್ನು ಕೈಗೊಂಡು ಅದರ ಉತ್ಪತ್ತಿ ಶೇಖರಣೆ ಮತ್ತು ಸರಬರಾಜನ್ನು ಮಾಡುವಂತಾದರೆ ಜಗತ್ತು ನಂದನವನವಾಗುವದು. ಜಾಗತಿಕ ಯುದ್ಧವಾಗಿ ಎಲ್ಲವೂ ನಾಶವಾಗಿ ಶಾಂತಿಯನ್ನು ಎಲ್ಲರೂ ಇಚ್ಛಿಸಿದರೂ ಒಳಗೊಳಗೆ ರಣ ಸನ್ನಾಹ ನಡೆದುದು ಕಂಡು ಬರುತ್ತದೆ. ನಿಜವಾದ ಪ್ರೀತಿಯ ಮಹಿಮೆಯನ್ನು ಸರಿಯಾಗಿ ತಿಳಿದು ಕೊಂಡರೆ ತನಗೂ ಇತರರಿಗೂ ದಿವ್ಯ ಆನಂದವನ್ನು ನೀಡಬಲ್ಲ. ಇದರಿಂದ ಕ್ರಮೇಣ ಜಗತ್ತು ಎದುರಿಸುವ ಹಾನಿಯನ್ನು ತಪ್ಪಿಸಬಹುದು.

**ಮಾಡಲಿ ಬಿಡಲಿ:** ಆದರೆ ಬಾಲ್ಯದಿಂದಲೇ ಎಳೆಯರಲ್ಲಿ ಪ್ರೀತಿಯ ಮಹಿಮೆ, ಮಹಾತ್ಮೆಗಳ ಬಗೆಗೆ ದೃಢವಾದ ನಂಬಿಕೆಯನ್ನುಂಟು ಮಾಡಬೇಕು. ಬದುಕಿನ ವಿಭಿನ್ನ ಕ್ಷೇತ್ರಗಳಲ್ಲಿ ಪ್ರೀತಿಯ ಅಭಿವ್ಯಕ್ತಿಯ ಬಗೆಗೆ ತರಬೇತಿಯನ್ನು ನೀಡಬೇಕು. ಅಂದರೆ ಜಾಗತಿಕ ಶಾಂತಿಯ ತಳಪಾಯ ಹಾಕಿದಂತಾಗುವದು.

**ನಿಸ್ವಾರ್ಥತೆಯೇ ಒರೆಗಲ್ಲು:** ಸ್ವಾಮಿ ವಿವೇಕಾನಂದರು "ನಿಸ್ವಾರ್ಥತೆಯೇ ದೇವರು" ಎಂಬ ಮಾತನ್ನು ಹೇಳಿದ್ದಾರೆ. ಅದು ಮನುಷ್ಯನನ್ನು ದೇವತ್ವಕ್ಕೆ ಏರಿಸುವುದು ಎಂಬ ಅರ್ಥ. ತಾಯಿಯು ಮಗುವಿಗೆ ದೇವರು. ತಾಯಿಯು ದೂರ ಸರಿದರೆ ಮಕ್ಕಳಿಗೂ ಸಮಾಜಕ್ಕೂ ರಾಷ್ಟ್ರಕ್ಕೂ ಭಯಾನಕ ದುರಂತ ಕಾಯುತ್ತಿರುತ್ತದೆ. ತಾಯಿಯ ಪ್ರೀತಿ ನಿಸ್ವಾರ್ಥ ಪ್ರೀತಿಗೆ ಅತ್ಯುತ್ತಮ ಉದಾಹರಣೆ ಯಾಗಿದೆ. ಮನುಷ್ಯರನ್ನು ಮೆಟ್ಟಿಲು ಮೆಟ್ಟಿಲಾಗಿ ನಿಸ್ವಾರ್ಥತೆಯ ಮೂಲಕ ದಿವ್ಯಾನಂತ ಸ್ಥಿತಿಗೆ ಕೊಂಡೊಯ್ಯುವದೇ ಎಲ್ಲ ಧಾರ್ಮಿಕ ನಿಯಮಗಳ ಉದ್ದೇಶ.

**ನನ್ನ ತಾಯಿ ಕೃಪಾಮಯಿ:** ಇಂಥ ತಾಯಿಯ ಚಾರಿತ್ರ್ಯದಿಂದ ಪ್ರಭಾವಿತರಾಗದ ಕುಟುಂಬವಿಲ್ಲ. ಪ್ರೀತಿ ಇಲ್ಲದ ಸಂಸಾರ ನಿಸ್ಸಾರ. ಶರೀರ ಸುಂದರವಾದದ್ದು. ಆದರೆ ಜೀವವೇ ಇಲ್ಲ ಎಂಬಂತಾಗು ವದು. ಎಷ್ಟೇ ಸಿರಿವಂತಿಕೆ ಇದ್ದರೂ ಅದಕ್ಕೆ ಕಳೆ ಇಲ್ಲ. ಅದೇ ಬಡವನ ಸಂಸಾರವಾದರೂ ಪ್ರೀತಿ ಯಿಂದ ತುಂಬಿದ್ದರೆ ನಂದನವನವಾಗಿದ್ದುದು ಕಂಡುಬರುತ್ತಿದೆ. ಅವರ ಸಿರಿವಂತಿಕೆ ಜನರ ಕಣ್ಣಿಗೆ ಕಾಣುವಂಥದಲ್ಲ. ಅವರದು ಹೃದಯ ಸಂಪತ್ತು.

**ಆಧ್ಯಾತ್ಮದ ಔನ್ನತ್ಯ. ಕರ್ತವ್ಯದ ಸಾರ್ಥಕ್ಯ:** ತಾಳ್ಮೆಯಿಂದ ಬಂದ ದುರಂತವೆಲ್ಲವನ್ನು ಭಗವಂತನ ಪರೀಕ್ಷೆಯೆಂದು ತಿಳಿದು ಕೇವಲ ಮೌನದಿಂದ ಎಲ್ಲವನ್ನು ನುಂಗಿ ಕಣ್ಣೀರಿಡುತ್ತ ಬಾಳುವುದೇ ಜೀವನದ ರಹಸ್ಯ.

**ಕಂದನಲಿ ಶಿವನ ಕಾಣುವ ಬಂಧನವೇ ಮುಕ್ತಿ:** ಮಕ್ಕಳಲ್ಲಿ ದೇವತ್ವವನ್ನು ಕಂಡು ಮಾಡುವ ಸೇವೆಯೇ ದೇವರ ಸೇವೆ ಎಂಬುದನ್ನು ಅರಿತು ಆಚರಿಸಿದರೆ ಸಂಸಾರವು ಮಹಿಳೆಗೆ ದಿವ್ಯ ಪಥಕ್ಕೇರುವ ದಾರಿಯಾಗುತ್ತದೆ. ಅದು ಬಂಧನಕ್ಕೆ ಕಾರಣವಾಗದು. ಆದುದರಿಂದ ಮಹಿಳೆಗೆ ಈ ಮಾತೃತ್ವದ ಆದರ್ಶವೇ ದಿವ್ಯತ್ವಕ್ಕೇರಲು ನಿಜವಾದ ಪಥವಾಗಿದೆ.

**ಪುಣ್ಯ ಸ್ಮೃತಿಯ ಪರಂಪರೆ:** ಭಾರತದಲ್ಲಿ ಇಂಥ ಆದರ್ಶಪ್ರಾಯರಾದ ಮಹಿಳೆಯರ ಸಂಖ್ಯೆ ದೊಡ್ಡದಿದೆ. ಇಲ್ಲಿ ತ್ಯಾಗ ಮತ್ತು ಸೇವೆ ಒತ್ತಾಯದ ಒದ್ದಾಟವಲ್ಲ. ಗೊಣಗುತ್ತ ಮಾಡುವ ಸೇವೆಯ ಸೋಗಲ್ಲ. ಧನ್ಯತೆ ಕೃತಕೃತ್ಯತೆಯನ್ನುಂಟುಮಾಡುವ ತಪೋನಿಷ್ಠ ಅನುಷ್ಠಾನವಾಗಿರುತ್ತದೆ. ಇದನ್ನು ಸಾಧಿಸಬೇಕಾದರೆ ಭಗವಂತನಲ್ಲಿ ದೃಢವಾದ ಶ್ರದ್ಧಾಭಕ್ತಿಗಳು ಇರಲೇಬೇಕು. ದೇವರನ್ನು ತಾಯಿ ಎಂದು ಸಖನೆಂದು ಪ್ರಿಯತಮನೆಂದು ದಾಸ್ಯ ಭಾವನೆಯಿಂದ ಆರಾಧಿಸಬಹುದು. ಆದರೆ ಮಾತೃಭಾವನೆಯಿಂದ ಆರಾಧಿಸುವದು ಶ್ರೇಷ್ಠವೆಂದು ಶ್ರೀ ರಾಮಕೃಷ್ಣರು.

ಮಾತೆಯೆಂದರೆ ಎಂದೆಂದೂ ನಮ್ಮನ್ನು ತಿರಸ್ಕರಿಸದೇ ಹಂಬಲಿಸುವ ಪ್ರೀತಿಯ ಪ್ರತಿ ಮೂರ್ತಿ. ಎಂದೆಂದೂ ನಮ್ಮ ಜೊತೆಯಲ್ಲೆ ಇರುವ ಮಂಗಲಮಯ ಅನುಗ್ರಹ. ದೂರವಾಗಿ ಬೇರೆಯಾಗಿ ಬೆಳೆಯಲಾಗದ ದಿವ್ಯ ಸಾನ್ನಿಧ್ಯ. ಯಾರಲ್ಲಿ ಪೂರ್ಣ ವಿಶ್ವಾಸ ಭರವಸೆಗಳನ್ನು ಇಡಬಹುದೋ ಅಂಥ ಹೃದಯ, ಆಳ ಅಳೆಯಲಾಗದ ಮಾಧುರ್ಯ, ಬಿಡಿಸಲಾಗದ ಪರಿಶುದ್ಧ ಪ್ರೀತಿಯ ಬಂಧನ. ಅಕಳಂಕ ಪಾವಿತ್ರ್ಯ ಇವೆಲ್ಲವೂ ಆಗಿ ಇವನ್ನು ಮೀರಿನಿಂತ ಮಹಿಮೆ. ಅದರ ಹಾಗೆ ತಂದೆಯ ಸ್ಥಾನವೂ ಬಹಳ ಮಹತ್ವದ್ದು.

**63 ಆಗಬೇಕು 36 ಅಲ್ಲ:** ಕಾಲ ಧರ್ಮದಿಂದ ಸ್ವಾಭಾವಿಕವಾದುದನ್ನು ಆಧ್ಯಾತ್ಮಿಕ ಆದರ್ಶಗಳ ಅನುಷ್ಠಾನದಿಂದ ಬೇಗನೇ ಸಹಜವಾದ ಸ್ವಭಾವವನ್ನಾಗಿ ಪರಿವರ್ತಿಸಿಕೊಳ್ಳಬೇಕು. ಅದು ಸಾಧ್ಯವೂ ಇದೆ. ಆದುದರಿಂದ ಪತಿ ಪತ್ನಿಯರಿಬ್ಬರಲ್ಲೂ ಆಧ್ಯಾತ್ಮಿಕ ಆದರ್ಶವಿದ್ದರೇನೆ ಈ ಪರಿವರ್ತನೆ ಸಾಧ್ಯ. ಇಲ್ಲವಾದರೆ ಇಂದ್ರಿಯಗಳ ಸೆಳೆತದಿಂದ ಬಾಳುವೆ ನಿಸ್ತೇಜವಾಗುವದು. ಹಾಗಾದರೇನೆ ಪರಸ್ಪರ ಸಾಮರಸ್ಯದಿಂದ (63ರಂತೆ) ಇರಬಹುದು. ಇಲ್ಲವಾದರೆ ಪರಸ್ಪರ ವಿಮುಖರಾಗಿ (36ರಂತೆ) ದಿನ ನಿತ್ಯವೂ ವಿರಸವನ್ನು ಅನುಭವಿಸಬೇಕಾಗಬಹುದು.

**ಆಧುನಿಕತೆಯ ಅಟ್ಟಹಾಸ:** ಇಂದಿನ ದಿನಗಳಲ್ಲಿ ಆಧ್ಯಾತ್ಮಿಕ ಆದರ್ಶದ ಹಿನ್ನೆಲೆಯಿಂದ ಉನ್ನತವಾದ ಬಾಳನ್ನು ಬಾಳಿದಂಥವರ ಚಾರಿತ್ರ್ಯದ ಮಾಧುರ್ಯ, ಮಹಾತ್ಮೆಗಳನ್ನು ತಿಳಿದುಕೊಳ್ಳಲು ಶಿಕ್ಷಣದಲ್ಲಿ ಯಾವ ವಿಶಿಷ್ಟ ವ್ಯವಸ್ಥೆಯೂ ಇಲ್ಲ. ಮೌಲ್ಯಗಳ ಬಗೆಗೆ ಸರ್ವತ್ರ ಅಜ್ಞಾನ ಕಂಡ ಬರುತ್ತದೆ. ಒಂದೆಡೆ ವಿಜ್ಞಾನದ ವೈಭವವನ್ನು ಹೊಗಳುತ್ತಾರೆ. ಇನ್ನೊಂದೆಡೆ ಅಗ್ಗದ ಭಾವುಕತೆ ಕಾಮ ಪ್ರಚೋದಕಗಳ ವಿಚಾರ ಉತ್ತೇಜನ. ಹೀಗಾಗಿ ಅನೈತಿಕ ರೀತಿಗಳು ದರೋಡೆ ಕಳ್ಳತನ ಅಪ್ರಾಮಾಣಿಕತೆ ಮುಂತಾದವುಕಳು ಹೆಚ್ಚಾಗಿವೆ. ಹೀಗೆ ಕೌಟುಂಬಿಕ ಜೀವನದ ಕುಸಿತವಾಗಿದೆ. ಅದಕ್ಕೆ ಸ್ವಚ್ಛಂದವಾದ ಲೈಂಗಿಕ ಮನೋವೃತ್ತಿಯೇ ಕಾರಣ. ಅದನ್ನು ಅನುಸರಿಸುವ ಭಾರತೀಯರಾದ ನಮಗೂ ಎಂಥ ದುರಂತ ಕಾಯ್ದಿದೆ ಎಂದು ತಿಳಿಯದಾಗಿದೆ.

ಸಧ್ಯದಲ್ಲೇ ದೇವರು ಅತಿಮಾನುಷ ದೈವೀಶಕ್ತಿಯಿಂದ ಮಾಡುವ ಪವಾಡಗಳ ದುರುಪಯೋಗ ನಡೆದಿದೆ. ನಮಗೆ ಶತ್ರುಗಳ ವಿನಾಶವಾಗಬೇಕು ಎನ್ನುವ ಬಗ್ಗೆ ಇರುವ ಆಸೆ ಆಕಾಂಕ್ಷೆ ನಮ್ಮ ಸ್ನೇಹಿತರ ಅಭ್ಯುದಯವಾಗಬೇಕು ಎನ್ನುವ ಬಗ್ಗೆ ಇಲ್ಲ. ಇಂಥ ಮನೋವೃತ್ತಿ ಜಗತ್ತಿನ ಹಿತಕ್ಕೆ ಸಾಧಕವಲ್ಲವೆಂದು ಕಂಡುಬಂದಿದೆ. ಕೆಲವೊಮ್ಮೆ ನಿಜವಾದ ಶತ್ರುಗಳ ವಿನಾಶಕ್ಕಿಂತಲೂ ಕಲ್ಪಿತ ಶತ್ರುಗಳ ವಿನಾಶಕ್ಕಾಗಿಯೇ ನಮ್ಮ ಸಂಪತ್ತು ಶಕ್ತಿ ವಿನಿಯೋಗವಾಗುತ್ತಿದೆ.

ಈ ತಾಂತ್ರಿಕ ಪ್ರಗತಿ ಮನುಷ್ಯರ ಅಭ್ಯುದಯಕ್ಕೆ ಬದಲು ಅವರ ಹಿನ್ನಡೆಗೆ ಕಾರಣವಾಗುತ್ತದೆ.

***ಕುವೆಂಪು ಹೇಳುವಂತೆ:***

*ಸಂಪತ್ತಿದೆ ವಿದ್ವತ್ತಿದೆ*
*ಕೈಸೇರಿದೆ ವಿಜ್ಞಾನ*
*ವಿಷಯಾಗ್ನಿಯ ಸುಖವಾಸೆಗೆ*
*ಕಲ್ಲೆಣ್ಣೆಯಪಾನ*
*ಭುಗು ಭುಗಿಲೆನೆ ಧಗಧಗಿಸಿದೆ*
*ರಣರೋಷವ ಕೆಂಗಿಚ್ಚು*
*ಹಲ್ಮಸೆದಿವೆ ಬಿಲ್ಲೆತ್ತಿವೆ*
*ಸಂಗ್ರಹ ಗೈಯುವ ಹುಚ್ಚು.*

**ವಿಜ್ಞಾನದ ಕರಾಳ ವದನ:** ವಿಜ್ಞಾನಿಗಳು ವಿವಿಧ ಕ್ಷೇತ್ರಗಳಲ್ಲಿ ಜ್ಞಾನವನ್ನು ವರ್ಧಿಸುತ್ತಿದ್ದಾರೆ. ಆದರೆ ಅವರ ಶ್ರಮದ ಫಲವು ಮನುಷ್ಯನ ಹೃದಯದಲ್ಲಿರುವ ದುರಿತವನ್ನು ಘೋಷಿಸುತ್ತಿದೆ. ಮನುಕುಲದ ಅಮಂಗಲಕ್ಕೆ ಅನಾಹುತಗಳಿಗೆ ಕಾರಣವಾಗುತ್ತಿದೆ. ಇತ್ತೀಚಿನ ಮೂವತ್ತು ವರ್ಷಗಳಲ್ಲಿ ವಿಜ್ಞಾನ ಕೊಲ್ಲುವ ಕಲೆಯಲ್ಲಿ ಅತ್ಯಂತ ಭಯಾನಕ ಪ್ರಗತಿಯನ್ನು ಸಾಧಿಸಿದ್ದನ್ನು ನೋಡುತ್ತೇವೆ. ಇದಕ್ಕೆ ಜಾಗತಿಕ ಮಹಾಯುದ್ಧದಿಂದ ಆದ ನಾಶ ಅನಂತರ ವಿಶ್ವದ ಎಲ್ಲ ಭಾಗಗಳಲ್ಲಿಯೂ ದಿನಾಲು ನಡೆಯುತ್ತಿರುವ ಕೊಲೆ ಸುಲಿಗೆ ಬಾಂಬ್ ಸ್ಫೋಟಗಳೇ ಉದಾಹರಣೆಗಳಾಗಿವೆ.

ನಿಜವಾಗಿ ನೋಡಿದರೆ ವಿಜ್ಞಾನವು ಸುಖವನ್ನು ಅಪಾರ ಮಟ್ಟದಲ್ಲಿ ಹುಟ್ಟಿಸಿದೆ. ನಮಗೆ ಸೌಕರ್ಯ ಹೆಚ್ಚಾಗಿವೆ. ಆರೋಗ್ಯ ಆಯುಷ್ಯ ಹೆಚ್ಚಾಗಿವೆ. ಆದರೆ ಅದರ ಕೂಡ ಕುಡಿತವೂ ಹೆಚ್ಚಾಗಿದ್ದೆ. ಮಾನಸಿಕ ತುಮುಲ ಮತ್ತೆ ವ್ಯಗ್ರತೆಗಳೂ ಹೆಚ್ಚಾಗಿವೆ. ಸುಖ ಲೋಲುಪತೆಗೆ ಮತ್ತು ಸ್ವೇಚ್ಛಾಚಾರಕ್ಕೆ ವಿಜ್ಞಾನವು ತಾಂತ್ರಿಕ ಸಹಾಯ ನೀಡುತ್ತಿದೆ.

**ನರಳುತ್ತಿದೆ ಲೋಕದ ಸುಖ!:** ಹೆಡೆಯೆತ್ತಿದ ದೌರ್ಜನ್ಯ! ನೈತಿಕ ಮಟ್ಟ ಕುಸಿದಿದೆ ಕಾಮದ ಕೆಸರಿನಲ್ಲಿ. ಶೀಲದ ಚಲ್ಲಾಟ ನಡೆದಿದೆ. ಗುಹ್ಯರೋಗಗಳು ಹೆಚ್ಚಾಗುತ್ತಿವೆ. ವಿಜ್ಞಾನ ದ್ರುತಗತಿಯ ಪ್ರಗತಿಯ ಜೊತೆ ಜೊತೆಗೇ ಪಶ್ಚಿಮದಲ್ಲಿ ಧಾರ್ಮಿಕ ಶ್ರದ್ಧೆಯು ದುರ್ಬಲವಾಗುತ್ತ ನಡೆದಿದೆ. ಫ್ರಾಯಿಡ್‌ನ ಲೈಂಗಿಕ ಸ್ವಾತಂತ್ರ್ಯ ಸಿದ್ಧಾಂತಕ್ಕೆ ಹೆಚ್ಚಿನ ಪ್ರಾಧಾನ್ಯ ದೊರೆಯಲು ಆರಂಭಿಸಿದೆ. ಅದರ ಪರಿಣಾಮವಾಗಿ ನಮ್ಮ ಸಾಹಿತ್ಯ ಕತೆ ಕಾದಂಬರಿಗಳು ಕಲೆ ಚಿತ್ರ ಸಂಗೀತ ಚಲನಚಿತ್ರ ಟೆಲಿವಿಜನ್ ಪತ್ರಿಕೆ ಮ್ಯಾಗಜಿನ್ ಜಾಹೀರಾತುಗಳ ಕ್ಷೇತ್ರದಲ್ಲಿ ಲೈಂಗಿಕತೆಯ ಹಾವಳಿ ನಡೆದದ್ದು ಕಂಡುಬರುತ್ತದೆ. ವಿವಾಹದ ಪಾವಿತ್ರ್ಯ ಕುಟುಂಬದ ಸ್ಥೈರ್ಯ ಮಕ್ಕಳ ರಕ್ಷಣೆ ಇವುಗಳಿಗೆ ತೀವ್ರ ಆಘಾತ ಉಂಟಾಗಿದೆ. ನಿಯಮ, ಸಂಯಮನೆಗಳನ್ನು ನಿಂದಿಸುವದು ಆಧುನಿಕರ ಮನೋವೃತ್ತಿಯಾಗಿದೆ. ಅದರಿಂದ ಎಲ್ಲ ದುರ್ಭಾವನೆಗಳಿಗೂ ಉತ್ತೇಜನ ಸಿಕ್ಕಂತಾಗಿದೆ. ಇರಬೇಕಾದ ಎಲ್ಲ ದಿವ್ಯ ಭವ್ಯಗಳು ಅರ್ಥಹೀನವೆನ್ನುವ ನವ್ಯರ ನಿರ್ದೇಶನದಲ್ಲಿ ನಾಗರಿಕತೆಯು ಎತ್ತ ಸಾಗಿದೆ ಎಂಬುದೇ ತಿಳಿಯದಾಗಿದೆ.

ಆಧುನಿಕತೆಯ ಅಟ್ಟಹಾಸಕ್ಕೆ ಪ್ರಜಾಪ್ರಭುತ್ವ ಕ್ರಮದ ಆಡಳಿತ ಪದ್ಧತಿಯು ತನ್ನ ದೇಣಿಗೆಯನ್ನು ನೀಡಿದೆ. ಸ್ವಾತಂತ್ರ್ಯ ಎಂಬುದರ ದುರಪಯೋಗ ನಡೆದಿದೆ. ನನ್ನ ಮನ ಬಂದಂತೆ ನಾನು ನಡೆಯುತ್ತೇನೆ ಎಂಬುದೇ ನಿಜವಾದ ಸ್ವಾತಂತ್ರ್ಯವೆಂದು ಹೇಳಲಾಗುತ್ತಿದೆ. ಸ್ವಾರ್ಥವನ್ನು ಸುಟ್ಟು ಬಹುಜನ ಹಿತದ ಆದರ್ಶಕ್ಕಾಗಿ ಜೀವನವನ್ನೇ ಮುಡಿಪಾಗಿಟ್ಟು ಅಹೋರಾತ್ರಿ ಅದಕ್ಕಾಗಿ ಜೀವನ ತೇಯುವ ಮಾತು ಅರಣ್ಯರೋದನವಾಗಿದೆ, ಅರಾಜಕತೆ ಬೆಳೆಯುತ್ತಿದೆ.

**ಜನಪದ ಜನಮತ:** ಈ ವಿಷಯದಲ್ಲಿ ಸ್ವಾಮಿ ವಿವೇಕಾನಂದರು ಸಾಮಾಜಿಕವಾಗಿ ಆರ್ಥಿಕವಾಗಿ ಹಿಂದುಳಿದ ಜನರು ಸ್ವಲ್ಪ ಮಟ್ಟಿಗೆ ಸುಖ ಸೌಕರ್ಯಗಳನ್ನು ಪಡೆಯುವಂತಾಗಬೇಕು. ಉತ್ತಮ ಜೀವನವನ್ನು ನಡೆಯಿಸಿದ ಮೇಲೆ ತ್ಯಾಗವು ಸ್ವಾಭಾವಿಕವಾಗಿಯೇ ಬರುತ್ತಿದೆ. ಪ್ರಾಯಃ ಈ ವಿಚಾರಗಳಲ್ಲಿ ಕೆಲ ಅಂಶಗಳನ್ನು ನಾವು ಪರದೇಶಿಯರಿಂದ ಕಲಿಯಬಹುದು. ಆದರೆ ನಾವು ಅತ್ಯಂತ ಜಾಗರೂಕರಾಗಿರಬೇಕು. ಪಶ್ಚಿಮದ ಭಾವನೆಗಳನ್ನು ಅರ್ಥಮಾಡಿಕೊಂಡಿದ್ದೇವೆ. ಹೆಚ್ಚಿನ ಜನರು ನಮ್ಮ ಸಮಾಜಕ್ಕೆ ಒಳಿತನ್ನು ಮಾಡುವುದರಲ್ಲಿ ಅಸಮರ್ಥರಾದ ಉದಾಹರಣೆ ಬಹಳಾಗಿವೆ. ವಿಜ್ಞಾನದ ವಿಚಾರಗಳು ಸಾಮಾನ್ಯ ವಸ್ತುಗಳಿಂದ ಹೆಚ್ಚಿನ ಉಪಯೋಗವನ್ನು ಪಡೆಯುವ ವಿಧಾನಗಳು ಸಂಘಟಿತರಾಗಿ ದುಡಿಯುವ ಕಲೆ ಇವುಗಳನ್ನು ಅವರಿಂದ ಕಲಿಯಬಹುದು. ಆಧ್ಯಾತ್ಮವನ್ನು ತೊರೆಯಬೇಡಿ ಅದೊಂದೇ ಉಳಿಯುವುದು. ಇತರ ವಿಚಾರಗಳು ಬೇಡವೆಂದಲ್ಲ. ರಾಜಕೀಯ ಸಾಮಾಜಿಕ ವಿಚಾರಗಳು ಬೇಡವೆಂದಲ್ಲ. ಅವುಗಳಿಗೆ ಪ್ರಥಮ ಸ್ಥಾನವಿಲ್ಲವೆಂದರ್ಥ. ಧರ್ಮ ಭಾರತೀಯರ ಸರ್ವಸ್ವ. ಇದು ನಾಶವಾದಾಗ ಭರತ ಖಂಡ ನಾಶವಾಗುತ್ತದೆ. ಎಂಥ ರಾಜಕೀಯ ಕ್ರಾಂತಿಯನ್ನು ಮಾಡಿದರೂ ಧರ್ಮವಿಲ್ಲದೇ ಭಾರತ ಉಳಿಯಲಾರದು ಎಂದಿದ್ದಾರೆ.

**ಇತಿಹಾಸದ ಪಾಠಗಳು:** ಈ ಶ್ರದ್ಧೆ ಪಾರಮಾರ್ಥದಲ್ಲಿಯ ಶ್ರದ್ಧೆ. ಭಾರತೀಯರ ನೈತಿಕ

ಸಮುನ್ನತೆಯ ಕಂಪನ್ನು ವಿಶ್ವದಾದ್ಯಂತ ಪಸರಿಸಲು ಕಾರಣವಾಗಿದೆ. ಭಾರತೀಯರ ಶೀಲದ ಒರಿಮೆಯನ್ನು ಕುರಿತು ವಿದೇಶಿ ಪರಿಶೀಲಕರು ಯಾತ್ರಿಕರೂ ಆಶ್ಚರ್ಯದಿಂದ ಪ್ರಶಂಸೆ ಮಾಡಿದ್ದು ಕಂಡುಬರುತ್ತದೆ. ನಿಜವಾದ ಆಧ್ಯಾತ್ಮಿಕ ಒನ್ನೆಲೆ ಅಥವಾ ನಿಜವಾದ ಧರ್ಮ ಶ್ರದ್ಧೆ ಹೇಗೆ ಸಮಸ್ತ ಮಾನವ ಜನಾಂಗದ ಕಲ್ಯಾಣ ಚಿಂತನೆಗೆ ಬೇಕಾದ ನಿಸ್ವಾರ್ಥ ಪ್ರೇಮದ ಪ್ರವಾಹವನ್ನು ಹರಿಸಿತು ಎಂಬುದಕ್ಕೆ ವಿದೇಶಿ ಪರಿಶೀಲಕರು ಹೇಳಿದ ಮಾತುಗಳೇ ಸಾಕ್ಷಿಯಾಗಿವೆ.

ಅಲ್ಲದೇ ಅನೇಕ ರಾಜಾಧಿರಾಜರು, ಸಜ್ಜನರು, ವಿಚಾರವಂತರೂ ಮಾಡಿದ ಕೃತಿಗಳು ಧರ್ಮ ಸಂಸ್ಕೃತಿಯ ಉನ್ನತ ಆದರ್ಶಗಳಾಗಿವೆ. ಅವು ಗತ ವೈಭವಗಳಲ್ಲ. ಅವು ಸಂಸ್ಕೃತಿ ವೃಕ್ಷದ ಸತ್ವ ಬಲಿಷ್ಠವಾಗಿದೆ ಎನ್ನುವುದಕ್ಕೆ ಆಧುನಿಕ ಯುಗದಲ್ಲೂ ಸಾಕಷ್ಟು ಸತ್ಫಲಗಳನ್ನು ನೀಡುತ್ತಿವೆ ಎಂಬುದಕ್ಕೆ ಉಜ್ವಲ ಉದಾಹರಣೆಗಳಾಗಿವೆ.

ಆಧುನಿಕ ಯುಗದಲ್ಲೂ ಸಾಕಷ್ಟು ಸತ್ಫಲವನ್ನು ನೀಡಿರುದನ್ನು ಕಾಣಬಹುದು. ಬ್ರಿಟಿಷ್ ಚಕ್ರಾಧಿಪತ್ಯ ನೆಲೆಗೊಂಡು ಭಾರತದ ಕ್ಷಾತ್ರಶಕ್ತಿ ದುರ್ಬಲವಾಗಿ ಆರ್ಥಿಕವಾಗಿ ಅವನತವಾಗಿ ಧಾರ್ಮಿಕ ಸಾಂಸ್ಕೃತಿಕವಾಗಿಯೂ ಸತ್ವಹೀನವೆಂದೇ ಸರ್ವತ್ರ ಪ್ರಚಾರವಾಗುತ್ತಿರುವ ವೇಳೆ ಸ್ವದೇಶಿಯರೇ ವಿದೇಶಿಯರನ್ನು ಗುಲಾಮರಂತೆ ಅನುಕರಿಸಲು ತೊಡಗಿದಾಗ ದಕ್ಷಿಣೇಶ್ವರದ ದೇವ ಮಾನವರಾದ ಶ್ರೀ ರಾಮಕೃಷ್ಣ ಪರಮಹಂಸರು ಕಾಣಿಸಿಕೊಂಡರು. ಯುವಕ ಸಂದೇಹವಾದಿಗಳನ್ನು ತಮ್ಮ ಗರಡಿಯಲ್ಲಿ ಪಳಗಿಸಿದರು. ಕೇವಲ ಭೋದನೆಯಿಂದಲೇ ಆಗದೇ ಸಾಧನೆಯಿಂದ ಅನುಭೂತಿಯಿಂದ, ಬದುಕಿನಿಂದ, ವಿಜ್ಞಾನದ ನೂತನ ಸಂಶೋಧನೆಗಳಿಂದ ಉದ್ಭವಿಸಿದ ಸಂಶಯಗಳನ್ನು ಎದುರಿಸಿ ನಿಲ್ಲುವ ಸಾಮರ್ಥ್ಯ ಋಷಿಗಳು ಕಂಡ ಸನಾತನ ನಿಯಮಕ್ಕಿದೆ ಎಂಬುದನ್ನು ಸಾರಿದರು. ಅವರ ಪ್ರಮುಖ ಶಿಷ್ಯರಲ್ಲಿ ಒಬ್ಬರಾದ ಸ್ವಾಮಿ ವಿವೇಕಾನಂದರು ಸನಾತನ ಧರ್ಮದ ಸಾಕಾರ ಪ್ರತಿನಿಧಿಯಾಗಿ ಪರದೇಶಗಳಲ್ಲಿ ಪ್ರಚಾರ ಮಾಡಿದರು. ಮುಂದೆ ಜಗತ್ತಿನ ಯಾವ ದೇಶವೂ ಸ್ವಾತಂತ್ರ್ಯವನ್ನು ಪಡೆಯದ ರೀತಿಯಲ್ಲಿ ಮಹಾತ್ಮಾ ಗಾಂಧೀಜಿ ದೇಶಕ್ಕೆ ಸ್ವರಾಜ್ಯ ಸಿದ್ಧಿಯನ್ನು ಪಡೆದರು. ಶ್ರೀ ಅರವಿಂದರು, ಶ್ರೀ ರಮಣ ಮಹರ್ಷಿಗಳಂಥವರೂ ಅದರ ಸಫಲತೆಯನ್ನು ತೋರಿಸಿಕೊಟ್ಟರು.

ಅವರೆಲ್ಲರೂ ಜನರನ್ನು ಒಂದುಗೂಡಿಸುವ ರಾಷ್ಟ್ರ ಹಿತಕ್ಕಾಗಿ ದುಡಿಯುವ ಪ್ರೇರಣೆಯನ್ನು ನೀಡುವ ಸಂಸ್ಕೃತಿಯ ಮೂಲ ಸೂತ್ರವಾದ ಧರ್ಮ ಮತ್ತು ಆಧ್ಯಾತ್ಮಿಕತೆಯ ಅರಿವನ್ನು ಉಂಟು ಮಾಡುವ ಶಕ್ತಿ ಅದರಲ್ಲಿಯೇ ಇದೆ ಎಂಬುದನ್ನು ತೋರಿಸಿಕೊಟ್ಟರು.

**ಶ್ರದ್ಧೆಯ ಪ್ರತಿಷ್ಠಾಪನೆ:** ಇದರಿಂದ ಜನರಲ್ಲಿ ಶ್ರದ್ಧೆಯ ಪ್ರತಿಷ್ಠಾಪನೆಯಾಯಿತು. ಸಂತರು ಮಹಾತ್ಮರು ಆಚಾರ್ಯ ಪುರುಷರು ಅವತಾರ ಪುರುಷರು ಮಾಡಿದ ಈ ಕಾರ್ಯವನ್ನು ವಿದ್ಯಾವಂತರೆನಿಸಿಕೊಂಡವರೂ ಅಧಿಕಾರ ಸ್ಥಾನದಲ್ಲಿದ್ದವರೂ ಮರೆತುದು ದುರ್ದೈವ.

**ಭಾರತದ ಆದರ್ಶ:** ಅತ್ಯಂತ ಪ್ರಾಚೀನ ಕಾಲದಿಂದ ಭಾರತವು ಈಶ್ವರ ಆತ್ಮ ಮೊದಲಾದ ಇಂದ್ರಿಯಾತೀತ ವಸ್ತುಗಳನ್ನು ಧ್ರುವ ಸತ್ಯವೆಂದು ನಂಬಿ ಅವುಗಳನ್ನು ಪ್ರತ್ಯಕ್ಷೀಕರಿಸಲು ತನ್ನ ಸರ್ವಸ್ವವನ್ನೂ ವಿನಿಯೋಗಿಸಿದೆ. ಆಧ್ಯಾತ್ಮ ಸಂಪನ್ನರಾದ ಮಹಾಪುರುಷರು ಆಗಾಗ್ಗೆ ಭಾರತದಲ್ಲಿ ಉದಿಸಿದುದೇ ಇದಕ್ಕೆ ಕಾರಣ. ಅವರು ಆಧ್ಯಾತ್ಮಿಕ ಜೀವನದ ಭದ್ರ ಬುನಾದಿಯ ಮೇಲೆ ಪ್ರತ್ಯಕ್ಷ ಧರ್ಮ ಲಾಭ ಅಥವಾ ಸಾಕ್ಷಾತ್ಕಾರವೆಂಬ ಗುರಿಯನ್ನು ಇಟ್ಟುಕೊಂಡು ಸಾಮಾಜಿಕ ರೀತಿ ನಿಯಮಗಳನ್ನು ಸೃಷ್ಟಿಸಿದರು.

ಆದುದರಿಂದ ಆಧ್ಯಾತ್ಮವನ್ನು ತೊರೆದರೆ ಜನಾಂಗಕ್ಕೆ ಭವಿಷ್ಯವಿಲ್ಲವೆಂಬುದನ್ನು ತೋರಿಸಿಕೊಟ್ಟಿದ್ದಾರೆ. ಅದನ್ನು ಇತ್ತೀಚೆಗೆ ದುರ್ಲಕ್ಷಿಸಲಾಗಿದೆ.

**ಪ್ರೀತಿ ಪಾತ್ರನ ನೋವಿನ ಸ್ಪಂದನ:** ಪ್ರೀತಿಗೆ ಪಾತ್ರನಾದ ವ್ಯಕ್ತಿಗೆ ಆಘಾತವಾದಾಗ ಹೆತ್ತ ಕರುಳಿಗೆ ನೋವು ಮುಟ್ಟುವುದು ಎಂಬುದನ್ನು ತೋರಿಸುವುದಕ್ಕೆ ನಮ್ಮ ಜೀವನದಲ್ಲಿ ಅನೇಕ ಉದಾಹರಣೆಗಳಿವೆ. ಸಾವಿರಾರು ತಾಯಂದಿರ ಹೃದಯದ ಬಡಿತ ನಿಂತ ಉದಾಹರಣೆಗಳೂ ಬಹಳ. ಅದರಂತೆಯೇ ಮಹಾತ್ಮರು ಲೋಕ ದುಃಖವನ್ನು ಎಲ್ಲ ಸ್ಥಿತಿಯಲ್ಲಿಯೂ ತಿಳಿದು ಬಳಲುತ್ತಿರುತ್ತಾರೆ.

# ನಿಮ್ಮ ವಾಹನವೂ ಸಹ ಹೆಚ್ಚು ಹೊಗೆ ಉಗುಳುತ್ತಿದೆಯೇ?

ಹೊಗೆಯುಗುಳುವ ವಾಹನ ನಮ್ಮ ಆರೋಗ್ಯಕ್ಕೆ ಹಾನಿಕರ. ವಾಯು ಮಾಲಿನ್ಯವನ್ನು ತಡೆಗಟ್ಟಿರಿ – ನಿಮ್ಮ ವಾಹನವನ್ನು ಸದಾ ಸುಸ್ಥಿತಿಯಲ್ಲಿಟ್ಟಿರಿ.

ಬೆಂಗಳೂರು ನಗರದಲ್ಲೇ ದಿನನಿತ್ಯ ಮೂರು ಲಕ್ಷಗಳಿಗಿಂತಲೂ ಅಧಿಕ ವಾಹನಗಳು ವಿನಾಶ ಕಾರೀ ಹೊಗೆಯನ್ನೇ ಉಗುಳುತ್ತವೆ.

ನಿಮ್ಮ ವಾಹನ ನಿಂತಿರುವಾಗ ಅನಗತ್ಯವಾಗಿ ಎಂಜಿನನ್ನು ಚಾಲನೆಯಲ್ಲಿಡಬೇಡಿ.

ವಾಹನ ನಿಂತೇ ಇದ್ದು, ಯಂತ್ರ ಮಾತ್ರ ಚಲಿಸುತ್ತಿದ್ದರೆ, ಹಾನಿಕಾರಕ ಹೊಗೆ ಮತ್ತು ಇಂಗಾಲದ ಮೊನಾಕ್ಸೈಡ್ ಉತ್ಪತ್ತಿ ಹೆಚ್ಚುತ್ತದೆ.

★ ವಾಹನದ ವೇಗವನ್ನು ಅನಗತ್ಯವಾಗಿ ಬದಲಾಯಿಸಬೇಡಿ.

ಪ್ರತೀ ಬಾರಿ ವೇಗ ಬದಲಾಯಿಸಿದಾಗ ಹೊಗೆ ಮತ್ತು ಇಂಗಾಲದ ಮೊನಾಕ್ಸೈಡ್ ಹೆಚ್ಚಿನ ಪ್ರಮಾಣದಲ್ಲಿ ಹೊರಬರುತ್ತವೆ. ನಿಮ್ಮ ವಾಹನವನ್ನು ಆದಷ್ಟು ನಯವಾಗಿ ಓಡಿಸಿ.

★ ಗಾಳಿ ಮತ್ತು ಇಂಧನ ತೆಳುವಾದ ರೀತಿಯಲ್ಲಿ ಸಂಮಿಶ್ರಗೊಳ್ಳುವಂತೆ ನಿಮ್ಮ ವಾಹನದ ಕಾರ್ಬ್ಯುರೇಟರನ್ನು ಸರಿಪಡಿಸಿಕೊಳ್ಳಿ.

ಅಧಿಕ ರೀತಿಯ ಇಂಧನ ಸಂಮಿಶ್ರಣ ಅಧಿಕ ಮಟ್ಟದಲ್ಲಿ ಇಂಗಾಲದ ಮೊನಾಕ್ಸೈಡನ್ನು ಹೊರದೂಡುತ್ತದೆ.

★ ಕನಿಷ್ಠ ಪಕ್ಷ ಮೂರು ತಿಂಗಳಿಗೊಮ್ಮೆ ನಿಮ್ಮ ವಾಹನವನ್ನು ನಿಯಮಿತವಾಗಿ ಸರ್ವೀಸಿಂಗ್‌ಗೆ ಕಳುಹಿಸಿ.

ಹೀಗೆ ಮಾಡುವಾಗ ಎಂಜಿನ್ ಟ್ಯೂನಿಂಗ್, ಸ್ಪಾರ್ಕ್ ಪ್ಲಗ್ ಮತ್ತು ಇಂಜೆಕ್ಷನ್ ಸಿಸ್ಟೆಮ್‌ಗಳಿಗೆ ವಿಶೇಷ ಗಮನ ನೀಡಿ. ಇದರಿಂದ ವಾಯು ಮಾಲಿನ್ಯ ಇಳಿತ ಮತ್ತು ಇಂಧನ ವೆಚ್ಚ ಕಡಿತ.

ವಾಹನ ಮಾಲಿನ್ಯವನ್ನು ನಿಯಂತ್ರಿಸಿ– ಹೆಚ್ಚಾಗುತ್ತಿರುವ ವಾಯು ಮಾಲಿನ್ಯವನ್ನು ತಡೆಯಲು ಸಹಕರಿಸಿ.

ಕರ್ನಾಟಕ ಮೋಟಾರು ವಾಹನಗಳ ನಿಯಮಗಳು, 1963ರ 196ನೆಯ ನಿಯಮ 1985ರ ನವೆಂಬರ್ 8ರಿಂದ ಜಾರಿಗೆ ಬಂದಿದೆ. ಇದು ಮೋಟಾರು ವಾಹನಗಳು ಹೊರದೂಡಬಹುದಾದ ಹೊಗೆ ಮತ್ತು ಇತರ ಮಾಲಿನ್ಯದ ಮಟ್ಟವನ್ನು ನಿಗದಿಪಡಿಸುತ್ತದೆ.

ಬಸ್ಸುಗಳು, ಲಾರಿಗಳು ಮತ್ತು ವ್ಯಾನುಗಳಂಥ ಡೀಸೆಲ್ ವಾಹನಗಳು ವಿಸರ್ಜಿಸುವ ಹೊಗೆಯ ಪ್ರಮಾಣದ ಪರೀಕ್ಷೆ ಸೆಪ್ಟೆಂಬರ್ 25, 1986ರಿಂದ ಪ್ರಾರಂಭವಾಗುವುದು. ಇದೇ ರೀತಿ ಇತರ ಮೋಟಾರು ವಾಹನಗಳ ಪರೀಕ್ಷೆಯನ್ನೂ ಹಂತ ಹಂತವಾಗಿ ಪ್ರಾರಂಭಿಸಲಾಗುವುದು.

ಪುನರ್ ಪರಿಶೀಲನೆಗಾಗಿ ನಿಗದಿಪಡಿಸಿರುವ ಅವಧಿಯೊಳಗೆ ವಾಹನದ ಚಾಲಕರಾಗಲಿ, ಮಾಲೀಕರಾಗಲಿ ವಾಹನವನ್ನು ತರದೇ ಹೋದಲ್ಲಿ ಅವರ ರಿಜಿಸ್ಟ್ರೇಷನ್ ಸರ್ಟಿಫಿಕೇಟನ್ನು ರದ್ದು ಪಡಿಸಲಾಗುವುದು.

ಕರ್ನಾಟಕ ಸರ್ಕಾರ – ನಿರ್ಮಲವಾದ ವಾತಾವರಣ ಮತ್ತು ಆರೋಗ್ಯಕರ ಜೀವನಕ್ಕಾಗಿ ಪರಿಸರ ಮಾಲಿನ್ಯವಾಗದಂತೆ ಪ್ರಯತ್ನಿಸುತ್ತಿದೆ.

**"ಕರ್ನಾಟಕ ವಾರ್ತೆ"**

ಅಂತೆಯೇ ಸ್ವಾಮಿ ವಿವೇಕಾನಂದರು ನಿಮಗೆ ಹೃದಯವಿದೆಯೇ? ಎಂದು ಜನರನ್ನು ಕೇಳುತ್ತಿದ್ದರು ಅವರ ಅಭಿಪ್ರಾಯದ ಪ್ರಕಾರ ಮಹತ್ಕಾರ್ಯ ಸಾಧನೆಗೆ ಮೂರು ಮುಖ್ಯ ವಿಷಯಗಳು ಅವಶ್ಯಕ ವಾಗಿದ್ದವು. ಮೊದಲು ಹೃದಯಪೂರ್ವಕವಾಗಿ ಅನುಭವಿಸಬೇಕು: ಎರಡನೆಯದಾಗಿ ಸಮೀಪದ, ಸುತ್ತುಮುತ್ತಲಿನ ಜೀವಗಳಲ್ಲಿ ಮರುಕ ತೋರಬೇಕು, ಕಾರುಣ್ಯ ಮತ್ತು ಪ್ರೀತಿಯಿಂದ ನಡೆದುಕೊಳ್ಳ ಬೇಕು; ಮೂರನೆಯದಾಗಿ ಅಹಿಂಸೆಯಲ್ಲಿ ದೃಢಪ್ರತಿಷ್ಠನಾಗಿರಬೇಕು. ಇದರಿಂದ ಪ್ರಾಣಿಗಳೂ ತಮಗೆ ಸಹಜವಾಗಿ ಬಂದ ವೈರವನ್ನು ಬಿಟ್ಟುಬಿಡುತ್ತವೆ ಎಂದು ಪತಂಜಲಿ ಮಹಾಮುನಿಗಳೂ ಹೇಳಿದ್ದಾರೆ. ಅಹಿಂಸೆ ಎಂದರೆ ಎಲ್ಲರೆಡೆಗೂ ಪರಿಶುದ್ಧ ಪ್ರೀತಿ ಎಂಬ ಅರ್ಥ. ಪ್ರೀತಿ ಸ್ನೇಹ, ಕರುಣೆ, ಎಂಬುದು ಇದರ ಇನ್ನೊಂದು ಮುಖ.

ಪ್ರೀತಿಯ ಮಹಿಮೆ ದೊಡ್ಡದು. ಅದಕ್ಕೆ ಅಪಜಯವಿಲ್ಲ. ಪ್ರೀತಿಯೇ ಸತ್ಯ; ದ್ವೇಷವೇ ಅನೃತ. ತಾಯಿ ಮಗು ಕುಟುಂಬ ನಗರಗಳು ಇಡಿಯ ಜಗತ್ತು. ಪ್ರಾಣಿಗಳು ಪ್ರೀತಿಯಿಂದ ಒಂದಾಗುತ್ತವೆ. ಪ್ರೀತಿಯೇ ಅಸ್ತಿತ್ವ ಸಾಕ್ಷಾತ್ ಭಗವಂತ.

**ದ್ವೇಷವು ಮಹಾದೋಷ:** ಇದರಿಂದ ಪರಸ್ಪರ ಅಸ್ವೀಕಾರ, ಅಸಂಬದ್ಧ ನಡವಳಿಕೆ, ಪರಸ್ಪರ ವಿರಸ, ತಪ್ಪು ತಿಳುವಳಿಕೆ ಮತ್ಸರ, ಅನ್ಯಾಯ ಮುಂತಾದುವುಗಳು ಉದ್ಭವಿಸುತ್ತವೆ. ಇಂದಿನ ಜಗತ್ತಿನಲ್ಲಿ ದ್ವೇಷದ ಬೆಂಕಿಯನ್ನು ಪ್ರಜ್ವಲಗೊಳಿಸುವವರೇ ಹೆಚ್ಚಾಗಿದ್ದಾರೆ.

**ಒಳಗಣ ಕಿಚ್ಚು:** ಇದು ಸುಪ್ತಾವಸ್ಥೆಯಲ್ಲಿರುವದು "ಒಂದು ಸಲ ಅದನ್ನು ನೀವು ಜ್ವಲಿಸುವಂತೆ ಮಾಡಿದರೆ ಅದರ ಪರಿಣಾಮವನ್ನು ನೀವೇ ಸಹಿಸಬೇಕಾಗುವುದು" ಎಂದು ಸ್ವಾಮಿ ವಿವೇಕಾನಂದರೂ ಹೇಳಿದ್ದಾರೆ. ಅದು ಸತ್ತರೂ ಬಿಡೆ ಎಂಬ ಹಟ ತೊಡಬಹುದು. ಕೆಲವರು ಬೂದಿಮುಚ್ಚಿದ ಕೆಂಡ ದಂತೆ ಗುಪ್ತವಾಗಿ ದ್ವೇಷಿಸಬಲ್ಲರು. ಆದರೆ ಈ ಗುಪ್ತದ್ವೇಷವು ಅವರ ವ್ಯಕ್ತಿತ್ವವನ್ನೇ ದುರ್ಬಲ ಗೊಳಿಸುವುದು ಎಂಬುದನ್ನು ಅವರು ತಿಳಿದುಕೊಳ್ಳಬೇಕು.

**ಏನು ಮಾಡಬೇಕು:** ಆದರೆ ಜನರ ದುರ್ನಡತೆ, ದುರಹಂಕಾರ, ದುಷ್ಟ ಹಂಚಿಕೆಗಳು ನಮ್ಮ ಮನ ನೋಯಿಸದೇ ಇರಲು ಸಾಧ್ಯವಿಲ್ಲ. ಅಂಥ ಪ್ರಸಂಗಗಳಲ್ಲಿ ನಾವು ಅವುಗಳನ್ನು ಪ್ರೇಮದಿಂದಲೇ ಗೆಲ್ಲಬೇಕು ಎಂಬುದು ಮಹಾತ್ಮರ ಉಪದೇಶವಾಗಿದೆ. ನಿತ್ಯವೂ ಧ್ಯಾನಕಾಲದಲ್ಲಿ ಅಥವಾ ರಾತ್ರಿ ಮಲಗುವ ಹೊತ್ತಿನಲ್ಲಿ ಯಾರನ್ನು ದ್ವೇಷಿಸುತ್ತೀರೋ ಅವರೆಡೆಗೆ ಪ್ರೀತಿಯ ಭಾವನೆಗಳನ್ನು ಹರಿಯಗೊಡಬೇಕು ಎಂದು ಹೇಳುತ್ತಾರೆ. ಅದರಿಂದ ಉತ್ತಮ ಪರಿಣಾಮ ದೊರಕಿಯೇ ದೊರಕು ವುದು. ಅದರಿಂದ ನಮ್ಮ ಅರಿವಿನ ಪರಿಧಿ ವಿಶಾಲವಾದಂತೆಲ್ಲಾ ನಮ್ಮ ದೃಷ್ಟಿಕೋನ ಬದಲಾಗುತ್ತ ಹೋಗುತ್ತದೆ. ಇದು ಸಾಧ್ಯವೆ? ಎಂದು ಕೇಳಿದಾಗ ಸಾಧ್ಯವೆಂದು ಹೇಳಬೇಕಾಗುತ್ತದೆ. "ಯಾವಾಗ ದ್ವೇಷ ಹುಟ್ಟುತ್ತದೆ?" ಎಂದು ಕೇಳಿದರೆ "ಸ್ಪರ್ಧೆಯಿಂದ, ಹೊಟ್ಟೆ ಕಿಚ್ಚಿನಿಂದ ಕೋಪದಿಂದ" ಎಂಬುದು ಕಂಡು ಬಂದಿದೆ. ಆದುದರಿಂದ ಇವುಗಳಿಂದ ನಾವು ದೂರ ಉಳಿಯಬೇಕು. ಅಂದರೆ ಬಾಳು ಸುಗಮವಾಗುವುದು ಎಂದು ಹೇಳಬಹುದು.

**ನಮಗೇಕೆ ಸಿಟ್ಟು ಬರುತ್ತದೆ?:** ಎಂದಾಗ ಇದು ಒಂದು ಹುಟ್ಟು ಗುಣವೆಂದು ಹೇಳಬಹುದು. ಅದು ನಮ್ಮ ದೈಹಿಕ ಮಾನಸಿಕ ಸಮತ್ವವನ್ನು ನಾಶಮಾಡುತ್ತದೆ. ಕೆಲವು ಸಮಯ ದುಷ್ಟರ ಕೈಯಿಂದ ತಪ್ಪಿಸಿಕೊಳ್ಳಲು ಮನುಷ್ಯ ಸ್ವಲ್ಪ ತಮೋಗುಣವನ್ನು ಪ್ರದರ್ಶಿಸಬೇಕಾಗುತ್ತದೆ. ಆದರೆ "ಮುಯ್ಯಕ್ಕೆ ಮುಯ್ಯ ತೀರಿಸಲು ಹೋಗಬಾರದು" ಎಂದು ಶ್ರೀ ರಾಮಕೃಷ್ಣರು ಹೇಳಿದ್ದಾರೆ. ಕಾರಣ ಅನಿವಾರ್ಯ ವಾದ ಸನ್ನಿವೇಶದಲ್ಲಿ ಮತ್ತು ಅಪರಿಹಾರ್ಯ ಪರಿಸ್ಥಿತಿಯಲ್ಲಿಯೂ ಸ್ವಲ್ಪ ತಾಮಸಿಯಾಗಿ ವರ್ತಿಸ ಬೇಕಾಗುತ್ತದೆ.

ಆದುದರಿಂದ ಮನಸ್ಸನ್ನು ಶಾಂತವಾಗಿಟ್ಟುಕೊಳ್ಳಬೇಕೆಂದು ಬಯಸುವವರು ಮುಂದೆ ಹೇಳುವ ವಿಷಯಗಳ ಚಿಂತನೆ ಮಾಡಬೇಕು.

1. ವೃದ್ಧಾಪ್ಯ ಬಂದೇ ಬರುವುದು ಅದನ್ನು ನಿವಾರಿಸುವಂತಿಲ್ಲ, ತಪ್ಪಿಸಿಕೊಳ್ಳುವಂತಿಲ್ಲ.
2. ರೋಗ ರುಜಿನಗಳು ಒಂದಿಲ್ಲೊಂದು ದಿನ ಬರುವ ಸಂದರ್ಭವಿಲ್ಲವೆಂದು ಹೇಳಲು ಬರು

ವುದಿಲ್ಲ. ಅದನ್ನು ನಿವಾರಿಸಲು ಪ್ರಯತ್ನಿಸಿದರೂ ಪೂರ್ಣ ನಿವಾರಣೆ ಶಕ್ಯವಿಲ್ಲ.

3. ಒಂದಲ್ಲ ಒಂದು ದಿನ ಮರಣ ಬಂದೇ ಬರುವದು. ಇದನ್ನು ತಪ್ಪಿಸಿಕೊಳ್ಳುವಂತಿಲ್ಲ.
4. ನನ್ನ ಪ್ರೀತಿ ಪಾತ್ರನಾದ ವಸ್ತುಗಳೆಲ್ಲ ಬದಲಾವಣೆ ಹೊಂದುತ್ತವೆ, ದುರ್ಬಲವಾಗುತ್ತವೆ. ವಿಯೋಗ ಹೊಂದುತ್ತವೆ ಇದನ್ನು ತಪ್ಪಿಸಿಕೊಳ್ಳುವಂತಿಲ್ಲ.
5 ನನ್ನ ಬದುಕನ್ನು ರೂಪಿಸುವುದು ನನ್ನ ಯೋಚನೆ ಮತ್ತು ಭಾವನೆಗಳು ಒಳಿತೋ, ಕೆಡುಕೋ ಮಾಡಿದಂಥ ಕಾರ್ಯಗಳು ಅವುಗಳ ಫಲವನ್ನು ನಾವೇ ಉಣ್ಣಬೇಕು.

ಈ ಜಗತ್ತು ನಿಗೂಢ ಶಕ್ತಿಯಿಂದ ನಡೆಯುತ್ತಿದೆ ಎಂಬುದನ್ನು ನಾವು ತಿಳಿದುಕೊಳ್ಳಬೇಕು. ಮೇಲೆ ಹೇಳಿದ ಐದು ವಿಷಯಗಳನ್ನು ಕುರಿತು ಚಿಂತಿಸಿದಾಗ ಮನುಷ್ಯ ತನ್ನ "ಅಹಂ" "ಮಮ"ಗಳನ್ನೂ ದುರಾಶೆ, ದುರಾಸಕ್ತಿಗಳನ್ನು ಕಡಿಮೆಮಾಡಿಕೊಂಡು ದಿವ್ಯ ಪಥದಲ್ಲಿ ಮುನ್ನಡೆಯಲು ಸಮರ್ಥನಾಗುತ್ತಾನೆ. ಅದರಿಂದ ಅರಿವಿನ ಪರಿಧಿ ವಿಶಾಲವಾಗುತ್ತದೆ. ಅದು ವಿಶಾಲವಾದಂತೆ, ಆಳವಾದಂತೆ, ಅನಿವಾರ್ಯ ಅಪರಿಹಾರ್ಯಗಳನ್ನು ಎದುರಿಸುವ ವಿಧಾನ ನಮಗೆ ಸ್ವಾಭಾವಿಕವಾಗಿ ತಿಳಿಯುತ್ತದೆ. ಅಜ್ಞಾನವೆ ಸಕಲ ದುಃಖಗಳ ಮೂಲ. ಅದು ಕಳೆದಂತೆ ಮನಸ್ಸಿನ ಕೊಳೆ ದೂರವಾಗಿ ಸ್ಥೈರ್ಯವೃದ್ಧಿಯಾಗುತ್ತದೆ.

**ಕಷ್ಟದ ಕುಲುಮೆ:** ಮನುಷ್ಯನ ಬದುಕಿನಲ್ಲಿ ಕಷ್ಟ ಸಂಕಟಗಳು, ನೋವು ತಾಪಗಳು, ಅಸಹಾಯ ಸ್ಥಿತಿಗಳು ಬರಬಹುದೆಂಬುದನ್ನು ವರ್ಣನೆ ಮಾಡಿ ಮುಗಿಸಲು ಯಾರಿಂದಲೂ ಸಾಧ್ಯವಾಗದು. ಆದರೂ ಅನೇಕ ಘಟನೆಗಳನ್ನು ಕಂಡು ತಿಳಿದುಕೊಳ್ಳಬಹುದು. ಅಂಥ ಪ್ರಸಂಗಗಳಲ್ಲಿ ಧೃತಿಗೆಡದೇ ಶ್ರದ್ಧೆಯಿಂದ ನಾಮಸ್ಮರಣೆ ಮಾಡಬೇಕು. ಹಿಂದಾದುದಕ್ಕೆ ಚಿಂತಿಸಬಾರದು. ಭಗವಂತನು ಯಾರ ಕೈಯನ್ನೂ ಬಿಡುವುದಿಲ್ಲ ಎಂಬ ನಂಬಿಕೆಯಿಂದ ಮುಂದೆ ಸಾಗಬೇಕು.

**ಹತಭಾಗಿಗೇನು ಪಥ?:** ಎಂದು ಎದೆಗುಂದಬಾರದು. ಹಿರಿಯರ ಸ್ವಾಂತನ ನುಡಿಗಳಿಗೆ ಕಿವಿಗೊಡಬೇಕು. ಅತ್ಯಂತ ಆಪ್ತರನ್ನು ಸಮೀಪಿಸಿ ನಮ್ಮ ದುಃಖ, ಸಂಕಟಗಳನ್ನು ಅವರೆದುರು ತೋಡಿಕೊಂಡು ಸಹಾಯ ಯಾಚಿಸಿದಂತೆ ಭಗವಂತನಲ್ಲಿ ಕಂಬನಿದುಂಬಿ ಏಕಾಂತದಲ್ಲಿ ನಿರಂತರ ಪ್ರಾರ್ಥನೆ ಸಲ್ಲಿಸಿದರೆ ಎಷ್ಟೋ ಒಳಿತಾಗುವುದು, ಮನೋಸ್ಥೈರ್ಯ ಉದಯಿಸುವುದು.

"ಶ್ರದ್ಧಾ ರಹಿತ ಪ್ರಾರ್ಥನೆ ಸ್ಟ್ಯಾಂಪ್‌ರಹಿತ ಪತ್ರದಂತೆ"
"ಭಕ್ತಿ ರಹಿತ ಪ್ರಾರ್ಥನೆ ವಿಳಾಸ ರಹಿತ ಪತ್ರದಂತೆ"
"ಶ್ರದ್ಧಾ ಭಕ್ತಿ ಸಹಿತ ವ್ಯಾಕುಲತೆಯಿಂದ ಪ್ರಾರ್ಥನೆ ಟೆಲಿಗ್ರಾಂ ಕೊಟ್ಟಂತೆ"
ಎಂಬುದನ್ನು ನಾವು ಮನಗಾಣುತ್ತೇವೆ

ಅನೇಕ ಪ್ರಸಂಗಗಳಲ್ಲಿ ಹೀಗೆ ನಿಸ್ಸಹಾಯಕತೆ ಏಕೆ ಬರುತ್ತಿದೆ ಎಂಬುದನ್ನು ತಿಳಿದುಕೊಳ್ಳುವುದು ಕಷ್ಟ. ಅಂಥ ಸಂದರ್ಭಗಳಲ್ಲಿ ಜೀವಿ ಅರ್ಜಿಸಿದ ಕರ್ಮಕ್ಕನುಗುಣವಾಗಿ ಸುಖದುಃಖಗಳನ್ನು ಅನುಭವಿಸುತ್ತವೆ ಎಂಬುದು ಸತ್ಯವೆನ್ನಬೇಕಾಗುತ್ತದೆ. ಹೀಗಾಗಿ ಸಜ್ಜನರಿಗೂ ಸತ್ಕರ್ಮ ನಿರತರಿಗೂ, ದೈವ ಭಕ್ತರಿಗೂ ಸಂಕಟಗಳು ಬರುತ್ತವೆ ಎಂಬುದನ್ನು ನಾವು ನೋಡುತ್ತೇವೆ ಏಕೆ? ಹೀಗೆ? ಎಂಬುದಕ್ಕೆ ಅದೇ ಸಮಾಧಾನದ ಉತ್ತರವಾಗುತ್ತದೆ.

ಏಕಾಗ್ರಚಿತ್ತದಿಂದ ಪ್ರಾರ್ಥನೆ ಮಾಡುವುದು ಕಷ್ಟಮಯ. ಮನವೆಂಬ ಮರ್ಕಟವು ನಮ್ಮನ್ನು ಪೀಡಿಸುತ್ತಿದೆ. ಸತ್ಸಂಗ, ಸದ್ಗ್ರಂಥಗಳ ಅಧ್ಯಯನದಿಂದ ಪ್ರಾರ್ಥನೆಯಿಂದ ಸ್ವಲ್ಪವಾದರೂ ನಿಷ್ಠೆಯಿಂದ (ತಪ್ಪದೇ ಕ್ರಮವಾಗಿ) ಮಾಡುವ ಪ್ರಯತ್ನದಿಂದ ಖಂಡಿತವಾಗಿಯೂ ಮನಸ್ಸನ್ನು ನಿಯಂತ್ರಿಸಲು ಸಾಧ್ಯವಿದೆ. ಆದರೆ ಸ್ವಲ್ಪ ಕಾಲಾವಕಾಶ ಬೇಕು. ಧೃತಿಗೆಡದೆ ಅಭ್ಯಾಸ ಮಾಡಿದ್ದಾದರೆ ಯಶಸ್ಸು ದೊರೆಯುತ್ತದೆ. ಇದರಿಂದ ಬದುಕಿನ ಸಮಸ್ಯೆಗಳಿಗೆ ಆಧ್ಯಾತ್ಮಿಕ ಪರಿಹಾರವನ್ನು ದೊರಕಿಸಬಹುದು. ಇವುಗಳನ್ನು ಪ್ರಾಪಂಚಿಕ ವಿಧಾನಗಳಿಂದ ಪರಿಹರಿಸಲು ಸಾಧ್ಯವಾಗುವುದಿಲ್ಲ. ನಮ್ಮ ಪ್ರಜ್ಞೆಯ ಆಳದಲ್ಲೇ ಈ ಸಮಸ್ಯೆಗಳ ಮೂಲಕಾರಣ ಅಡಗಿದೆ. ಅಲ್ಲೇ ಅದರ ಪರಿಹಾರವನ್ನು ಕಂಡುಕೊಳ್ಳಬೇಕು. ಆಧ್ಯಾತ್ಮಿಕ ಸಾಧನೆಯು ಈ ಕೆಲಸ ಮಾಡುತ್ತದೆ. ಅನಿವಾರ್ಯಗಳನ್ನು ಅಪರಿಹಾರ್ಯಗಳನ್ನು ಆ ಮೂಲಕ ಎದುರಿಸಬೇಕಲ್ಲದೇ ಬೇರೆ ದಾರಿ ಇಲ್ಲ. ಇಂಥ ಘಟನೆಗಳಿಂದ

ಬಹು ಚೈತನ್ಯರಂಥ ಅನೇಕ ಮಹಾ ಪುರುಷರು ಪಾರು ಮಾಡಿದ ಅನೇಕ ಉದಾಹರಣೆಗಳು ಸಿಗುತ್ತವೆ. ಅವರೇನು ಹೇಳುತ್ತಾರೆ? ಇವರೇನು ಹೇಳುತ್ತಾರೆ? ಎಂದು ತಾತ್ಸಾರ ಮಾಡಬಾರದು. ವಿಚಾರಿಸಬೇಕು. ವಿಧೇಯವಾಗಿ ನಂಬಬೇಕು. ಶ್ರದ್ಧೆಯೇ ಮಹತ್ವದ ಪಾತ್ರ ವಹಿಸುತ್ತದೆ. ಸ್ವಂತದ ಸುಖ ದುಃಖಗಳನ್ನು ಭಾವಪೂರ್ಣವಾಗಿ ಕಂಡು ಇತರರ ಕಷ್ಟ ಸಂಕಟಗಳನ್ನು ಬುದ್ಧಿಯಿಂದ ಅಳೆಯಬಾರದು. ಇತರರ ದುಃಖಕ್ಲೇಶಗಳನ್ನು ಸಹಾನುಭೂತಿಯಿಂದ ಕಾಣುವ ಗುಣವನ್ನು ಬೆಳೆಯಿಸಿಕೊಳ್ಳಬೇಕು. ಆದರೆ ಕೆಲವು ಸಲ ನಮ್ಮನ್ನು ಕುರಿತು ನಮಗಿರುವ ಅಭಿಪ್ರಾಯಗಳಿಗಿಂತಲೂ ನಮ್ಮ ಶತ್ರುಗಳ ಅಭಿಪ್ರಾಯವೇ ಸತ್ಯಕ್ಕೆ ಹತ್ತಿರವಾಗಿರುತ್ತದೆ ಎಂದು ಅನಿಸುತ್ತದೆ. ಆದುದರಿಂದ ಯಥಾರ್ಥವಾಗಿ ವಿಮರ್ಶೆಯನ್ನು ಮಾಡುವುದನ್ನು ಅಭ್ಯಸಿಸಬೇಕು. ಪೊಳ್ಳು ಹೊಗಳಿಕೆಗೆ ದಾಸರಾಗಬಾರದು. ಆರ್ಥಿಕ ಸಮಸ್ಯೆ ಇದ್ದರೂ ಅದನ್ನು ವಿಚಾರ ಮಾಡಿ ಸೂಕ್ತ ಉಪಾಯ ಹುಡುಕಿ ಪಾರಾಗಬೇಕು. ಸಾಮಾನ್ಯವಾಗಿ ಹಣವನ್ನು ಹೇಗೆ ಸಂಪಾದಿಸಬೇಕು ಎಂಬುದು ಎಲ್ಲರಿಗೂ ತಿಳಿದ ವಿಷಯ. ಆದರೆ ಅದನ್ನು ಹೇಗೆ ವೆಚ್ಚ ಮಾಡಬೇಕು ಎಂಬುದು ಅನೇಕರಿಗೆ ತಿಳಿದಿರುವುದಿಲ್ಲ. ಅದನ್ನು ಕಲಿಯಬೇಕು. ಅದಕ್ಕೆ ಅನುಕೂಲವಾದ ನಿಯಮಗಳು ಹೀಗಿವೆ.

1. ನೀವು ಪಡೆಯಲು ಸಾಧ್ಯವಾದುದಕ್ಕಿಂತ ಹೆಚ್ಚು ಎಂದೂ ವೆಚ್ಚ ಮಾಡಬೇಡಿರಿ.
2. ನಿಮಗೆ ಸಾಲವಿದ್ದರೆ ಸರ್ವ ಪ್ರಯತ್ನ ಮಾಡಿ ಎಲ್ಲಕ್ಕೂ ಮೊದಲು ಅದನ್ನು ತೀರಿಸಿಕೊಳ್ಳಿರಿ
3. ಯಾವಾಗಲೂ ಸಾಲದಿಂದ ದೂರವಿರಲು ಯತ್ನಿಸಿರಿ. ಹಣ ಮತ್ತೆ ಕೊಟ್ಟರೆ ಸಾಕು ಈಗ ಇದನ್ನು ಕೊಂಡಹೋಗಿ ಎನ್ನುವ ಚತುರ ವ್ಯಾಪಾರಸ್ಥರ ಮಾತಿಗೆ ಮರುಳಾಗಬೇಡಿರಿ.
4. ಅವಶ್ಯಕವೆಂದು ಖಚಿತವಾದುದಕ್ಕೆ ಖರ್ಚು ಮಾಡಿರಿ.
5. ಇದ್ದುದರಲ್ಲಿ ಸ್ವಲ್ಪವನ್ನಾದರೂ ಉಳಿಸುವ, ಉಳಿಸಿದುದನ್ನು ಬೆಳೆಸುವ ಕಲೆಯನ್ನು ಕಲಿಯಿರಿ. ಇವೇನು ಮಹಾ, ಇವು ಗೊತ್ತಿದ್ದ ವಿಚಾರಗಳು ಎಂದು ಮಾತ್ರ ಅಲಕ್ಷ್ಯ ಮಾಡಬೇಡಿರಿ.

ವೈವಿಧ್ಯ ವೈವಿಧ್ಯ ವೈವಿಧ್ಯ. ವಿವಿಧತೆಯಲ್ಲಿ ಏಕತೆ ಪ್ರಕೃತಿಯ ಒಂದು ವೈಶಿಷ್ಟ್ಯ. ನಿಸರ್ಗದಲ್ಲಿದ್ದಂತೆ ಮಾನವರಲ್ಲಿಯೂ ಅವರ ಆಸಕ್ತಿ ಗಮನ ಪರಿಸರ ಇವುಗಳ ದೃಷ್ಟಿಯಿಂದ ನಾಲ್ಕು ವಿಧವಾಗಿ ವಿಂಗಡಿಸಿದ್ದಾರೆ.

1. ಕತ್ತಲೆಯಿಂದ ಕತ್ತಲೆಗೆ ಹೋಗುವವರು
2. ಬೆಳಕಿನಿಂದ ಕತ್ತಲೆಗೆ ಹೋಗುವವರು
3. ಕತ್ತಲೆಯಿಂದ ಬೆಳಕಿನ ಕಡೆಗೆ ಹೋಗುವವರು
4. ಬೆಳಕಿನಿಂದ ಬೆಳಕಿನೆಡೆಗೆ ಹೋಗುವವರು.

ಕತ್ತಲೆಯಿಂದ ಕತ್ತಲೆಗೆ ಹೋಗುವವನ ಉದಾಹರಣೆ ಕೊಳಚೆ ಪ್ರದೇಶದಲ್ಲಿ ಹುಟ್ಟಿದ ಮಗುವಿನಲ್ಲಿ ಇದೆ. ಕೆಲವರು ಒಳ್ಳೆಯ ಪರಿಸರದಲ್ಲಿ ಹುಟ್ಟಿ ದುರ್ಯೋಧನನ ಕ್ಲಬ್ಬಿನ ಮೆಂಬರರಾಗಿ ಬೆಳಕಿನಿಂದ ಕತ್ತಲೆಡೆಗೇ ಪಯಣಿಸುತ್ತಾರೆ. ಇನ್ನು ಕೆಲವರು ಒಳ್ಳೆಯ ಮನೆತನದಲ್ಲಿ ಹುಟ್ಟಿ ಒಳ್ಳೆಯ ಸಂಸಾರ ಪಡೆದು ಒಳ್ಳೆಯ ಮಾರ್ಗ ಹಿಡಿಯುತ್ತಾರೆ. ಇವರು ಬೆಳಕಿನಿಂದ ಬೆಳಕಿಗೆ ಹೋಗುತ್ತಾರೆ.

ಮಾನವರಲ್ಲಿ ನಿದ್ರಾಮಾನವರು ಇದ್ದಾರೆ. ದುಡಿಮೆಯ ಮಾನವರೂ ಇದ್ದಾರೆ. ಜೀವನ ಪಾಠವನ್ನು ಕಲಿಯುವಲ್ಲಿಯೂ ವೈವಿಧ್ಯ ಕಂಡು ಬರುತ್ತಿದೆ. ಇತರರು ತಪ್ಪು ಮಾಡಿ ಅನುಭವಿಸುವುದನ್ನು ಕಂಡು ಕಲಿಯುವವರು ಒಬ್ಬರಾದರೆ ತಾವು ತಪ್ಪು ಮಾಡಿ ನೋವುಂಡು ಮತ್ತೆ ಪಾಠ ಕಲಿಯುವವರು ಇನ್ನೊಂದು ವರ್ಗ. ಮೂರನೆಯದು ತಪ್ಪು ಮಾಡಿ ಎಷ್ಟು ದುಃಖ ಅನುಭವಿಸಿದರೂ ಪಾಠ ಕಲಿಯದವರು.

ವೈರಾಗ್ಯದಲ್ಲಿ ವೈವಿಧ್ಯವಿದೆ: ಪುರಾಣ ವೈರಾಗ್ಯ, ಸ್ಮಶಾನ ವೈರಾಗ್ಯ, ಪ್ರಸವ ವೈರಾಗ್ಯ ಇತ್ಯಾದಿ.

ಆರ್ಥಿಕವಾಗಿಯೂ ಉಳ್ಳವರು ಇಲ್ಲದವರು ಮಧ್ಯಮ ವರ್ಗದವರು ಇತ್ಯಾದಿ ಹೀಗೆ ಜನಜೀವನದಲ್ಲಿಯ ವೈವಿಧ್ಯಗಳಿಗಂತೂ ಇತಿ ಮಿತಿಯೇ ಇಲ್ಲ.

ಚಾರಿತ್ರ್ಯ ವೈವಿಧ್ಯಗಳಿವೆ. ಸಾಂಘಿಕ ಜೀವನ, ಕೌಟುಂಬಿಕ ಜೀವನದಲ್ಲಿ ವೈವಿಧ್ಯ ಇದೆ. ಕೆಲವು

ಸಲ ಸೋತುಗೆಲ್ಲಬೇಕಾಗುವುದು ಎಷ್ಟೇ ಸಲುಗೆ ಇದ್ದರೂ ಕರ್ತವ್ಯ ನಿಷ್ಠೆಯನ್ನು ಮರೆಯದಿರಬೇಕು. ಹೀಗೆ ಅನೇಕರು ಅನೇಕ ತರಹದ ಅನುಭವದಿಂದ ಗೆಲ್ಲಬೇಕಾಗುತ್ತದೆ. ಸ್ವಾರ್ಥ, ಒಣ ಜಂಭ, ಅಹಂಕಾರವನ್ನು ದೂರಮಾಡಿ ತಾಳ್ಮೆಯಿಂದ ತನ್ನ ಕರ್ತವ್ಯ ಪಾಲನೆಯ ಮೂಲಕ ವಿಶ್ವ ನಿಯಾಮಕನನ್ನು ತುಷ್ಟಿಗೊಳಿಸಬೇಕೆಂಬ ವ್ಯಕ್ತಿ ಶಾಂತಚಿತ್ತನಾಗಿರಬಲ್ಲ. ಚಿಂಕ್ಷೋಭದ ತೊಂದರೆ ಯಿಂದ ಮುಕ್ತನಾಗಬಲ್ಲ. ಆದುದರಿಂದ ಹ್ಯನ್ನನ ಅರಳಬೇಕು ಚಿಂಕ್ಷೋಭ ಅಳಿಯಬೇಕು.

### ಅಧ್ಯಾಯ ಎರಡು

## ಅದ್ಭುತಗಳು ಇಂದಿಗೂ ನಡೆಯುತ್ತಿವೆ!

**ಇವನೊಳಗೆ ಅವನು:** ಇವನು ಯಾವ ವೈದ್ಯಕೀಯ ಶಾಲೆಗೂ ಹೋದವನಲ್ಲ. ಯಾವ ತರಬೇತೂ ಪಡೆದವನಲ್ಲ. ಅವನು ಉಪಯೋಗಿಸುತ್ತಿದ್ದ ಶಸ್ತ್ರ ಚಿಕಿತ್ಸೆಯ ಉಪಕರಣಗಳು ಯಾವ ಆಧುನಿಕ ಯಂತ್ರಾಗಾರದಿಂದಲೂ ಬಂದುದಲ್ಲ. ಅಡುಗೆ ಮನೆಯಲ್ಲಿ ತರಕಾರಿಯನ್ನು ಕತ್ತರಿಸುವ ಸಾಮಾನ್ಯ ಚಾಕಿನಿಂದಲೇ ಅಸಂಖ್ಯ ಅಪರೇಶನ್ನುಗಳನ್ನು ಮಾಡುತ್ತಿದ್ದ. ರೋಗಿಗಳ ಹೆಸರು ಮತ್ತು ವಿಳಾಸ ಗಳನ್ನು ಮಾತ್ರ ಮೊದಲು ಕೇಳುತ್ತಿದ್ದ. ಅವರ ನೋವು, ನರಳಾಟಗಳನ್ನು ಸ್ವಲ್ಪವೂ ವಿಚಾರಿಸುತ್ತಿ ದ್ದಿಲ್ಲ. ನನಗೆಲ್ಲ ತಿಳಿದಿದೆ ಎನ್ನುತ್ತಿದ್ದ. ಅವನು ಈ ಮಾತನ್ನು ಜಂಬದಿಂದ ಹೇಳುತ್ತಿರಲಿಲ್ಲ. ಆ ಮಾತು ಪ್ರತಿಯೊಂದು ಸಂದರ್ಭದಲ್ಲಿ ಸತ್ಯವಾಗಿಯೇ ಇರುತ್ತಿತ್ತು. ಅವನು ದೇಹದೊಳಗಿನ ಹುಣ್ಣುಗಳನ್ನು ಗಡ್ಡೆಗಳನ್ನು ಗ್ರಂಥಿಗಳನ್ನು ಕ್ಷಣಾರ್ಧದಲ್ಲಿ ತನ್ನ ಚಾಕುವಿನಿಂದ ಹೊರತೆಗೆದು ಬಿಡುತ್ತಿದ್ದ. ಸರಸರನೆ ಔಷಧಿ ಚೀಟಿಗಳನ್ನು ಬರೆದುಕೊಡುತ್ತಿದ್ದ. ಅವನು ಮೋಸಗೊಳಿಸುವ ಮಾಂತ್ರಿಕನಾಗಿರಲಿಲ್ಲ. ಜಗತ್ಪ್ರಸಿದ್ಧ ಡಾಕ್ಟರರು ಅವನ ಶಸ್ತ್ರ ಚಿಕಿತ್ಸೆಯ ವಿಧಾನವನ್ನು ಪ್ರತ್ಯಕ್ಷ ವಾಗಿ ಪರಿಶೀಲಿಸಿ ಮೂಕಸ್ತಿತರಾಗುತ್ತಿದ್ದರು. ಅವನು ಮಾಡಿದ ಎಲ್ಲ ಶಸ್ತ್ರ ಚಿಕಿತ್ಸೆಗಳೂ ಯಶಸ್ವಿ ಯಾಗಿರುವುದು ಸತ್ಯ ಎಂದು ಕಂಡುಕೊಂಡಿದ್ದರು.

ಅವನು ಕಡು ಬಡವ. ಅವನ ಹೆಸರು ಜಿ ಆರಿಗೋ, ಹೆಚ್ಚು ಕಲಿತವನಲ್ಲ. ಇತರರ ದುಃಖ ಗಳನ್ನು ನೋಡಿ ಮರುಗುತ್ತಿದ್ದ ಮನಸ್ಸಿನವ. ಇವನು 1955ರಿಂದ 1971ರವರೆಗೂ ಅಂದರೆ ಸಾಯುವವರೆಗೂ ಈ ಕಾಯಕವನ್ನು ಮಾಡಿದ. ದಿನ ನಿತ್ಯ ಪ್ರಾರ್ಥನೆ ಸಲ್ಲಿಸುತ್ತಿದ್ದ. ಡಾ|| ಫ್ರಿಟ್ಸ್ ಅವರ ಪೂರ್ಣ ವ್ಯಕ್ತಿತ್ವ ಅವನಲ್ಲಿ ಆವಾಹಿತವಾಗುತ್ತಿತ್ತು. ಆಗ ಅವನು ಜರ್ಮನ್ ಮಿಶ್ರಿತ ಪೋರ್ಚುಗೀಸ್ ಭಾಷೆಯಲ್ಲಿ ಸಂಭಾಷಣೆ ಮಾಡುತ್ತಿದ್ದ. ಜರ್ಮನ್ ಭಾಷೆಯು ಅವನಿಗೆ ಬಾರ ದಿದ್ದರೂ ಆಗ ಮಾತ್ರ ಅದು ಸಾಧ್ಯವಾಗುತ್ತಿತ್ತು.

ಕ್ರೈಸ್ತ ಸಂಪ್ರದಾಯಿಗಳು ಅದೊಂದು ಕರಾಳ ಮಾಂತ್ರಿಕತೆ ಎಂದು ಯೋಚಿಸಿ ವಿರೋಧಿಸಿ ದರು. ಅವನನ್ನು ಜೇಲಿನಲ್ಲಿ ಇಡಿಸಿದರು. ಅದನ್ನು ನಿಲ್ಲಿಸಲು ಅವರು ಕೇಳಿಕೊಂಡರು. ಅವನು ಸಿದ್ಧನಿದ್ದ. ಆದರೆ ಜನರು ಅವನನ್ನು ಬಿಡುತ್ತಿರಲಿಲ್ಲ. ಅದಕ್ಕಾಗಿ ಅವನನ್ನು ಮತ್ತೊಮ್ಮೆ ಜೇಲಿಗೆ ಕಳಿಸಿದರು. ಅವನಿಂದ ರೋಗ ಮುಕ್ತರಾದವರು ಒಂದು ನಿಧಿಯನ್ನು ಜೇಲಿನಲ್ಲಿದ್ದಾಗ ಕೊಟ್ಟರು. ಆತ ಸ್ವೀಕರಿಸಲಿಲ್ಲ. ರೋಗಿಗಳಿಂದ ಅವನು ಒಂದು ಕಾಸನ್ನು ತೆಗೆದುಕೊಳ್ಳುತ್ತಿರಲಿಲ್ಲ. ಇದರ ರಹಸ್ಯವೇನು ಎಂದು ಅವನನ್ನು ಕೇಳಿದಾಗ ರಾತ್ರಿ ಹೊತ್ತು ವೈದ್ಯಕೀಯ ಉಡುಪನ್ನು ಧರಿಸಿದ ಜಾಗ್ರತ ವ್ಯಕ್ತಿಯೊಬ್ಬನು ಆಗಾಗ ನನಗೆ ಕಾಣಿಸಿಕೊಳ್ಳುತ್ತಿದ್ದ. ಆತ ಇತರ ಡಾಕ್ಟರರ ಜೊತೆಗೆ ಚರ್ಚಿಸುತ್ತಿದ್ದ. ಅಸಾಧ್ಯವೆಂದು ತೋರುವ ರೋಗಗಳನ್ನು ಗುಣಪಡಿಸಲು ಶಸ್ತ್ರ ಚಿಕಿತ್ಸೆಗೆ ಸಿದ್ಧ ನಾಗುತ್ತಿದ್ದ. ತನ್ನ ಹೆಸರು ಡಾಕ್ಟರ್ ಫ್ರಿಟ್ಸ್ ಎಂದು ಹೇಳಿದ. ತನಗೆ ದೇಹವಿಲ್ಲದಿದ್ದರೂ ವ್ಯಕ್ತಿತ್ವ, ಸ್ಮೃತಿ, ದಕ್ಷತೆಗಳನ್ನು ತಾನು ಕಳೆದುಕೊಳ್ಳಲಿಲ್ಲ. ಹಾಗಾಗಿ ದೇಹದ ಮೂಲಕ ರೋಗಿಗಳಿಗೆ ಶಸ್ತ್ರ ಚಿಕಿತ್ಸೆ ಮತ್ತು ಔಷಧ ಸೇವನೆಗೆ ನಿರ್ದೇಶನ ನೀಡುತ್ತಿದ್ದೆ ಎಂದು ಹೇಳುತ್ತಿದ್ದ. ಅವನು ಅವಿವಾಹಿತ ನಾಗಿದ್ದಾಗ ಈ ಹಳ್ಳಿಯುವನಿಗೆ ತಾನು ಯಾರು ಏನು ಮಾಡುತ್ತಿದ್ದೇನೆ ಎಂಬ ಅರಿವು ಇರುತ್ತಿರ ಲಿಲ್ಲ. ನಡೆ, ನುಡಿ, ವ್ಯವಹಾರಗಳಲ್ಲಿ ಪೂರ್ಣ ರೀತಿಯ ಬದಲಾವಣೆ ಆರ್ರಿಗೋನಲ್ಲಿ ಕಂಡು ಬರುತ್ತಿತ್ತು.

ಇದು ಕಲ್ಪನೆಯ ಕಗ್ಗವಲ್ಲ. ನಡೆದ ಘಟನೆ ಸಾವಿರಾರು ಜನರು ಪ್ರತ್ಯಕ್ಷಕಂಡ ಘಟನೆ. ಇದರಿಂದ ಸಾವಿನೊಂದಿಗೆ ಎಲ್ಲವೂ ನಾಶವೇ? ಎಂಬ ಸಂಶಯಕ್ಕೆ ಕಾರಣವಾಗುತ್ತದೆ. ಅದರ ಬಗ್ಗೆ ಸ್ಪಷ್ಟವಾದ ತಿಳಿವು ನಿಮ್ಮ ಬದುಕಿನ ದಿಕ್ಕನ್ನೇ ಬದಲಿಸುತ್ತದೆ.

ಸಾವಿನ ಆಚೆಗೆ ಏನು? ಹಿಂದೂ ಬೌದ್ಧ ಹಾಗೂ ಜೈನ ಧರ್ಮಗಳು ಜನ್ಮಾಂತರ ಜೀವನ ಮತ್ತು ಕರ್ಮಗಳನ್ನು ಅಡಿಪಾಯ ಮಾಡಿ ತಮ್ಮ ಸೌಧಗಳನ್ನು ಕಟ್ಟಿವೆ. ಪಶ್ಚಿಮ ದೇಶದ ಧರ್ಮಗಳು ಕರ್ಮ ಜನ್ಮಾಂತರಗಳನ್ನು ಒಪ್ಪದಿದ್ದರೂ ಮರಣಾನಂತರ ಜೀವಾತ್ಮನು ಸ್ವರ್ಗ ಅಥವಾ ನರಕಗಳಲ್ಲಿ ವಾಸ ಮಾಡುತ್ತಾನೆ ಎಂಬ ಕಲ್ಪನೆಗಳನ್ನು ಸ್ವೀಕರಿಸಿದ್ದಾರೆ.

ಕೆಲವು ವರ್ಷಗಳಿಂದೀಚೆಗೆ ಮನೋವಿಜ್ಞಾನಿಗಳು, ಮನೋರೋಗ ತಜ್ಞರು ಅತೀಂದ್ರಿಯಾನುಭವಗಳ ಬಗೆಗೆ ಸಾಕಷ್ಟು ಸಂಶೋಧನೆಗಳನ್ನು ಕೈಗೊಂಡು 'ಸಾವಿನ ಆಚೆಗೆ ಜೀವನವಿದೆ' ಎಂಬ ನಿರ್ಣಯಕ್ಕೆ ಬಂದಿದ್ದಾರೆ.

**ದೇಹಾತೀತ ಅನುಭವದ ಅದ್ಭುತ ಪ್ರಯೋಗ:** ಒಂದೆರಲ್ಲಿ ಮನುಷ್ಯನ ಮನಸ್ಸು ಮಿದುಳಿಗಿಂತ ಭಿನ್ನವಾದುದು ಎಂದು ಅಭಿಪ್ರಾಯ ಪಟ್ಟಿದ್ದಾರೆ. ಮನಸ್ಸಿನ ನಿಯಂತ್ರಣದಿಂದ ನರಮಂಡಲ ಹಾಗೂ ದೈಹಿಕ ಚಟುವಟಿಕೆಗಳನ್ನು ನಿಯಂತ್ರಿಸಬಹುದು ಎಂದು ಒಪ್ಪಿಕೊಳ್ಳುತ್ತಾರೆ. ನಾವು ಯಾವುದನ್ನು ಜೀವಸತ್ವ ಅಥವಾ ಜೀವಾತ್ಮ ಎಂದು ಕರೆಯುತ್ತೇವೆಯೋ ಅದೊಂದು ನಿರ್ದಿಷ್ಟವಾದ ಶಕ್ತಿ ಮಾತ್ರವಲ್ಲ ದೇಹದ ನಾಶದೊಂದಿಗೆ ನಾಶವಾಗದ ಆತ್ಮ ಎಂದು ಒಪ್ಪುವುದಕ್ಕೆ ಬಂದಿದ್ದಾರೆ.

**ಸ್ವಪ್ನದಲ್ಲಿ ರಹಸ್ಯ ಬಯಲು:** ಎಷ್ಟೋ ಮಂದಿ ವಿಜ್ಞಾನಿಗಳು ಗಣಿತಜ್ಞರು ಕೆಲವೊಮ್ಮೆ ಸ್ವಪ್ನಗಳಲ್ಲಿ ತಮ್ಮ ಸಮಸ್ಯೆಗಳಿಗೆ ಪರಿಹಾರ ಕಂಡ ಘಟನೆಗಳಿವೆ. ನಮ್ಮ ದೇಶದ ಮಹಾಗಣಿತಜ್ಞ ರಾಮಾನುಜನ್ ಅಂಥವರಲ್ಲಿ ಒಬ್ಬರು. ನಮ್ಮ ಪ್ರಜ್ಞೆಯು ವಿವಿಧ ಸ್ತರಗಳಲ್ಲಿ ಕೆಲಸ ಮಾಡುವದೆಂದು ತಿಳಿಯಲು ಅವೇ ಸಾಕ್ಷಿಗಳು. ಇದಕ್ಕೆ ಅನೇಕ ಉದಾಹರಣೆಗಳನ್ನು ಸಂಗ್ರಹಿಸಬಹುದು. ಅಂಥ ಸ್ವಪ್ನಗಳು ಕೆಲವೊಮ್ಮೆ ಪ್ರಜ್ಞೆಯ ಆಳದ ಸ್ತರಗಳಿಗೆ ಕಿಂಡಿಗಳಾಗಿರುತ್ತವೆ.

**ಬನಾರಸದಲ್ಲಿ ಮರಣ ಪೆರುವಿನಲ್ಲಿ ಪುನರ್ಜನನ:** ಎಂಬುದು ದಕ್ಷಿಣದ ಅಮೇರಿಕದಲ್ಲಿ ಹುಟ್ಟಿದ ಮಗುವಿನ ಬೇಡಿಕೆಯಾಗಿತ್ತು. ತಾನು ಬನಾರಸ್ಸಿನಲ್ಲಿ ಹುಟ್ಟಿ ಸಾವನ್ನು ಅಪ್ಪಿದ್ದು ಅಲ್ಲಿಯೇ. ಅಲ್ಲಿಗೆ ಹೋಗಲು ತಾನು ಬಯಸುತ್ತೇನೆ ಎಂದು ಅಳುತ್ತಿದ್ದ. ಅದು ಭೂತಬಾಧೆಯೆಂದು ಅವನ ತಂದೆ ತಾಯಿಗಳು ಒಬ್ಬ ವಾದ್ಯಗೆ ತೋರಿಸಿದರು. ಅವರು ಆ ಹುಡುಗ ಹೇಳಿದ ವಿವರಗಳನ್ನು ತನ್ನ ಬನಾರಸ ಮಿತ್ರರಿಗೆ ಬರೆದ. ಎಲ್ಲ ವಿವರಗಳೂ ಸತ್ಯವಾಗಿವೆ ಎಂದು ಉತ್ತರ ಬಂತು.

**ಅಂದು ಕಲಿತ ಭಾಷೆಯಲ್ಲಿ ಇಂದು ಮಾತು ಕತೆ!:** ಲಾರೆಂಟ್ ಹೇ ಎಂಬ ಚಿಕ್ಕ ವಯಸ್ಸಿನ ಹುಡುಗಿ ತಂದೆ ತಾಯಿಗಳಿಗೆ ತಿಳಿಯದ ಒಂದು ಭಾಷೆಯಲ್ಲಿ ಹಾಡಿಕೊಳ್ಳುತ್ತಿದ್ದಳು. ಅದನ್ನು ಒಬ್ಬ ವಾದ್ಯ ಕಂಡು ಹಿಡಿದು ಅವಳು ಪರ್ಶಿಯನ್ ಭಾಷೆಯಲ್ಲಿ ಹಾಡಿಕೊಳ್ಳುತ್ತಿದ್ದಾಳೆ ಎಂದರು. ತಂದೆ ತಾಯಿಗೆ ಆಶ್ಚರ್ಯವಾಯಿತು; ನಂಬದಾದರು. ಹುಡುಗಿಯನ್ನು ಪ್ರಶ್ನಿಸಿದಾಗ "ದೂರದ ದೇಶದಲ್ಲಿ ಬಹಳ ಹಿಂದಿನ ಕಾಲದಲ್ಲಿ ನಾವು ಮಾತನಾಡುತ್ತಿದ್ದ ರೀತಿ ಅದು" ಎಂದಳು.

**ವಶ್ಯ ಸುಪ್ತಿಯಿಂದ ಜನ್ಮಾಂತರ ಸಂಬಂಧ:** ವಶ್ಯ ಸುಪ್ತಿಗೆ ಒಳಪಟ್ಟ ವ್ಯಕ್ತಿಯು ಹಿಂದಿನ ಅಭ್ಯಾಸಗಳನ್ನು ತೋರೆಯುವಂತೆ ಮಾಡಬಹುದು. ವಶ್ಯಸುಪ್ತಿಗೆ ಒಳಪಟ್ಟ ಗಂಡಸು ಅಥವಾ ಹೆಂಗಸನ್ನು ತಮ್ಮ ಹಿಂದಿನ ಜನ್ಮದ ನೆನಪು ಮಾಡಿಕೊಳ್ಳುವಂತೆ ಮಾಡಬಹುದು ಎಂದು ಪ್ರೊ. ಜೆ.ವಿ. ರಾವ್ ಹೇಳುತ್ತಾರೆ.-"ಇವು ಸತ್ಯ, ಸ್ವಲ್ಪವೂ ಸಂಶಯಕ್ಕೆ ಎಡೆಗೊಡದಂಥ ಉದಾಹರಣೆಗಳು ಬಹಳ ಸಿಗುತ್ತವೆ."-ಎನ್ನುತ್ತಾರೆ.

***ರಶಿಯ ದೇಶದಲ್ಲಿ ಅತೀಂದ್ರಿಯ ವಿಜ್ಞಾನದ ಅದ್ಭುತ ಪ್ರಗತಿ***

"ಕಬ್ಬಿಣದ ಪರದೆಯ ಹಿಂದಿನ ಅತೀಂದ್ರಿಯ ವಿಜ್ಞಾನಕ್ಕೆ ಸಂಬಂಧಿಸಿದ ಶೋಧನೆಗಳು (Psychic Discoveries Behind the Iron Curtain) ಎಂಬ ಗ್ರಂಥ ಇದನ್ನು ವಿವರಿಸಿದೆ. ಇದು ಶೀಲಾ ಒಸ್ಟ್ರೆಂಡರ್ ಮತ್ತು ಲಿನ್ ಶ್ರೋಡರ್ ಬರೆದ ಒಂದು ಉದ್ಗ್ರಂಥ.

**ನಮಗೆ ಎರಡು ದೇಹಗಳಿವೆಯೇ?**- ಎಲಬು, ರಕ್ತ, ಮಾಂಸ, ನರವ್ಯೂಹಗಳಿಂದ ಕೂಡಿದ ಮನುಷ್ಯ ಶರೀರದ ಹಿನ್ನೆಲೆಯಲ್ಲಿ ಸಾಮಾನ್ಯ ದೃಷ್ಟಿಗೆ ಗೋಚರಿಸದ ಭಾರತದಲ್ಲಿ ಪುರಾತನ ಕಾಲದಿಂದಲೂ ಯೋಗಿಗಳಿಗೆ ಗೋಚರಿಸಿದೆ ಎಂದು ಹೇಳಲಾದ ಅತ್ಯಂತ ಸೂಕ್ಷ್ಮವಾದ ಚೈತನ್ಯಮಯ ಶರೀರವಿದೆ ಎಂಬ ಸೂಚನೆ ರಶಿಯ ತಜ್ಞರಿಗೆ ಸುಮಾರು 1939ರ ಹೊತ್ತಿಗೇನೇ ತಿಳಿದಿತ್ತು.

ಮನುಷ್ಯ ಶರೀರವು ಹೊರಸೂಸುವ ವಿಕಿರಣದ ಪರಿಧಿಯನ್ನು ಆಯಸ್ಕಾಂತವು ಕಬ್ಬಿಣದ ಸಣ್ಣ ತುಣುಕಗಳನ್ನು ತನ್ನೆಡೆಗೆ ಸೆಳೆಯುತ್ತದೆ ಎಂಬುದಕ್ಕೆ ಹೋಲಿಸಿ ಆಯಸ್ಕಾಂತದ ಸುತ್ತಲೂ ಇರುವ ಕಾಂತ ಶಕ್ತಿಯು ನಮ್ಮ ಕಣ್ಣಿಗೆ ಕಾಣಿಸದಿದ್ದರೂ ಅದರ ಸಮೀಪಕ್ಕೆ ಬಂದ ಕಬ್ಬಿಣದ ತುಣುಕುಗಳನ್ನು ತನ್ನೆಡೆಗೆ ಸೆಳೆಯುವಂತೆ ಮನುಷ್ಯನ ದೇಹದಿಂದ ಹೊರಹೊಮ್ಮುವ ಒಂದು ವಿಶಿಷ್ಟ ಚೈತನ್ಯವು ವಿದ್ಯುತ್ತಿನ ಪ್ರವಾಹವನ್ನು ಪ್ರಭಾವಗೊಳಿಸುವುದೆಂದು ತಜ್ಞರು ಹೇಳುತ್ತಾರೆ. ಇದನ್ನು ಕೀರಲಿಯನ್ ಎಂಬ ವಿಜ್ಞಾನಿ ಸಿದ್ಧಪಡಿಸಿದ. ಪರಿಷ್ಕೃತ ಉಪಕರಣವು ಅವುಗಳ ಸ್ಥಿತ್ಯಂತರ, ಗತಿ, ವೈಚಿತ್ರ್ಯ, ವರ್ಣ, ವೈವಿಧ್ಯಗಳನ್ನು ತೋರಿಸುತ್ತಿದೆ. ಅದು ವಿದ್ಯುತ್ ಅಲ್ಲದ ಚೈತನ್ಯವನ್ನು ಒಂದು ರೀತಿ ವಿದ್ಯುತ್ ಆಗಿ ಪರಿವರ್ತಿಸಿ ನಮ್ಮ ದೃಷ್ಟಿಗೆ ನಿಲುಕುವಂತೆ ಮಾಡುತ್ತದೆ. ಸೂರ್ಯಗ್ರಹಣ ಕಾಲದಲ್ಲಿ ಸೂರ್ಯ ಮಂಡಲವನ್ನು ಚಂದ್ರ ಬಿಂಬ ಮರೆ ಮಾಡಿ ಮಸುಕುಗೊಳಿಸುವಂತೆ ನಮ್ಮ ದೇಹವನ್ನೆಲ್ಲಾ ಸೂಕ್ಷ್ಮವಾಗಿ ಬೆಳಗುತ್ತಿರುವ ಆ ಅತ್ಯಂತ ಸೂಕ್ಷ್ಮವಾದ ಚೈತನ್ಯಮಯ ಶರೀರವನ್ನು ನಮ್ಮ ಸ್ಥೂಲ ದೇಹವು ಮರೆಯಾಗಿಸಿದೆ ಎಂಬುದನ್ನು ಅದು ತೋರಿಸುತ್ತಿದೆ. ಹೀಗೆ ರಶಿಯಾದಲ್ಲಿ ಅನೇಕ ಪ್ರಯೋಗ ಪರೀಕ್ಷೆಗಳು ನಡೆದಿದ್ದು ಕಂಡು ಬರುತ್ತಿದೆ.

**ಭಾರತದಲ್ಲಿ ಅಸಡ್ಡೆ ಏಕೆ!**- ಇದಕ್ಕೆ ಕಾರಣ ಇಂದು ಆಂಗ್ಲ ವಿದ್ಯಾಭ್ಯಾಸ ಮಾಡಿದ ಎಲ್ಲಾ ವ್ಯಕ್ತಿಗಳಿಗೂ ಇವು ಮೂಢ ನಂಬಿಕೆಯ ಕಂತೆಗಳೆಂಬ ಭಾವನೆಯು ಉಂಟಾಗಿದೆ.

**ಮರೆತು ಹೋದ ಸತ್ಯ:** ಮನುಷ್ಯನ ದೇಹವು ನಶಿಸಿ ಬಿದ್ದು ಹೋದರೂ ಆತ್ಮಕ್ಕೆ ಚ್ಯುತಿ ಇಲ್ಲ ಎನ್ನುವ ವಿಷಯವನ್ನು ತಿಳಿಯಲು ಕೆಲವು ಜನಾಂಗಗಳಿಗೆ ಸಾವಿರಾರು ವರ್ಷಗಳು ಬೇಕಾದವು. ದೇಹವಲ್ಲದೇ ಆತ್ಮನಿರುವನು ಎಂಬುದಕ್ಕೆ ಯುಕ್ತಿ ಪೂರ್ವಕ ಅರಿಯುವುದಕ್ಕೆ ಇನ್ನು 100 ವರ್ಷಗಳು ಬೇಕಾದವು. ಜೀವಾತ್ಮನು ದೇಹದೊಂದಿಗೆ ತಾತ್ಕಾಲಿಕ ಸಂಬಂಧವನ್ನು ಹೊಂದಿದ್ದಾನೆ ಎಂಬ ಭಾವನೆ ಬಂದ ಮೇಲೆ ಆ ಜೀವಾತ್ಮ ಬರುವುದೆಲ್ಲಿಂದ ಮುಂದೆ ಹೋಗುವುದೆಲ್ಲಿಗೆ ಅವನ ಗಮನ, ಆಗಮನಗಳ ಕ್ರಮಗಳೇನು? ಎನ್ನುವ ವಿಚಾರವಾಗಿ ಚಿಂತನೆ ಪ್ರಾರಂಭವಾಯಿತು. ಈ ಬಗ್ಗೆ ಒಂದು ನಿಷ್ಪಷ್ಟ ಸಿದ್ಧಾಂತಕ್ಕೆ ಬರಲು ಸಾಕಷ್ಟು ಕಾಲಾವಕಾಶ ಹಿಡಿದಿರಬೇಕು. ಅನಂತರ ವಿರೋಧ ಪರಿಹಾರ ಮಾಡಿ, ಸತ್ಯವನ್ನು ಯುಕ್ತಿಯುಕ್ತವಾಗಿ ಸರ್ವಜನ ಪರಿಗ್ರಾಹ್ಯಯಾಗುವಂತೆ ಸ್ಥಾಪಿಸಲಾಗಿದೆ. ಇದನ್ನು ತಿಳಿಯಲು ಯೋಗ ಶಾಸ್ತ್ರದ ಒಂದು ಗ್ರಂಥವನ್ನು ಅಧ್ಯಯನ ಮಾಡಬೇಕು.

ಪರದೇಶದಲ್ಲಿ ಮ್ಯಾಕ್ಸ್ ಮುಲರ್ ಅವರಂಥವರ ಅಭಿಪ್ರಾಯದಂತೆ ಯೋಗ ಶಾಸ್ತ್ರಕ್ಕೆ ಸುಮಾರು 6ಸಾವಿರ ವರ್ಷಗಳ ಪ್ರಾಚೀನತೆ ಇದೆ. ಭಾರತೀಯ ತತ್ವ ಶಾಸ್ತ್ರಜ್ಞರು ಚಾರುವಾಕರನ್ನುಳಿದು ಸತ್ಯಾನ್ವೇಷಣೆಗಾಗಿ ಒಂದು ಸರ್ವ ಸಮ್ಮತವಾದ ಒಮ್ಮತವನ್ನು ಗೊತ್ತುಪಡಿಸಿಕೊಂಡಿದ್ದರು. ಅವೇ ಪ್ರತ್ಯಕ್ಷ ಅನುಮಾನ, ಮತ್ತು ಶಬ್ದ ಎಂಬ ಜ್ಞಾನಸಾಧಕಗಳು. ಅದನ್ನು ವಿಶಿಷ್ಟ ವೈಜ್ಞಾನಿಕ ಕ್ರಮವೆಂದು ನಾವು ಪರಿಗಣಿಸಬಹುದು.

**ಅನ್ವೇಷಣೆಯ ವಿಧಾನ:** ಇಂದ್ರಿಯಗಳ ಮೂಲಕ ಪಡೆಯುವ ಜ್ಞಾನವು ಪ್ರತ್ಯಕ್ಷ. ಇದನ್ನು ಯಾರೂ ವಿರೋಧಿಸುವುದಿಲ್ಲ. "ಬೀಜವಿಲ್ಲದೆ ವೃಕ್ಷವಿಲ್ಲ" ಎಂಬುದು ಕಾರಣವಿಲ್ಲದೇ ಕಾರ್ಯವಿಲ್ಲವೆಂಬುದನ್ನು ಅನುಮಾನಿಸುತ್ತಿದೆ. ಯಾವುದನ್ನು ನಾವು ಪರಿಣಾಮದಲ್ಲಿ ಕಾಣುತ್ತೇವೆ ಅದು ಕಾರಣದಲ್ಲಿ ಸೂಕ್ಷ್ಮವಾಗಿ ಅಡಗಿಕೊಂಡಿರುತ್ತದೆ ಎಂಬುದು ಸ್ಪಷ್ಟವಾಗುತ್ತದೆ. ಆದುದರಿಂದ ಇದು ಅತ್ಯಂತ ಯುಕ್ತಿಯುಕ್ತವೂ ವೈಜ್ಞಾನಿಕ ಅನ್ವೇಷಣಾ ಪದ್ಧತಿಗೆ ಸಮ್ಮತವೂ ಆದ ವಿಚಾರ.

**ಅದ್ಭುತಗಳ ಅರಿವಿದೆ:** ಪರಮಸತ್ಯ ಸಾಕ್ಷಾತ್ಕಾರದ ಸಾಧನೆಯಲ್ಲಿ ಆಪ್ತವಾಕ್ಯ ಅಥವಾ ಶಬ್ದ ಪ್ರಮಾಣ ಯುಕ್ತಿ ಅಥವಾ ತರ್ಕ ಮತ್ತು ವಿಚಾರದ ಒರೆಗಲ್ಲಿನಲ್ಲಿ ವಿಮರ್ಶಿಸುವ ವಿಧಾನ ಮತ್ತು

ಸ್ವಂತ ಬದುಕಿನಲ್ಲಿ ಆ ಅನುಭವ ಈ ಮೂರು ವಿಧಾನಗಳೂ ಸೇರಿಕೊಂಡಿವೆ. ನಮ್ಮ ದೇಶದ ಮನೀಷಿಗಳು ಸತ್ಯಾನ್ವೇಷಣೆಗೆ ಉಪಯೋಗಿಸಿದ ಈ ವಿಧಾನ ಅತ್ಯಂತ ಯುಕ್ತಿ ಯುಕ್ತವೂ ವೈಜ್ಞಾನಿಕವೂ ಆಗಿದೆ ಎನ್ನಲು ಸಂದೇಹವಿಲ್ಲ.

## -:ಅಧ್ಯಾಯ ಮೂರು:-

### ಬಿತ್ತಿದಂತೆ ಬೆಳೆ ಸುಳ್ಳಲ್ಲ:-

### ಪಶ್ಚಿಮದಲ್ಲಿ ಮೌನವಾಗಿ ಪರಿಣಾಮ ಬೀರಿದ ಅದ್ಭುತ ಘಟನೆ:

*"ಅತೀಂದ್ರಿಯಾನುಭವಗಳ ಅದ್ಭುತ ದಾಖಲೆಗಳು!"*
*"ಎಕ್ಸರೇ ದೃಷ್ಟಿಯ ಎಡ್ಗರ ಕೇಸಿ!"*
*"ವರ್ಜೀನಿಯಾ ಬೀಚಿನ ಸುಪ್ತ ನಿದ್ರೆಯ ಪ್ರವಾದಿ ಡಾಕ್ಟರ್!"*
*"ಪುರಾತನ ತತ್ವಗಳು ನೂತನ ದೃಷ್ಟಾರನ ಅನುಭವದ ಮೂಸೆಯಲ್ಲಿ!"*
*"ಜಗತ್ತಿನ ಬದುಕನ್ನೇ ಬದಲಿಸುವಂತ ಬೆಳಗಿಸುವಂತ ದಿವ್ಯ ದೃಷ್ಟಿ!"*
*"ಸಂಸ್ಕೃತ ಭಾಷೆಯನ್ನು ಕೇಳಿಯೇ ಅರಿಯದ ವ್ಯಕ್ತಿ ಸುಪ್ತ ನಿದ್ರೆಯಲ್ಲಿ ಸಂಸ್ಕೃತ ಶಬ್ದವನ್ನು ಉಪಯೋಗಿಸಿದ!"*

*"ಜನ್ಮಾಂತರ ಮತ್ತು ಕರ್ಮಗಳನ್ನು ಕುರಿತು ಪಶ್ಚಿಮದ ಕ್ರೈಸ್ತ ದೃಷ್ಟಾರನ ಅಭೂತಪೂರ್ವ ಅನುಭವಗಳು!"*

**ಕ್ರೈಸ್ತ ಭಕ್ತ ಕೇಸೀ:** *ಇವನೊಬ್ಬ ಕ್ರೈಸ್ತ ಭಕ್ತನಾಗಿದ್ದ. ಜನಿಸಿದ್ದು ಮಾರ್ಚ್ 18, 1877ನೆಯ ಇಸವಿಯಲ್ಲಿ ಸಂಯುಕ್ತ ಸಂಸ್ಥಾನದ ಕೆಂಟಕಿಯ ಹಾಫ್‌ಕಿನ್ಸ್‌ವಿಲ್ಲೆಯಲ್ಲಿ. ಇವನು ಸುಪ್ತ ನಿದ್ರೆಯಲ್ಲಿ ತನಗೆ ತಾನೇ ವೈದ್ಯನಾದ ಅನುಭವವಿದೆ. ಇದರಂತೆಯೇ ಪತ್ತೇದಾರನಾಗಿ ಪರಕಾಯ ಪ್ರವೇಶ ಮಾಡಿದ ಉದಾಹರಣೆಯೂ ಇದೆ. ಹೀಗೆ ಕೇಸೀ 43 ವರ್ಷಗಳ ಕಾಲ ಅಸಂಖ್ಯ ಜನರಿಗೆ ತನ್ನ ಅತೀಂದ್ರಿಯ ಶಕ್ತಿಯ ನೆರವಿನಿಂದ ಸಲಹೆಗಳನ್ನು ನೀಡಿದ.*

**ಬದುಕಿನತ್ತ ಕೇಸೀ ದೃಷ್ಟಿ:** *ನರಳುತ್ತಿರುವ, ದುಃಖಿತರಾದ ಜನರಿಗೆ ತನ್ನಿಂದಾದ ಸಹಾಯವನ್ನು ಮಾಡಬೇಕೆಂಬುದೇ ಅವನ ಹಂಬಲವಾಗಿತ್ತು. ಹಣದ ದುರಾಶೆ ಅವನಿಗಿರಲಿಲ್ಲ. ದೇವರು ತನಗೆ ಕೊಟ್ಟ ಶಕ್ತಿಯ ಸದುಪಯೋಗವಾಗಬೇಕೆಂಬುದೇ ಅವನ ಇಚ್ಛೆಯಾಗಿತ್ತು. ಅವನು ಕೆಲವು ಸಲ ಜನ್ಮಾಂತರದ ದೃಷ್ಟಾರನ ಕಾರ್ಯವನ್ನು ತನ್ನ ಸುಪ್ತ ಸ್ಥಿತಿಯಲ್ಲಿ ಮಾಡಿದ ಉದಾಹರಣೆಗಳೂ ಇವೆ. ಆ ಸಂಸ್ಕಾರದಿಂದ ಈ ಜನ್ಮವೆಂಬ ವಿಶ್ವಾಸವಿತ್ತು. ಅವನು ಕೆಲವೊಂದು ಸಿದ್ಧಿಗಳನ್ನು ಪಡೆದಿದ್ದ. ಆದರೆ ಅಹಂಕಾರ, ಹಠಮಾರಿತನ, ಸ್ವೈರತೆ ಮತ್ತು ವಿಷಯಲಂಪಟತನ ಇವುಗಳ ವಶೆಯಿಂದ ತನ್ನ ಶಕ್ತಿಯ ದುರುಪಯೋಗ ಮಾಡಿ ಕಳೆದುಕೊಂಡನು. ಮುಂದಿನ ಒಂದು ಜನ್ಮದಲ್ಲಿ ಒಬ್ಬ ವೈದ್ಯನಾಗಿದ್ದು, ಆಗ ಯುದ್ಧದಲ್ಲಿ ಗಾಯಗೊಂಡು ಏಕಾಂಗಿಯಾಗಿ ಮರುಭೂಮಿಯಲ್ಲಿ ಅಸಹಾಯಕನಾಗಿ ಬಿದ್ದುಕೊಂಡು ಆಹಾರ, ನೀರುಗಳಿಲ್ಲದೆ ಮೂರು ದಿನಗಳ ಕಾಲ ತಡೆಯಲಾರದೇ ತನ್ನ ಇಚ್ಛಾ ಶಕ್ತಿಯಿಂದಲೇ ದೇಹತ್ಯಾಗ ಮಾಡಿದ. ಆದುದರಿಂದ ತನ್ನ ಸಧ್ಯದ ದೇಹಕ್ಕೆ ಅಸಮಾನ್ಯ ಶಕ್ತಿಯೂ ಬಂದಿದೆ ಎಂದು ಹೇಳುತ್ತಿದ್ದ. ಈ ಜನ್ಮದ ಸುಗುಣ, ದುರ್ಗುಣಗಳೆಲ್ಲವೂ ಹಿಂದಿನ ಒಂದಲ್ಲೊಂದು ಜನ್ಮದ ಅನುಭವಗಳ ಸಂಸ್ಕಾರದಿಂದ ಉಂಟಾದವುಗಳು ಎಂದು ಆತ ಖಚಿತವಾಗಿ ತಿಳಿಸಿದ.*

**ಪುನರ್ಜನ್ಮವೆಂದರೆ ವಿಕಾಸವೇ?:** *ಕ್ರಿಸ್ತನ ಉಪದೇಶದಲ್ಲಿ ಪುನರ್ಜನ್ಮದ ಬಗ್ಗೆ ಇದ್ದ ವಾದ ಹುದುಗಿದೆ ಎಂದೂ ನಂತರ ಬಂದ ಧರ್ಮಗಳು ಆ ವಿಚಾರಕ್ಕೆ ಪ್ರಾಶಸ್ತ್ಯ ನೀಯಲಿಲ್ಲವೆಂಬದು ಅವನ ಅಭಿಪ್ರಾಯವಾಗಿತ್ತು.*

**ಪ್ರಳಯಕ್ಕೆ ಹಿಂದಿನ ಪ್ರಪಂಚ:** *ಮನುಷ್ಯನು ತಾನು ಮಾಡಿದ ಕರ್ಮಕ್ಕೆ ಪ್ರತಿಕ್ರಿಯೆಯಾಗಿ ಆ ಕರ್ಮಫಲವನ್ನು ಅನುಭವಿಸಲೇ ಬೇಕೆಂಬುದು ಅವನ ಅಭಿಪ್ರಾಯವಾಗಿತ್ತು. ಆದರೆ ಪರಿಣಾಮ*

ಪ್ರತಿಕ್ರಿಯೆಗಳು ವ್ಯಕ್ತವಾಗಲು ಕೆಲವೊಮ್ಮೆ ಅನೇಕ ಜನ್ಮಗಳೇ ಬೇಕಾಗಬಹುದೆಂಬುದನ್ನು ಕೇಸೀಯೂ ಹೇಳಿದ್ದಾನೆ.

**ಅಂದು ವಿಜ್ಞಾನ ಪರಾಕಾಷ್ಠೆಗೇರಿ ಪರ್ಯಾವಸಾನವಾಯಿತೇ?:** ಕೇಸೀಯು "ಅಟ್ಲಾಂಟಿಸ್" ಕಾಲದ ವ್ಯಕ್ತಿಗಳು ವೈಜ್ಞಾನಿಕ ಜ್ಞಾನದಲ್ಲಿ ಪರಮಾವಧಿ ಉನ್ನತಿಗೇರಿ ಮತ್ತೆ ಅಂತದ್ದೇ ಸುವರ್ಣಾವಕಾಶ ದೊರೆತಾಗ ಆ ಶಕ್ತಿಯನ್ನು ರಚನಾತ್ಮಕವಾಗಿ ಮನುಷ್ಯ ಕುಲದ ಮಂಗಲಕ್ಕಾಗಿ ಉಪಯೋಗಿಸುವರೇ ಹೇಗೆ ಎಂಬುದನ್ನು ಕಾಣಬೇಕಾದರೆ ಹೇಗೆ ಹಲವಾರು ಶತಮಾನಗಳ ಕಾಲ ಕಾಯಬೇಕಾಗುವದೋ ಹಾಗೆ ಕರ್ಮಫಲ ವ್ಯಕ್ತವಾಗಲು ಹಲವಾರು ಶತಮಾನಗಳು ಬೇಕೇ ಬೇಕು ಎಂಬುದನ್ನು ಸ್ಪಷ್ಟಪಡಿಸುತ್ತಾನೆ.

**ಜನಸಂಖ್ಯೆಯಲ್ಲಿ ಉಬ್ಬರ ಇಳಿತ:** ಅವಕಾಶಗಳನ್ನನುಸರಿಸಿ ಜನಸಂಖ್ಯೆಯ ಏರಿಳಿತ ಲಯಬದ್ಧತೆಯಿರುತ್ತದೆ ಎಂದು ಅಭಿಪ್ರಾಯ ಪಡುತ್ತಾನೆ.

**ಆಕಾಶದ ದಾಖಲೆಗಳು:** ನ್ಯೂಯಾರ್ಕ್ ನಗರದ ಒಂದು ಕಡೆಯಿಂದ ಮತ್ತೊಂದು ಕಡೆಗೆ ಭೂಮಿಯ ರಸ್ತೆಯಲ್ಲಿ ಅಲೆದು ತಿರುಗಾಡಿ ಹೋಗುವದಕ್ಕಿಂತ ಭೂಗರ್ಭದ ಸುರಂಗ ಮಾರ್ಗದಲ್ಲಿ ನೇರವಾಗಿ ತಡೆಯಿಲ್ಲದೇ ಸುಲಭವಾಗಿ ಪ್ರಯಾಣ ಮಾಡುವಂತೆ ಜಾಗ್ರತ ಮನಸ್ಸು ಸುಪ್ತ ಮನಸ್ಸನ್ನೇ ಪ್ರವೇಶಿಸುವುದಕ್ಕಿಂತ ಸುಪ್ತ ಮನಸ್ಸು ಸುಪ್ತ ಮನಸ್ಸನ್ನು ಪ್ರವೇಶಿಸುವುದೇ ಸುಲಭವೆನ್ನುತ್ತಾನೆ ಕೇಸೀ. ಅವನು ಸುಪ್ತಾವಸ್ಥೆಯಲ್ಲಿ ತನ್ನ ದೈಹಿಕ ಪ್ರಜ್ಞೆಯನ್ನು ಅದುಮಿಟ್ಟು, ವಿಶ್ವಪ್ರಜ್ಞೆಯಲ್ಲಿ ತನ್ನ ಸುಪ್ತ ಪ್ರಜ್ಞೆಯನ್ನು ಶ್ರುತಿಗೂಡಿಸುವುದರಲ್ಲಿ ಸಮರ್ಥನಾಗಿದ್ದ. ಆದುದರಿಂದಲೇ ಸಾಕಷ್ಟು ಸೂಕ್ಷ್ಮ ವಿಷಯಗಳನ್ನು ಸಂಗ್ರಹಿಸುತ್ತಿದ್ದ.

**ಕಾರ್ಯ ಕಾರಣಗಳ ಸಾಂಗತ್ಯ:** ಕಾರ್ಯ ಕಾರಣ ಸಂಬಂಧವೆಂಬುದು ಭೌತ ಜಗತ್ತಿಗೇ ಸೀಮಿತವಾದುದಲ್ಲ. ನೈತಿಕ ಜಗತ್ತಿನಲ್ಲೂ ಅದು ತಪ್ಪಿಸಿಕೊಳ್ಳಲಾಗದ ಒಂದು ಸುವ್ಯವಸ್ಥಿತವೂ ಜಟಿಲವೂ ಆದ ನಿಯಮವಾಗಿದೆಯೆಂಬುದನ್ನೇ ಅವನು ತೋರಿಸಿಕೊಟ್ಟ.

**ಕರ್ಮದ ಗತಿ ವೈವಿಧ್ಯಗಳು:** ದುಃಖಕ್ಕೂ ಪಾಪ ಕೃತ್ಯಗಳಿಗೂ ಕಾರ್ಯ ಕಾರಣ ಸಂಬಂಧವಿದೆ ಎಂದು ತೋರಿಸಿಕೊಟ್ಟ.

**ಕರ್ಮ ಏನು? ಎಂಥದು?:** ಪಾಪ ಮತ್ತು ದುಃಖಗಳ ಕಾರ್ಯಕಾರಣವನ್ನು ತಿಳಿಸುವ ಏಕೈಕ ಪದವೇ ಕರ್ಮ. ಇದನ್ನು ಅವನು ಅನೇಕ ವಿವೇಚನೆಗಳಿಂದ ಸ್ಪಷ್ಟಪಡಿಸುತ್ತಾನೆ.

**ಬೂಮ್‌ರ್‍ಯಾಂಗ್ ಕರ್ಮ:** ಇತರರಿಗೆ ಕೇಡನ್ನು ಎಸೆದರೆ ಅದು ನಮ್ಮ ಮೇಲೆ ಹಿಂತಿರುಗುವ ಕರ್ಮಕ್ಕೆ ಕೇಸೀಯು "ಬೂಮ್‌ರ್‍ಯಾಂಗ್ ಕರ್ಮ" ಅನ್ನುತ್ತಾನೆ.

**ಜೈವಿಕ ಕರ್ಮ:** ಭೌತಿಕ ಸ್ತರದಲ್ಲಿ ಕಂಡುಬರುವ ಕರ್ಮಕ್ಕೆ ಕೇಸೀಯು ಜೈವಿಕ ಕರ್ಮವೆನ್ನುತ್ತಾನೆ. ಹಿಂದಿನ ಜನ್ಮದಲ್ಲಿ ಆಹಾರ ವಸ್ತುಗಳನ್ನು ಅಸಂಗತವಾಗಿ ನಷ್ಟಮಾಡಿದ್ದ ಪ್ರಯುಕ್ತ ಅದನ್ನು ಜೀರ್ಣಾಂಗ ದೌರ್ಬಲ್ಯದಿಂದ ಭೋಗಿಸುತ್ತಿರುವ ಒಬ್ಬ ವ್ಯಕ್ತಿಯ ಉದಾಹರಣೆಯನ್ನು ಹೇಳಿದ್ದಾನೆ.

**ಸಾಂಕೇತಿಕ ಕರ್ಮ:** ಹಿಂದಿನ ಜನ್ಮದಲ್ಲಿ ರಕ್ತದ ಹೊಳೆಯನ್ನು ಹರಿಸಿದುದಕ್ಕಾಗಿ ಈ ಜನ್ಮದಲ್ಲಿ ರಕ್ತ ಹೀನನಾದವನ ಉದಾಹರಣೆಯನ್ನು ಹೇಳುತ್ತಾನೆ. ಇದು ಸಾಂಕೇತಿಕ ಕರ್ಮವೆನ್ನುತ್ತಾನೆ ಕೇಸೀ.

ಅವನ ದೃಷ್ಟಿಯಲ್ಲಿ 'ಕರ್ಮ' ಎನ್ನುವುದು ವ್ಯಕ್ತಿಯ ಆಂತರಿಕ ಜೀವನಕ್ಕೆ ಅಥವಾ ಮಾನಸಿಕ ವರ್ತುಲಕ್ಕೆ ಸಂಬಂಧಿಸಿದ ನಿಯಮವೆಂದು ಹೇಳುತ್ತಾನೆ ಕೇಸೀ.

**ಮೂರು ರಂಗಗಳಲ್ಲಿ ಜೀವಿಯ ಕ್ರಿಯೆ ಪ್ರತಿಕ್ರಿಯೆಗಳು:** ಜೀವಿಯು ಸಾಮಾನ್ಯವಾಗಿ ತನ್ನ ಇಚ್ಛೆಯನ್ನು ಮೂರು ರಂಗಗಳಲ್ಲಿ ವ್ಯಕ್ತಪಡಿಸುತ್ತಾನೆ. ಒಂದು ತನ್ನ ಶರೀರದಲ್ಲಿ, ಎರಡನೆಯದು ಜೀವಿ ಇರುವ ಸನ್ನಿವೇಶ ಅಥವಾ ಬಾಹ್ಯ ಪ್ರಾಕೃತಿಕ ವಾತಾವರಣ, ಮೂರನೆಯದು ಜೀವಿಯು ಪಡೆದ ಸಾಮಾಜಿಕ ಪರಿಸರ.

**ಕರ್ಮದ ಪ್ರತಿಕಾರಗಳು:** ಮನುಷ್ಯನ ಶರೀರದಲ್ಲಿರುವ ಗ್ರಂಥಿಗಳ ಸ್ವರೂಪ ಮತ್ತು ಚಟುವಟಿಕೆಗಳು ಪೂರ್ವ ಕರ್ಮಗಳನ್ನು ಸೂಕ್ಷ್ಮವಾಗಿ ತಿಳಿಸುವ ಅತ್ಯುತ್ತಮ ಸಾಧನಗಳೆಂದು ಹೇಳಿ ಉದಾಹರಣೆಗಳಿಂದ ಸ್ಪಷ್ಟಪಡಿಸುತ್ತಾನೆ.

**ದುಷ್ಕರ್ಮಿಗಳ ವೈವಿಧ್ಯ:** ಇದರಲ್ಲಿ ಅನೇಕ ಇವೆ. ಇದರಲ್ಲಿ ನಿರಾಶಾವಾದಕ್ಕೆ ಎಡೆಯಿಲ್ಲ. ಆಧುನಿಕ ಮನೋವಿಜ್ಞಾನಿಗಳು ಮನುಷ್ಯರಲ್ಲಿ ಕಂಡುಬರುವ ವೈವಿಧ್ಯಕ್ಕೆ ಅವರ ತಂದೆ ತಾಯಿಗಳ ವಂಶ ವಾಹಕಗಳು ವಾತಾವರಣವೂ ಮುಖ್ಯ ಕಾರಣವೆನ್ನುತ್ತಾರೆ. ಇದಕ್ಕೂ ಅನೇಕ ಉದಾಹರಣೆಗಳನ್ನು ನಾವು ಕಾಣಬಹುದು. ಅದರಂತೆಯೇ ಕರ್ಮದ ನೆರಳಿನಲ್ಲಿ ಉದ್ಯೋಗವಿರುತ್ತವೆ. ವ್ಯಕ್ತಿಯ ಆಧ್ಯಾತ್ಮಿಕ ಉನ್ನತಿಗೆ ಉದ್ಯೋಗ ಸಹಕಾರಿಯಾಗುವುದು. ಯಾವ ಉದ್ಯೋಗವೂ ಕೀಳಲ್ಲ. ಅದು ಸದ್ಗುಣದ ವಿಕಾಸಕ್ಕೆ ಆ ವ್ಯಕ್ತಿಗೆ ಅಗತ್ಯವಾಗಿರುತ್ತದೆ.

ಯಾವುದಾದರೂ ಒಂದು ಉದ್ಯೋಗವನ್ನು ಕೈಗೊಳ್ಳುವ ಮೊದಲು ಈ ಕೆಳಗಿನ ವಿಚಾರಗಳನ್ನು ಮನನ ಮಾಡಿರಿ ಎಂದು ಕೇಸೀ ಹೇಳುತ್ತಾದೆ.

1. ನಿಮ್ಮ ಧ್ಯೇಯ ಅಥವಾ ಗುರಿ ಯಾವುದೆಂಬುದನ್ನು ಸ್ಪಷ್ಟವಾಗಿ ತಿಳಿದುಕೊಳ್ಳಿರಿ.
2. ಸೇವಾ ದೃಷ್ಟಿಯನ್ನು ಎಂದೂ ಮರೆಯಬೇಡಿರಿ.
3. ನಿಮ್ಮಲ್ಲಿದ್ದ ಶಕ್ತಿ ಸಾಮರ್ಥ್ಯಗಳಿಂದ ಇತರರ ಏಳಿಗೆಯ ದೃಷ್ಟಿಯನ್ನಿಟ್ಟುಕೊಳ್ಳಿರಿ.
4. ಯಾವ ಕೆಲಸವನ್ನು ವೈಯಕ್ತಿಕ ಸ್ವಾರ್ಥದ ದೃಷ್ಟಿಯಿಂದಲೇ ನೋಡಬೇಡಿರಿ.
5. ನೀವು ನಡೆದು ಬಂದ ದಾರಿಯಲ್ಲಿ ಇತರರಿಗೂ ಹೋಗಲು ಬಿಡಿರಿ.
6. ಯಾವ ಮಹತ್ಕಾರ್ಯವೂ ಒಂದು ದಿನದಲ್ಲಿ ಆಗದು.

**ವಿವಾಹ ಮಕ್ಕಳು ಮತ್ತು ಸಾಂಸಾರಿಕ ಜೀವನ:** ಜೀವಿಯ ಬಹು ದೀರ್ಘ ಕಾಲದ ನೀಳ್ಗತೆಯಲ್ಲಿ ವಿವಾಹವು ಒಂದು ಉಪಕಥೆಯಾಗಿದೆ. ಗಂಡ-ಹೆಂಡತಿಯ ಸಂಬಂಧ, ತಂದೆ-ಮಕ್ಕಳ ಸಂಬಂಧ, ಆಸ್ತಿಕ-ನಾಸ್ತಿಕತ್ವದ ಎಳೆದಾಟ, ಮಕ್ಕಳಲ್ಲಿ ಬಂಧುರ ಬಾಂಧವ್ಯ ಹೀಗಿದ್ದರೂ ಆಕಸ್ಮಿಕಗಳೂ ಬಹಳಿವೆ. ಎಲ್ಲವೂ ಕರ್ಮ ನಿಯಂತ್ರಿತವಲ್ಲ. ಮನುಷ್ಯನಿಗೂ ಸ್ವಲ್ಪವೂ ಸ್ವಾತಂತ್ರ್ಯವಿಲ್ಲವೆಂದಲ್ಲ.

ಇದೆ. ಅದರಂತೆ ಸೃಷ್ಟಿಯಲ್ಲೂ ಆಕಸ್ಮಿಕಗಳು ನಡೆಯುತ್ತವೆ.

**ಬದುಕಿಗೊಂದು ಬೆಳಕು:** ಜೀವನವನ್ನು ಕುರಿತು ನಮ್ಮ ದೃಷ್ಟಿಕೋನ ಬದಲಿಸಿದಾಗ ನಮ್ಮ ಜೀವನವೇ ಬದಲಾಗುವದು. ಇದು ನಮ್ಮ ಸುತ್ತ ಮುತ್ತಲಿನ ವಸ್ತುಗಳ ವ್ಯಕ್ತಿಗಳ ಗುಣ ತಿಳಿದು ಬಂದಾಗ ಸಾಧ್ಯವಾಗುತ್ತದೆ.

ನಮ್ಮ ದೃಷ್ಟಿಕೋನ ಹೀಗಿರಬೇಕು ಎಂದು ಕೇಸೀ ಹೇಳುತ್ತಾನೆ.

1. ವಿಶ್ವ ನಿಯಾಮಕನಿದ್ದಾನೆ.
2. ಪ್ರತಿಯೊಂದು ಜೀವಿಯಲ್ಲಿ ದೈವೀ ಅಂಶವಿದೆ.
3. ಜೀವನಕ್ಕೆ ಅರ್ಥ ಉದ್ದೇಶಗಳಿವೆ.
4. ಮರಣದೊಂದಿಗೆ ಜೀವನ ನಾಶವಾಗದು.
5. ಜೀವನವನ್ನು ನಿಯಂತ್ರಿಸುವ ಸೂಕ್ಷ್ಮ ನಿಯಮವಿದೆ.
6. ಮನುಷ್ಯನಿಗೆ ಏನು ಬೇಕೋ ಅದು ದೊರೆತೇ ದೊರೆಯುತ್ತದೆ.
7. ವಿಶ್ವ ನಿಯಾಮಕನಿಗೂ ನಮಗೂ ಇರುವ ನೈಜ ಮತ್ತು ಶಾಶ್ವತ ಸಂಬಂಧವನ್ನು ತಿಳಿದು ಕೊಳ್ಳುವುದು ಜೀವನದ ಕೊನೆಯ ಗುರಿ.
8. ಬದುಕಿನಲ್ಲಿ ನಮ್ಮ ಆದರ್ಶಗಳನ್ನು ಆ ಹಿನ್ನೆಲೆಯಿಂದ ಸ್ಪಷ್ಟವಾಗಿ ನಿರ್ಧರಿಸಿಕೊಳ್ಳುವದು.
9. ಆ ಆದರ್ಶ ಅಥವಾ ಗುರಿಗಳ ಸಿದ್ಧಿಗಾಗಿ ಪ್ರಾಮಾಣಿಕ ಬುದ್ಧಿಯಿಂದ ದುಡಿಯುವುದು.
10. ತಮಸ್ಸನ್ನು ದೂರಗೊಳಿಸಿ ಉತ್ಸಾಹ, ಉದ್ಯಮ ಶೀಲತೆಗಳನ್ನು ಹೆಚ್ಚಿಸಿಕೊಳ್ಳುವುದು.
11. ಸಹನೆಯ ಪಾಠವನ್ನು ಕಲಿತು ನಮ್ಮ ಕೆಲಸ ಕಾರ್ಯಗಳ ಫಲವನ್ನು ಕುರಿತು ಅತ್ಯಾಸಕ್ತಿಯನ್ನು ತ್ಯಜಿಸುವುದು.
12. ಯಾವ ಸಮಸ್ಯೆಯನ್ನು ಎದುರಿಸದೆ ತಪ್ಪಿಸಿಕೊಳ್ಳುವ ಯೋಚನೆಯನ್ನು ಬಿಡುವದು. ಮನಸ್ಸು, ಮಾತು, ಕೃತಿಗಳಲ್ಲಿ ಇತರರ ಹಿತವನ್ನು ಸಾಧಿಸುವುದು.

ಕೇಸಿಯು ಹೇಳಿಕೆಗಳನ್ನು ನಂಬಬಹುದೇ? – ಎಂದು ಕೇಳಿದರೆ ನಂಬಬಹುದು ಎಂದೆನ್ನಬಹುದು. ಅದಕ್ಕೆ ಸಾಕಷ್ಟು ಕಾರಣಗಳನ್ನು ಕೊಡಬಹುದು. ಅವು ಹೀಗಿವೆ:–

1. ಸುಪ್ತ ಸ್ಥಿತಿಯಲ್ಲಿದ್ದುಕೊಂಡು ಕೊಟ್ಟ ವಿವರಗಳು ಸತ್ಯವಾಗಿವೆ.
2. ಉದ್ಯೋಗ ಕ್ಷೇತ್ರದಲ್ಲಿ ಸೂಚಿಸಿದ ಕ್ಷೇತ್ರಗಳೂ ಸತ್ಯವಾಗಿವೆ.
3. ಮಾನಸಿಕ ವೈಶಿಷ್ಟ್ಯ ಮತ್ತು ವೈಪರೀತ್ಯಗಳು ಸತ್ಯವಾಗಿವೆ.
4. ಪರಸ್ಪರ ವಿರೋಧದ ಹೇಳಿಕೆಗಳು ಕಂಡು ಬರುವುದಿಲ್ಲ.
5. ಪಥ್ಯ ಪಾನೀಯಗಳು, ವ್ಯಾಯಾಮಗಳೂ ಒಳ್ಳೆಯ ಪರಿಣಾಮಕಾರಕವಾಗಿವೆ.
6. ಅನೇಕ ಸಿದ್ಧಾಂತಗಳೂ ಯುಕ್ತಿ ಸಂಗತವೂ, ಸತ್ಯ ಸಂಗತವೂ ಆಗಿರುತ್ತವೆ. •



Printed and published by **M.H.BELGAUMKAR** on behalf of Lokashikshana Trust at "SAMYUKTA KARNATAKA PRESS", No.2, Residency Road, Bangalore-560 025. Managing Editor **K.SHAMA RAO.** Rep: Bombay: V. Satyamurthi. Phone: 5510502, Madras, S.K.Murti Phone: 414870. New Delhi: V.K.Chopra Phone:7114785.

*Registered with the Registrar of Newspapers for India under No.35/3957.*

KASTURI PRICE: Rs. 3.00 Reg. no. KRNG 43
Licence No. L2120/wpp No. 33